ಆರ್ಥರ್ ಇ. ಹರ್ಟ್ಜ್‌ಸ್ಲರ್

---

# ವೈದ್ಯನ ವೈಜಯಂತಿ

ಕನ್ನಡ ರೂಪ
'ಧನ್ವಂತ'

ಎಚ್. ಎಸ್. ರಾವ್ ಬ್ರದರ್ಸ್,
ಚಿಕ್ಕಪೇಟೆ, ಬೆಂಗಳೂರು ನಗರ

NOVEMBER 1956

# VAIDYANA VAIJAYANTI

A Kannada Version of
The Horse and Buggy Doctor
By ARTHUR E. HERTZLER, M.D.



Rendering in Kannada
**By 'DHANVANTA'**

Publishers :
**H. N. RAO & BROTHERS,**
Bangalore 2

# ಮುನ್ನುಡಿ

ಈ ಗೋಳ್ಕರೆಯ ಉಪನ್ಯಾಸ, ಬೇಸರ ಹಿಡಿಸುವುದಲ್ಲವೆಂದು ಮೊದಲೇ ತಿಳಿಸಬಯಸುತ್ತೇನೆ. ಈ ಲೇಖನವನ್ನು ಸರಳ ರೀತಿಯಲ್ಲಿ, ನಿಷ್ಕಳಂಕ ವಾಗಿ ಬರೆದಿದ್ದೇನೆ. ನನ್ನ ಕಿರಿಯ ಮಗಳು ತರಬೇತಾದ ದಾದಿ. ಅವಳಿಗೊಬ್ಬ ಮಗನಿದ್ದ. ಮುಂಜಾಗ್ರತೆಯಿಂದ ಅವನ ಆರೋಗ್ಯರಕ್ಷಣೆ ಮಾಡಲು ನನ್ನ ವೈದ್ಯಕೀಯ ಆರಂಭಜೀವನವನ್ನು ಅವಳು ತಿಳಿಯಲಪೇಕ್ಷಿಸಿದಳು. ಈ ಅಪೇಕ್ಷೆಯೇ ಈ ಲೇಖನದ ಕಾರಣ.

ವಿಚಾರವನ್ನು ಮುಂದಾಗಿ ನನ್ನ ಪ್ರಕಾಶನಮಿತ್ರನೊಬ್ಬನಿಗೆ ಸೂಚಿಸ ಬೇಕಾಗಿ ಬಂತು. ಇನ್ನೂ ಮಹತ್ವಪೂರಿತವಾದ ಬರೆವಣಿಗೆಯೊಂದನ್ನು ಮುಗಿಸಲು ತಡವಾದುದಕ್ಕೆ ಇದನ್ನೇ ನೆವ ಹೂಡಿದೆ. ಲೇಖನ ವಿಚಾರವನ್ನು ಕೇಳಿ ತಿಳಿದುಕೊಂಡ ಪ್ರಕಾಶನಮಿತ್ರ ಅವನ ವೃತ್ತಿಗೆ ಸಹಜವಾದ ಆಕರ್ಷಕ ವ್ಯವಹಾರವನ್ನು ಮುಂದೊಡ್ಡಿದ. 'ನಾನೇನು ಬರೆಯುತ್ತಿದ್ದೇನೆ' ಎಂಬುದನ್ನು ನೋಡಬಯಸಿದ. ಲೇಖನ ಸಾರಾಂಶವು ಮುಖ್ಯವಾಗಿ ಹಳೆಯಕಾಲದ ಗ್ರಾಮವೈದ್ಯನ ಜೀವನಚಿತ್ರವೇ ಆಗಿರಬೇಕೆಂದೂ, ಅದು ನನ್ನಂಥಹವನಿಂದಲೇ ಆಗಬೇಕೆಂದೂ ವಾದಿಸಿದ. ಸರಿ; ಒಪ್ಪಿಗೆಯಾಯಿತು. ಹೀಗೆ ಒಪ್ಪಿಕೊಂಡು ಬರೆದು ಮುಗಿಸಿದೆ.

ನನ್ನ ಸ್ವಂತ ಅನುಭವ, ಅಭಿಪ್ರಾಯಗಳನ್ನು ನನ್ನ ಕಥೆಯೆಂದೇ ಈ ಅಧ್ಯಾಯಗಳಲ್ಲಿ ಬರೆಯಲು ಆಗಲಿಲ್ಲ. ಒಬ್ಬನು ತನ್ನ ಜೀವಿತದ ಏರಿಳಿತ ದಲ್ಲಿದ್ದಾಗಲೇ ಅವನು ತನ್ನ ಅನುಭವಾಂಶವನ್ನು ಬರೆಪಲ್ಲಿ ಅದು ಆಕಾಲಿಕ ಬರೆವಣಿಗೆಯೇ ಆಗುವುದು. ಇದೇ ಅನುಭವಸಾರವನ್ನು ಕೆಲವು ವ್ಯತ್ಯಾಸಗ ಳೊಂದಿಗೆ ಅನೇಕ ಗ್ರಾಮವೈದ್ಯರು ಬರೆದಿರಬಹುದು. ಈ ಕಾರಣದಿಂದ ನನ್ನ

ಈ ಲೇಖನ ಆತ್ಮಕಥೆಯಲ್ಲ. ಇದು ನನ್ನ ಜೀವಿತಕಾಲದ ಚಾರಿತ್ರಿಕ ಅಂಶ ವೆನ್ನಬಹುದು. ವಿಷಯವನ್ನು ವಿಶದೀಕರಿಸಲು ಉದಹರಿಸಿರುವ ಅಂಶಗಳು ಮಾತ್ರ ನನ್ನವೇ. ಇಲ್ಲಿ ಸೂಚಿಸಿರುವ ಕಾರ್ಯಘಟನೆ, ವಸ್ತುಸ್ಥಿತಿ ಸರ್ವ ಸಾಧಾರಣವಾದದ್ದು. ಈ ಲೇಖನದಲ್ಲಿ ಬರೆದಿರುವುದೆಲ್ಲವೂ ನನ್ನ ಸ್ವಕೀಯ ಅಭಿಪ್ರಾಯವಲ್ಲ. ಈ ಅಭಿಪ್ರಾಯಗಳನ್ನು ಶಾಸ್ತ್ರಾಧಾರಗಳ ಮೇಲೆ ದೃಢ ಪಡಿಸಬಹುದು. ವೈದ್ಯನ ಯೋಚನೆ ಒಂದಾದರೆ ಅವನು ಕಾಣುವ ಅನು ಭವವೇ ಮತ್ತೊಂದು. ಜೀವನ ತತ್ವದಲ್ಲಿ ಕಾಣುವುದು ಅನುಭವವೊಂದೇ ಅಲ್ಲ. ವೈದ್ಯನ ಕಾರ್ಯಕ್ಷೇತ್ರ ಹೆಚ್ಚಿದಂತೆಲ್ಲಾ ಅನುಭವವು ವಿಸ್ತರಿಸುತ್ತಾ ಹೋಗುವಂತೆ, ಅದು ಅನುವಂಶಿಕವಾಗಿಯೂ ಬೆಳೆಯುವುದು.

**ಆರ್ಥರ್ ಇ. ಹರ್ಟ್ಜ್‌ಸ್ಲರ್.**



೧

“ದೇವರೇ! ಈ ಗಂಟಲು ರೋಗದಿಂದ (ಡಿಫ್ತೀರಿಯಾ) ನಮ್ಮನ್ನು ಪಾರುಮಾಡು” ಎಂದು, ನನ್ನ ತಂದೆ ಮುಂಜಾನೆ ಪ್ರಾರ್ಥನೆಯ ವೇಳೆಯಲ್ಲಿ, ಈ ಅಂಟುರೋಗದ ಘೋರವಿಪತ್ತಿನ ಮೊದಲಾರಂಭದಲ್ಲಿ ಪ್ರಾರ್ಥಿಸಿಕೊಂಡರು. ಆ ದಿನ, ನನ್ನ ಮಾತಾಪಿತೃಗಳು ಬೆಳಗಿನ ಊಟವನ್ನು ಮಾಡಲಿಲ್ಲ. ಕಿರಿಯರಾಗಿದ್ದ ನಮಗೆ, “ಇವರೇಕೆ ಊಟ ಮಾಡಲಿಲ್ಲ?” ಎಂದು ತಿಳಿಯಲಿಲ್ಲ. ನಾವೂ ನಮ್ಮ ಮುಂದಿದ್ದ ಅಂಬಲಿ ತಟ್ಟೆಯನ್ನು ಮುಟ್ಟಲಿಲ್ಲ. ನಿತ್ಯವೂ ನಾವು ನಮ್ಮ ಮುಂದಿಡುತ್ತಿದ್ದ ಆ ಅಂಬಲಿ ತಟ್ಟೆಯನ್ನು ಬಹು ಬೇಗನೆ ಬರಿದು ಮಾಡಿಬಿಡುತ್ತಿದ್ದೆವು. ಆ ದಿನ ಭಾನುವಾರ. ತಂದೆಯವರು ಉಡುಪು ಧರಿಸಿಕೊಂಡು ಮನೆಯಿಂದ ಹೊರಟವರು, ಬೇಗನೆ ಎಲ್ಲಿಗೋ ಹೊರಟು ಬಿಟ್ಟರು. ದುಃಖದಿಂದ ಕೂಡಿದ ತಾಯಿ, ಅಲ್ಲಿಂದಿಲ್ಲಿಗೆ ಓಡಾಡುತ್ತಾ ಕೈ ಕೈ ಹಿಸುಕಿಕೊಳ್ಳುತ್ತಾ, ಕಿಟಕಿಯಾಚೆ ಬರಿದಾಗಿದ್ದ ರಸ್ತೆಯ ಕಡೆಗೆ ನೋಡುತ್ತಿದ್ದಳು. ಹೀಗೇಕೆ ತಾಯಿ ನೋಡುತ್ತಿದ್ದಾರೆಂದು ತಿಳಿಯದೆ, ನಾನೂ ಶೂನ್ಯವಾಗಿದ್ದ ರಸ್ತೆಯಕಡೆಗೆ ನೋಡುತ್ತಿದ್ದೆ. ಕೆಲವು ಗಂಟೆಗಳಾದ ಮೇಲೆ, ಕುದುರೆ ಹೂಡಿದ ಗಾಡಿಗಳ ತಂಡವೊಂದು ರಸ್ತೆಯಲ್ಲಿ ಬರುತ್ತಿದ್ದುದನ್ನು ನೋಡಿದೆ. ಈ ವಿಲಕ್ಷಣ ಗಾಡಿಗಳ ಮುಂದಾಗಿ ನಮ್ಮ ತಂದೆ ಅಪರಿಚಿತರೊಂದಿಗೆ ಬರುತ್ತಿದ್ದರು. ತಂದೆ ಕುಳಿತಿದ್ದ ಉಳುಮೆಗಾಡಿಯಲ್ಲಿ ಮೂರು ಉದ್ದನೆಯ ಪೆಟ್ಟಿಗೆಗಳಿದ್ದುವು. ಉಳುಮೆಗಾಡಿಗೆ ಹಿಂದೆ ಬೇರೆಬೇರೆ ತರಹದ ಗಾಡಿಗಳೂ ಬರುತ್ತಿದ್ದುವು. ಅನೇಕರು ಕುದುರೆಯೇರಿ ಬರುತ್ತಿದ್ದರು. “ಈ ವಿಲಕ್ಷಣ ಗಾಡಿಗಳು ಯಾವುವು? ಎಲ್ಲಿಂದ ಬರುತ್ತಿವೆ?” ಎಂದು ತಾಯಿಯನ್ನು ಕೇಳಿದೆ. ತಾಯಿ ನನ್ನೀ ಪ್ರಶ್ನೆಗೆ ಉತ್ತರವೀಯಲಿಲ್ಲ. ಬಹಳ ಹೊತ್ತಾದಮೇಲೆ ಮನೆಗೆ ಹಿಂದಿರುಗಿ ಬಂದ ತಂದೆಯವರು ಬಾಗಿಲ ಹತ್ತಿರ ಬಂದಾಗಲೇ ಗೂಢವಾಗಿ, “ಇನ್ನು ಐದು ಮಂದಿ!” ಎಂದು ನುಡಿದರು. ಕುಸಿದು ಕುರ್ಚಿಯ ಮೇಲೆ ಕುಳಿತ ತಾಯಿ ಕರವಸ್ತ್ರದಿಂದ ತನ್ನ ಮುಖವನ್ನು ಮುಚ್ಚಿಕೊಂಡಳು.

ಕೆಲವು ದಿನಗಳ ನಂತರ, ಉಳುಮೆ ಗಾಡಿಯಲ್ಲಿದ್ದ ಉದ್ದನೆಯ ಹೆಣದ ಪೆಟ್ಟಿಗೆಯಲ್ಲಿ ನನ್ನ ಒಡನಾಡುವ ಮೂರು ಗೆಳೆಯರ ದೇಹವಿದೆಯೆಂದು ನನಗೆ ತಿಳಿಯಿತು. ಒಂದು ಸಂಸಾರಕ್ಕೆ ಸೇರಿದ ಒಂಬತ್ತು ಜನರಲ್ಲಿ ಎಂಟು ಜನ, ಹತ್ತು ದಿನದೊಳಗೆ ಈ ಅಂಟುರೋಗಕ್ಕೆ ಆಹುತಿಯಾದರು ಎಂದು ತಿಳಿದು ಬಂತು.

ಬೇರೆ ಬೇರೆ ಸಂಸಾರದಲ್ಲಿ ಈ ಅಂಟುರೋಗದ ಉಪದ್ರವವು ಸ್ವಲ್ಪ ಕಡಿಮೆಯೇ ಎಂದು ಹೇಳಬಹುದು. ಕೆಲವು ಮಸಣಗಳಲ್ಲಿ ಒಂದೆರಡು ಮರಗಳಲ್ಲಿಯೇ ಐದಾರು ಗೋರಿಗಳನ್ನು ಕಟ್ಟಲಾಯಿತು. ನನ್ನ ಪೂರ್ವ ವೈದ್ಯ ವೃತ್ತಿ ಜೀವನದಲ್ಲಿ ಒಮ್ಮೆ, ಒಂದು ಸಂಸಾರದ ಚಾರಿತ್ರ್ಯವನ್ನು ಪರಿಶೀಲಿಸಿದೆ. ಬಾಲ್ಯದಲ್ಲಿಯೇ ಈ ಸಂಸಾರಕ್ಕೆ ಸೇರಿದ್ದ ಒಂದು ಮಗು ಅಂಟುರೋಗಗಳಲ್ಲೊಂದಕ್ಕೆ ತುತ್ತಾಗಿ ತೀರಿಕೊಂಡಿತ್ತು. ಆ ಅಂಟುರೋಗಗಳಲ್ಲಿ ಮುಖ್ಯವಾಗಿ ಗಂಟಲುರೋಗವೇ ಆಗಿತ್ತು.

ಭಯಂಕರವಾದ ಗಂಟಲು ಅಂಟುರೋಗವು ಪ್ರಬಲವಾಗುತ್ತಿರುವಾಗ, ಅದು ಅಖಿಲ ಮಾನವ ಕುಲಕ್ಕೇ ಭೀತಿಯನ್ನುಂಟುಮಾಡುತ್ತದೆ. ಎದುರಿಸಲಾಗದ ಮತ್ತು ಅಜ್ಞಾತವಾದ ಯಾವುದೋ ಒಂದು ಗಂಡಾಂತರವು ಬಂದೊದಗಿದಾಗ ಜನರು ಪರಮಾತ್ಮನನ್ನು ಮರೆಹೋಗುತ್ತಾರೆ. ಅಂತಹ ದುರ್ದಿನಗಳಲ್ಲಿ "ಕಾಪಾಡು! ರಕ್ಷಿಸು!" ಎಂದು ಪ್ರಾರ್ಥಿಸುತ್ತಿರುವ ಜನರ ಕೂಗು ಆಕಾಶವನ್ನು ತುಂಬಿಕೊಳ್ಳುವುದು. ವಿಜ್ಞಾನದಲ್ಲಾಗಲೀ ವೈದ್ಯ ಶಾಸ್ತ್ರದಲ್ಲಾಗಲೀ ಈ ಅಂಟುರೋಗದ ಉಲ್ಬಣೆಗೆ ಪರಿಹಾರವೇನಿದೆಯೆಂದು ಯಾರೂ ತಿಳಿಯುವ ಗೋಜಿಗೆ ಹೋಗಲಿಲ್ಲ. ಏಕೆಂದರೆ, ಆಗ ವಿಜ್ಞಾನ-ವಿದ್ಯೆ ಅಷ್ಟು ಪ್ರಾಮುಖ್ಯತೆಯನ್ನು ಗಳಿಸಿಕೊಂಡಿರಲಿಲ್ಲ. ಪ್ರಾರ್ಥನೆಗಳೆಲ್ಲಾ ಹುರಳಿಲ್ಲದ ಪ್ರಾರ್ಥನೆಗಳಾಗಿದ್ದುವು. ಗಂಟಲುರೋಗ ನಿವಾರಣೆಗೆ ವೈದ್ಯರಿಗೊಂದು ಉಪಾಯವು ಹೊಳೆಯಲಿ! ಎಂದು ಯಾರೂ ದೈವವನ್ನು ಪ್ರಾರ್ಥಿಸಿ ಬೇಡಲಿಲ್ಲ. ಈ ಬಗೆಯನ್ನು ಕುರಿತು ಯಾರೂ ಆಗ ಯೋಚಿಸಲೂ ಇಲ್ಲ.

ವೈದ್ಯಕೀಯ ಶಾಸ್ತ್ರ ಎಷ್ಟರಮಟ್ಟಿಗೆ ಮುಂದುವರಿದಿದೆ ಎಂಬುದನ್ನು ತಿಳಿಯುವುದಕ್ಕೋಸ್ಕರ, ನಾವೀಗ ಐವತ್ತು ವರ್ಷಗಳ ಹಿಂದೆ ಗಂಟಲು ರೋಗಕ್ಕೆ ತುತ್ತಾಗಿದ್ದ ಮಗುವಿನ ಅವಸ್ಥೆಯನ್ನು ಚಿತ್ರಿಸೋಣ. ಗಂಟಲು

ರೋಗಕ್ಕೆ ತುತ್ತಾಗಿದ್ದ ಮಗು, ಮಂಕಾಗಿ, ನಿರುತ್ಸಾಹಗೊಂಡು ಉದಾಸೀನ ವಾಗಿರುತ್ತದೆ. ಜ್ವರದಿಂದ ಬಳಲುತ್ತಿರುವಹಾಗೆ ಕಾಣುತ್ತದೆ. ಗ್ರಂಥಿಯು ಶೀತದಿಂದ ಊದಿಕೊಂಡಾಗ ಕಂಡುಬರುವಂತಹ ಸ್ಥಳಿತ ಲಕ್ಷಣಗಳು, ಈ ಗಂಟಲು ರೋಗಕ್ಕೆ ತುತ್ತಾದಾಗ ಕಂಡುಬರುವುದಿಲ್ಲವಾದ್ದರಿಂದ, ಈ ರೋಗಕ್ಕೆ ತುತ್ತಾದ ಮಗು ತನ್ನ ಗಂಟಲಿನಲ್ಲಿ ಹುಣ್ಣಾಗಿದೆ ಎಂದು ಹೇಳುವುದೂ ಅನು ಮಾನ. ಗಂಟಲಿನಲ್ಲಿಯ ಶ್ಲೇಷ್ಮ ಚರ್ಮವು ಉದ್ದೀಪನ ಹೊಂದಿ, ಸಾಧಾರಣ ವಾಗಿ ಗ್ರಂಥಿಗಳನ್ನು ಆವರಿಸಿ ಗಂಟಲ ನಾಳದ ಒಳಗೂ ಹಬ್ಬಿ ಮೂಗಿನವರೆಗೂ ವ್ಯಾಪಿಸುವುದು. ಆಗ ನಾಡಿ ವೇಗವಾಗಿ ಏರುತ್ತ ಏರುತ್ತ ಬಂದು, ವೇಗ ವನ್ನು ಗುರಿತಿಸಲಾಗದಷ್ಟು ಮೀರುವುದು. ನಾಸಿಕದ ನಿವರದವರೆಗೂ ಶ್ಲೇಷ್ಮ ಚರ್ಮ ವಿಸ್ತರಿಸಿ ಬೆಳೆದು, ಶ್ವಾಸೋಚ್ಛ್ವಾಸಕ್ಕೆ ಅಡಚಣೆಯುಂಟುಮಾಡು ವುದು. ಶ್ವಾಸೋಚ್ಛ್ವಾಸ ಬಂಧಿಸಿತೆಂದರೆ ರೋಗಿ ರಕ್ತಕೆಟ್ಟು ಸಾಯುತ್ತಾನೆ ಖಂಡಿತ. ರೋಗ ಜನ್ಯ ವಿಷಕ್ರಿಮಿಗಳು ರಕ್ತದಲ್ಲಿ ನಂಜನ್ನುಂಟುಮಾಡಿ ರಕ್ತ ವನ್ನು ಕೆಡಿಸುತ್ತವೆ.

ಈ ಅಂಟುರೋಗದ ಇನ್ನೊಂದು ಬಗೆಯನ್ನು ತಿಳಿಯೋಣ–ಕಂಠನಾಳ ದಿಂದ ಶ್ಲೇಷ್ಮಚರ್ಮ ಹಬ್ಬಿ ಬೆಳೆಯುವುದುಂಟು. ಚರ್ಮದ ಪರೆ ಅಂಟು ಅಂಟಾಗಿ ಶ್ವಾಸನಾಳವನ್ನು ಮುಚ್ಚಿ ಬೆಳೆಯುವುದುಂಟು. ಈ ಸನ್ನಿವೇಶದಲ್ಲಿ ಜ್ವರಪೀಡಿತ ಮಗುವಿನ ಸ್ಮೃತಿ ತಪ್ಪುವುದು. ಶ್ವಾಸನಾಳವು ತುಂಬಿ ಮುಚ್ಚಿ ಕೊಳ್ಳುತ್ತ ಬಂದಂತೆ ಮಗುವಿನ ಮೈಬಣ್ಣ ನೀಲವಾಗುತ್ತಾ ಬರುವುದು. ಆಗ ಅದು ಉಸಿರು ಬಿಡಲಾರದೆ ಸಂಕಟದಿಂದ ಅಳುವುದು. ಅಚ್ಚ ನೀಲಿಬಣ್ಣದಿಂದ ಕೂಡಿರುವ ಮಗುವಿನ ಕಣ್ಣುಗಳು ಭಯಂಕರವಾಗಿ ಉಬ್ಬಿಕೊಂಡಿರುವುದು. ಅಲ್ಲದೆ ಈ ಕಣ್ಣುಗಳನ್ನು ನೋಡುವುದಕ್ಕಾಗುವುದಿಲ್ಲ. ಶಿರ ಮತ್ತು ಭುಜಗಳು ಹಿಂದಕ್ಕೆ ಬಾಗಿಕೊಂಡಿರುವುದು. ಕೈಗಳಲ್ಲಿ ನರಗಳ ಎಳೆತದಿಂದ ನೋವು ಉಂಟಾಗುವುದು. ಮಗುವಿನ ದೇಹವಿಡೀ ಸಡಿಲವಾಗುವುದಲ್ಲದೆ, ಮುಖ ದಲ್ಲಿ ಜೀವಕಳೆಯೇ ಕಾಣಿಸುವುದಿಲ್ಲ. ಆಗ ಮಗು ಸತ್ತಂತೆಯೇ. ಒಂದು ರಾತ್ರಿ ಇಂತಹ ಭಯಾನಕ ಸನ್ನಿವೇಶದಲ್ಲಿ ಕೊನೆಯವರೆಗೂ ನಾನು ಪರೀಕ್ಷಿ ಸುತ್ತಾ ನಿಲ್ಲಬೇಕಾಯಿತು.

ಹಿಂದಿನ ಕಾಲದಲ್ಲಿ ಹೆಚ್ಚು ಜನರನ್ನು ಆಹುತಿ ತೆಗೆದುಕೊಳ್ಳುತ್ತಿದ್ದ ರೋಗಗಳಲ್ಲಿ ಗಂಟಲು ರೋಗವೊಂದೇ ಮುಖ್ಯವಾಗಿರಲಿಲ್ಲ. ಕೆಂಜ್ವರ ಎಷ್ಟೋ ಮಕ್ಕಳನ್ನು ಕೊಂದು, ನೆರೆಹೊರೆಯಲ್ಲೆಲ್ಲಾ ನಾಶಮಾಡುತ್ತಿತ್ತು. ಅದು ನೇರ ವಾಗಿಯಾಗಲಿ ಪರ್ಯಾಯದಿಂದಾಗಲಿ ಮೂತ್ರಪಿಂಡವನ್ನು ತೊಡಕುಪಡಿಸಿ ಅಥವಾ ಮಧ್ಯ ಕಿವಿಗಳ ಮೂಲಕ ಮೆದುಳು ಸೇರಿ ಸಾಂಕ್ರಾಮಿಕವಾಗಿ ಹಬ್ಬಿಸಿ ಸಾಯುವಂತೆ ಮಾಡುತ್ತಿತ್ತು. ಗಂಟಲು ರೋಗಕ್ಕಿಂತಲೂ ಕೆಂಜ್ವರ ಕಡಿಮೆ ಅಪಾಯಕಾರಿ. ಇದಲ್ಲದೆ ದಡಾರ ಬೇರೆ, ಆದಷ್ಟು ಎಳೆಯ ಮಕ್ಕ ಳನ್ನು ತನ್ನಡಿಗೆ ಎಳೆಯುತ್ತಿತ್ತು.

ಶಿಡುಬು ಏಳುವುದು ಎಂಬುದೇ ಒಂದು ಅಂಟುರೋಗವೆಂದು ಹೆಸರು ಗೊಂಡಿತ್ತು. ಅದರ ನಿವಾರಣೆಗೆ ವೈದ್ಯಸಮಾಜವು ಉಪಾಯ ಕಂಡು ಕೊಂಡಿತ್ತು. ಆಗ ದಾಕುಹಾಕುವ (ಶಿಡುಬು ಚುಚ್ಚುವ) ಪದ್ಧತಿಯಿತ್ತು. ಈ ಪದ್ಧತಿಯೂ ಒರಟು ರೀತಿಯಲ್ಲಿ ನಡೆದಿತ್ತು. ಈ ಒರಟು ಪ್ರಯೋಗದಿಂದ ಸಾಂಕ್ರಾಮಿಕ ಜಾಡ್ಯವು ಗುಡ್ಡೆ ಹಾಕಿದಂತೆ ರೊಚ್ಚೆದ್ದು ಎಲ್ಲೆಲ್ಲಿಯೂ ಹಬ್ಬಿ ಹರಡುತ್ತಿತ್ತು.

ಸರ್ವಸಾಧಾರಣವೆನಿಸಿದ ಅರಿಷ್ಟರೋಗ–ಕ್ಷಯರೋಗ–ವ್ಯಾಧಿಗೆ ಕಾರಣ ವೈಜ್ಞಾನಿಕರಿಗೆ ಸಾಕಷ್ಟು ಆಗ ತಿಳಿದಿರಲಿಲ್ಲ. ಕ್ಷಯರೋಗ–ದೇಹ ಕಾರಣ ಪ್ರಕೃತಿರೋಗ, ಸ್ಥಾನಿಕ ಮತ್ತು ವಿಕಾರ ವೈಲಕ್ಷಣ್ಯವೇ ಈ ರೋಗಕ್ಕೆ ಕಾರಣವೆಂದು ಆಗ ಪರಿಗಣಿಸಲಾಗಿತ್ತು.

ಜನರ ಅಭಿಪ್ರಾಯ, ಈ ಪಕ್ಷಪಾತ, ತಪ್ಪಿಸಲಾಗದ ಮಾತಾಗಿತ್ತು. ಸಾಂ ಕ್ರಾಮಿಕ ರೋಗಗಳು ತೋರುವುದು ದೈವಪ್ರೇರಣೆಯಿಂದ, ದೈವಿಕ ಚಿಹ್ನೆಯೇ ಇದು ಎಂದು ಜನರು ನಂಬಿದ್ದರು. ಅಜ್ಞಾನ, ಅವಿದ್ಯೆಯೊಂದಿಗೆ ಮೂಢ ನಂಬಿಕೆ ಬೇರೆ ಕೂಡಿಕೊಂಡಿತ್ತು. ಜನರು ಒಂದು ವ್ಯಕ್ತಿಯಿಂದ ಮತ್ತೊಂದು ವ್ಯಕ್ತಿಗೆ ಈ ಕ್ಷಯರೋಗ ಅಂಟುವುದು, ಅಂದುಕೊಂಡರೂ ಈ ರೋಗವು ಅಂಟುರೋಗವಲ್ಲ ಎಂದು ಭಾವಿಸಿದ್ದರು. ನಮ್ಮ ಪಕ್ಕದ ಸಾಂಸಾರಿಕ ವರ್ಗ ದಲ್ಲಿ ನಡೆದ ವಂಶಾನುಪರಿ ಗೋಳನ್ನು ವಿವರಿಸುವೆ—ಈ ಸಂಸಾರದಲ್ಲಿ ಎಂಟು ವರ್ಷದ ಅವಧಿಯಲ್ಲಿ ಒಂಬತ್ತು ಜನಗಳ ಪೈಕಿ ಎಂಟುಜನ ಕ್ಷಯರೋಗಕ್ಕೆ ತುತ್ತಾದರು. ಒಮ್ಮೆ ನಾನು, ತಂದೆಯವರೊಡನೆ ಈ ಮನೆಗೆ ಹೋಗಿದ್ದೆ.

ಹಾಸಿಗೆ ಹಿಡಿದು ಮಲಗಿದ್ದ ತಾಯಿ ಮತ್ತು ಮೂವರು ಮಕ್ಕಳು ಕ್ಷಯ ರೋಗದ ಅಂತ್ಯಾವಸ್ಥೆಯಲ್ಲಿದ್ದರು. ಸಣ್ಣ ಕೋಣೆಯಲ್ಲಿ ನಾಲ್ವರು ರೋಗಿ ಗಳನ್ನು ಹಂಜರ ಕವಿಚಿದಂತೆ ಅಡಗಿಸಿ ಮಲಗಿಸಿದ್ದರು. ರೋಗಿಗಳನ್ನು ಹೀಗೆ ಮಲಗಿಸಿ, ಇತರರು ಮನಬಂದಂತೆ ಎಲ್ಲೆಲ್ಲಿಯೋ ಅಲೆಯುತ್ತಿದ್ದರು.

ಹಿಂದೆ ರೋಗಲಕ್ಷಣವನ್ನು, ರೋಗದ ವಿಷಕ್ರಿಮಿಗಳು ಹಬ್ಬಿ ಹರಡು ತ್ತಿದ್ದುದನ್ನು ತಡೆಗಟ್ಟುವ ಸಾಧನೋಪಾಯಕ್ಕೆ ಜನರು ಕಿವಿಗೊಡುತ್ತಿರಲಿಲ್ಲ. ಜ್ವರಪ್ರಮಾಣವನ್ನು ಉಷ್ಣಮಾಪಕಯಂತ್ರದಿಂದ (ಥರ್ಮಾ ಮೀಟರ್) ಅಳೆದುನೋಡಿ ತಿಳಿಯುತ್ತಿರಲಿಲ್ಲ. ಋತುಕಾಲ ವಿಪರ್ಯಾಸ, ವಾಯು ಗುಣದ ವೈಪರೀತ್ಯ, ಅಲ್ಲದೆ ಮಾನವ ಪ್ರಯತ್ನಕ್ಕೆ ಮೀರಿದ ಯಾವುದೋ ಒಂದು ಈ ರೋಗಕ್ಕೆ ಕಾರಣವೆಂದು ಜನರು ತಿಳಿದಿದ್ದರು.

ಸಾಂಕ್ರಾಮಿಕ ರೋಗ ಹಾಗಿರಲಿ, ಮಿಕ್ಕ ಸಾಧಾರಣ ರೋಗಗಳೂ ಅನು ಭವಶಾಲಿಗಳಾದ ವೈದ್ಯರಿಂದ ಸುಧಾರಿಸಲಾಗುತ್ತಿರಲಿಲ್ಲ. ರೋಗಾಂತ್ಯದಲ್ಲಿ ಕಾಣಿಸಿಕೊಳ್ಳುವ ಉರಿ, ಉರಿಬಾವು, ಅತ್ಯುಲ್ಬಣಗೊಳ್ಳುವವರೆವಿಗೂ ಆದು ಉದರ ಬೇನೆಯೆ ಅಥವಾ ಸಂಪರ್ಕದೋಷವೆ ಎಂದು ತಿಳಿಯುವ ಗೋಜಿಗೆ ಹೋಗುತ್ತಿರಲಿಲ್ಲ. ಹಿಂದೆ ಶವಪರೀಕ್ಷಣ, ಸವಿಮರ್ಶ ಖಂಡನೆಗೆ ಅನುಮತಿ ಯಿರಲಿಲ್ಲ. ಅವಕಾಶವೂಯಿರಲಿಲ್ಲ. ಏಕೆಂದರೆ, ಅದು ಅತ್ಯಾಚಾರವೆಂದೂ, ದೈವದ್ರೋಹವೆಂದೂ ಜನರು ತಿಳಿಯುತ್ತಿದ್ದರು.

ಮಂಜಿನಹನಿ ತಳೆದಂತಹ ದಿವ್ಯಸ್ವರ್ಗದ ಬಾಗಿಲನ್ನು ಪ್ರವೇಶಿಸುವಾಗ ಯಾರೂ ಅಂತರ್ ಅವಯವ ಭಾಗಗಳನ್ನು ಹೊತ್ತುಕೊಂಡು ಹೋಗಲು ಸಿದ್ಧ ರಿರಲಿಲ್ಲ. ಹೀಗಾಗಿ ರೋಗಲಕ್ಷಣವೇನೆಂದು ತಿಳಿಯಲು ಯಾವ ವೈದ್ಯರಿಗೂ ಆಗುತ್ತಿರಲಿಲ್ಲ. ರೋಗಿ ಸತ್ತನಂತರವೂ ಯಾವ ರೋಗಾವಸ್ಥೆಯಿಂದ ಸತ್ತ ನೆಂದು ತಿಳಿಯುವುದಕ್ಕೂ ಸಾಧ್ಯವಿರಲಿಲ್ಲ. ವೈದ್ಯರು ತಪ್ಪು ಹಾದಿ ಹಿಡಿದೇ ಅನುಸರಿಸುತ್ತಿದ್ದರು. ಈ ತಪ್ಪು ತಲೆಮಾರು ಮಾತ್ರವಲ್ಲದೆ, ಶತಶತಮಾನ ಗಳವರೆಗೂ ನಡೆಯುತ್ತಲೇಯಿತ್ತು.

ರೋಗ ಹತ್ತಿದ ಅಥವಾ ಅಪಾಯಗೊಂಡಭಾಗವನ್ನು ಶಸ್ತ್ರಕ್ರಿಯೆಯಿಂದ ಗುಣಕಾಣಿಸುವ ಪದ್ಧತಿ ಆಗಿನ್ನೂ ಗ್ರಾಮಾಂತರದ ಕಡೆ ಆಚರಣೆಗೆ ಬಂದಿರ ಲಿಲ್ಲ. ಆಗಿನ ಕಾಲದಲ್ಲಿ ಶಸ್ತ್ರವೈದ್ಯರು, ಪ್ರಿನ್ಸ್ ಆಲ್ಬರ್ಟ್ ಕೋಟು ಧರಿ

ಸಿಯೇ ಶಸ್ತ್ರಕ್ರಿಯೆ ನಡೆಸುವ ಪದ್ಧತಿಯಿಟ್ಟುಕೊಂಡಿದ್ದರು. ಈ ಮಾದರಿಯ ಕೋಟು ವೈದ್ಯಕೀಯ ವೃತ್ತಿಗೆ ತಕ್ಕುದೆಂದು ಆಗ ತಿಳಿಯಲಾಗಿತ್ತು. ತೋಳುಗಳ ಮಡಿಕೆಯನ್ನು ಹೆಚ್ಚಾಗಿ ಮಡಿಸಿಕೊಳ್ಳುತ್ತಿದ್ದರು. ನಾನು ಮೊದಲನೆಯ ಶಸ್ತ್ರಕ್ರಿಯೆಯೊಂದು ನಡೆದ ಸಮಯದಲ್ಲಿ ಹಾಜರಿದ್ದೆ. ವೈದ್ಯನು ಸೂಜಿಗೆ ಸಿಲ್ಕುದಾರವನ್ನು ಪೋಣಿಸಿ ಸೂಜಿಗೊನೆ ಬೇಕಾದಾಗ ತನ್ನ ಕೈಗೆ ಬೇಗ ಸಿಕ್ಕಲಿ ಎಂದು ತನ್ನ ಅಂಗಿಯ ಹಿಮ್ಮಡಿಸಿದ ಎದೆಯ ಭಾಗಕ್ಕೆ ಅದನ್ನು ಚುಚ್ಚಿಕೊಂಡಿರುತ್ತಿದ್ದ. ರೋಗ ಭಾಗವನ್ನು ಕೊಯ್ಯುವಾಗ ಉಪಯೋಗಿಸುವ ಕತ್ತಿಯನ್ನು ಉಪಯೋಗಿಸದಿರುವಾಗ ತನ್ನ ಹಲ್ಲಿನಲ್ಲಿ ಕಚ್ಚಿಕೊಂಡಿರುತ್ತಿದ್ದ.

ಗಾಯಗಳೆಲ್ಲ ಕೀವುಕಟ್ಟಿ ತುಂಬಿಕೊಳ್ಳುತಿದ್ದುವೇಕೆಂದೂ ಸುಲಭವಾಗಿ ಈಗ ಅರ್ಥವಾಗುವುದು. ನೋವು, ಬಾಧೆ ಎಂದು ಈಗ ಸುಲಭ ಚಿಕಿತ್ಸೆ ಪಡೆಯುವುದೆಲ್ಲಾ ಆಗ ಮಹತ್ವದ್ದೆಂದೂ ಗಣಿಸಲ್ಪಟ್ಟಿತ್ತಲ್ಲದೆ, ಅಂಗವಿಚ್ಛೇದನೆಯಿಂದ ಪೂರೈಸಲಾಗುತ್ತಿತ್ತು. ಹರಿದ ಅಥವಾ ಗೀರಿದ ಕೈಯನ್ನು ಒಮ್ಮೆ ವಿಚ್ಛೇದಿಸಿದುದನ್ನು ನೋಡಿದ್ದೇನೆ. ಮೊಳಕಾಲು ಮೂಳೆ ಸ್ವಲ್ಪ ಮುರಿದಿದ್ದಾಗ ಮೊಳಕಾಲನ್ನೇ ವಿಚ್ಛೇದಿಸಿದುದನ್ನು ನೋಡಿದ್ದೇನೆ. ಆಗ, ಸಾಧಾರಣ ಮುರುಕುನೋವಿಗೆ, ಬಾಧೆಗ, ನಡುತೊಡೆಯನ್ನೋ ಮೊಳಕಾಲನ್ನೋ ಕತ್ತರಿಸಿಬಿಡುತ್ತಿದ್ದರು. ಎಲುಬು ಮುರಿದಿರುವುದು, ಇತರ ಅಂಗಭಾಗಗಳು ಗಾಯವಾಗಿರುವುದು ಎಂದರೆ, ಅದಕ್ಕೆ ಹಿಂದೆ ಪರಿಹಾರಮಾರ್ಗವಿದ್ದರೂ ವಿಚ್ಛೇದನೆ ಒಂದೇ ಎಂದು ತಿಳಿದಿದ್ದರು. ಕೀಲುಸಂದುಗಳಲ್ಲಿ ಉಂಟಾದ ಹುಣ್ಣು ಅಥವಾ ಗಾಯಗಳಿಗೆ ಈ ಪಾಡಿನ ಚಿಕಿತ್ಸೆಯನ್ನೇ ಆಗ ಮಾಡುತ್ತಿದ್ದುದು. ಈ ಆಮೂಲಾಗ್ರ ಚಿಕಿತ್ಸೆಗೆ ಬಲವಾದ ಕಾರಣವೂ ಇತ್ತು. ರೋಗಿಗಳನ್ನು ನೋಡಲು ಬರುತ್ತಿದ್ದ ವೈದ್ಯ ಬಹುದೂರದಿಂದ ಬರುತ್ತಿದ್ದನಲ್ಲದೆ, ತನ್ನ ಅಶುಚಿ ಶಸ್ತ್ರದಿಂದ ರೋಗಿಯ ಹುಣ್ಣು ಕೀವು ಕಟ್ಟುವಂತೆ ಮಾಡಿಬಿಡುತ್ತಿದ್ದ. ಕೊನೆಗೆ ಅಂಗವಿಚ್ಛೇದನೆಯೇ ಸರಿಯಾದ ಮಾರ್ಗವೆಂದು ಅನುಸರಿಸಿಬಿಡುತ್ತಿದ್ದ. ಗಾಯಗಳನ್ನು ಎಚ್ಚರಿಕೆಯಿಂದ ಯಾರೂ ನೋಡಿಕೊಳ್ಳುತ್ತಿರಲಿಲ್ಲ. ಅಂಗವಿಚ್ಛೇದನ ಮಾಡದಿದ್ದಲ್ಲಿ ರೋಗದ ಸೋಂಕು ಹಬ್ಬಿ ಹರಡುವುದೆಂಬ ನಂಬಿಕೆ ಬೇರೆ ಆಗ ಪ್ರಬಲವಾಗಿತ್ತು. ವಿಚ್ಛೇದಿಸಿದಲ್ಲಿ ರೋಗದ ಸೋಂಕು ಅಡ್ಡಕಟ್ಟಿದಂತಾಗುವುದೆಂದೂ ನಂಬಿಕೊಂಡಿದ್ದರು. ಅನೇಕಸಾರಿ ಅಂಗವಿಚ್ಛೇದಿಸಿಕೊಂಡ ರೋಗಿ ಸೋಂಕಿಗೆ

ಕಾರಣನಾಗಿ ಸಾಯುತ್ತಿದ್ದ. ವಿಚ್ಛೇದನಭಾಗಕ್ಕೆ ಸಿಲ್ಕುದಾರ ಕಟ್ಟಿ, ಪಾತ್ರೆ ಯನ್ನು ಕಟ್ಟಿ, ಹರಿದರಕ್ತ ಅಥವಾ ಹೆಕ್ಕಳಿಯಭಾಗ ಅದರಲ್ಲಿ ಬೀಳಲೆಂದು ಕಟ್ಟುತ್ತಿದ್ದರು. ರಕ್ತಸ್ರಾವದಿಂದಲೇ ಆಗ ಹೆಚ್ಚು ರೋಗಿಗಳು ಸಾಯುತ್ತಿದ್ದು ದುಂಟು.

ಇಂದ್ರಿಯಸುಪ್ತಿ ಅಥವಾ ವೇದನೆಯ ಪ್ರತಿಬಂಧಿ ಆಗ ಪ್ರಚಾರದಲ್ಲಿತ್ತು. ೧೮೪೬ ರಿಂದ ವೇದನ ಪ್ರತಿಬಂಧಿಯನ್ನು ಉಪಯೋಗಿಸುತ್ತಿದ್ದರು. ೧೮೪೭ ರಿಂದೀಚೆಗೆ ಪ್ರಜ್ಞೆ ತಪ್ಪಿಸುವ ದ್ರವ "ಕ್ಲೋರೋಫಾರ್ಮ್" ಪ್ರಚಾರಕ್ಕೆ ಬಂತು. ಹಳ್ಳಿಗಾಡಿನಲ್ಲಿ ಗಾಯ ಚಿಕಿತ್ಸೆಗಾಗಿ, ಚರ್ಮ ಗುಣೋನ್ನತಿಗಾಗಿ ವೇದನ ಪ್ರತಿಬಂಧಿಯನ್ನಾಗಲೀ ಪ್ರಜ್ಞೆ ತಪ್ಪಿಸುವ ದ್ರವವನ್ನಾಗಲೀ ಉಪ ಯೋಗಿಸುತ್ತಿರಲಿಲ್ಲ. ವೈದ್ಯ ಬಗಿದುಹಾಕಿದ ಅಂಗಾಂಶವನ್ನು ಹೊಲಿದು ಬಿಡುತ್ತಿದ್ದ. ರೋಗ, ರೋಗಲಕ್ಷಣ, ಚಿಕಿತ್ಸಾವಿಧಾನ ಹೇಗೆ ನಡೆದಿತ್ತು? ಎಂದು ತಿಳಿಯುವುದಕ್ಕೆ ಹಿಂದಿನಕಾಲ ಯೋಗ್ಯವಾಗಿಯೇಯಿತ್ತು. ರೋಗಿ 'ವಿಸ್ಕಿ' ಮದ್ಯ ಕುಡಿದೋ, ಶಪಿಸಿಕೊಳ್ಳುತ್ತಲೋ ಅಥವಾ ಪ್ರಾರ್ಥಿಸಿಕೊಳ್ಳು ತ್ತಲೋ ಈ ಮೂರು ವಿಧಾನವನ್ನು ಅನುಸರಿಸುತ್ತಲೇಯಿದ್ದ. ನೋವಿನ ಕಾಲಮಿತಿಯನ್ನು ಕಡಿಮೆ ಮಾಡುವುದಕ್ಕಾಗಿ ವೈದ್ಯರು ಶ್ರಮಿಸುತ್ತಿದ್ದರು. ಒಮ್ಮೆ ಮುಂದಲೆಯಲ್ಲಿ ಬಗೆದ ಗಾಯಕ್ಕೆ ಅಡ್ಡವಾಗಿ ತಲೆಗೂದಲನ್ನು ಕಟ್ಟಿ ಬಿಟ್ಟಿದ್ದನ್ನು ನೋಡಿದೆ. ಈ ತರಹೆಯ ಗಾಯಕ್ಕೆ ಇದೇ ತಕ್ಕ ಉಪಾಯ. ಬರಿತಲೆಯ ಗಾಯಕ್ಕೆ ಇದು ಒಪ್ಪದು. ಬರಿತಲೆಗೆ ಕೂದಲನ್ನು ಅಂಟಿಸುವ ಹಾಗಿಲ್ಲ. ಅಂಟಿಸಿದಲ್ಲಿ ಗಾಯ ವ್ರಣವಾಗುವುದು ಖಂಡಿತ.

ನನ್ನ ಬಾಲ್ಯದಲ್ಲಿ ವೈದ್ಯವಿಜ್ಞಾನ ಮತ್ತು ಅಭ್ಯಾಸಕ್ರಮ ಹೇಗಿತ್ತೆಂದೂ ಸಂಕ್ಷಿಪ್ತವಾಗಿ ವಿವರಿಸುವೆ. ಹಿಂದಿನ ದಿನಗಳನ್ನು ಈಗಿನ ವೈದ್ಯಕೀಯ ಜ್ಞಾನ ದೊಂದಿಗೆ ಈಗ ಹೋಲಿಸಿಕೊಂಡರೆ, ಆಗಿನ ವೈದ್ಯರಿಗೆ ಯಾವ ರೋಗಕ್ಕೂ ಉಚಿತ ಚಿಕಿತ್ಸೆ ಗೊತ್ತಿರಲಿಲ್ಲವೆಂದು ಹೇಳಬಹುದು. ಮಲೇರಿಯಾ ಮತ್ತು ಕಜ್ಜಿಯ ವಿನಾ ಅವರು ಯಾವ ರೋಗವನ್ನೂ ಹತೋಟಿಗೆ ತಂದುಕೊಳ್ಳುತ್ತಿರ ಲಿಲ್ಲ. ಬಾಧೆ ನಿವಾರಿಸುವುದು ಹೇಗೆಂದೂ, ಸಾಧ್ಯವೆಂದೂ ತಿಳಿದುಕೊಂಡಿ ದ್ದರು. ಸರಿದ ಮೂಳೆಯನ್ನು ಕ್ರಮಪಡಿಸುವುದು, ಹರಿದ ಗಾಯವನ್ನು ಹೊಲಿಯುವುದು, ಸಣ್ಣ ಹುಡುಗರಿಗಾದ ಕುರು, ಗುಳ್ಳೆಗಳನ್ನು ಕೆರೆದು ಗುಣ

ಪಡಿಸುವುದು ಇವೇ ಮೊದಲಾಗುವವನ್ನು ಆಗಿನ ವೈದ್ಯರು ಮಾಡುತ್ತಿದ್ದರು. ಹೆಚ್ಚಾಗಿ ಪ್ರಸವಕಾಲದಲ್ಲಿ ಮಾತ್ರ ವೈದ್ಯಕೀಯ ಸಹಾಯ ಸಲಹೆ ಸಿಗುತ್ತಿತ್ತು. ಆಗ ಯಾವ ವೈದ್ಯನೂ ಸಹಾಯಕ್ಕೆ ಬರುವುದಿಲ್ಲವೆಂದು ಹೇಳಿ ನಿಂತದ್ದನ್ನು ನಾನು ಕೇಳಿಲ್ಲ. ಚಿಕಿತ್ಸೆ ಎಷ್ಟೇ ಶ್ರಮಸಾಧ್ಯವಿರಲಿ, ಜೀವಕ್ಕೆ ಧಕ್ಕೆಯೇ ಬರಲಿ ವೈದ್ಯ ಆಗ ಹಿಂದೆಗೆಯುತ್ತಿರಲಿಲ್ಲ. ರೋಗಿ ವಿಪತ್ತಿಗೆ ಸಿಕ್ಕಿದ್ದಾನೆ ಎಂದು ತಿಳಿದಕೂಡಲೇ ವೈದ್ಯ ಶಕ್ತಿಮೀರಿ ಸಾಹಸಪಡುತ್ತಿದ್ದ.

೨

ಕ್ರೈಸ್ತಪ್ರಪಂಚರಾಜ್ಯ ನಾಗರೀಕತೆಯಲ್ಲಿ ಮಾನವ ಜನಾಂಗ ಹೆಚ್ಚು ಪ್ರಯೋಜನ ಪಡೆಯಿತು. ಮೇಲಾಗಿ ಬಾಲಕರ ಶ್ರೇಯೋಭಿವೃದ್ಧಿಗೆ ಉತ್ತೇಜನ ಸಿಕ್ಕಿತು. ಶ್ರೇಷ್ಠವಾದ ಮಾನವಜನಾಂಗ ನವೀನವಾದುದನ್ನು ಕಂಡಿತು. ಲೋಕದಲ್ಲಿ ಜನಿಸಿ ಕಣ್ಣುಬಿಟ್ಟ ಮಕ್ಕಳಿಗೆ ಹಕ್ಕುಬಾಧ್ಯತೆಯಿದೆಯೆಂದು ಮಾತಾಪಿತೃಗಳು ಕಂಡರು. ಮಕ್ಕಳನ್ನು ಗೌರವದಿಂದಲೇ ಕಾಣಬೇಕೆಂದು ತಿಳಿದರು. ಹಿಂದೆ, ಉಪೇಕ್ಷೆಯಿಂದ ಅಲಕ್ಷ್ಯದಿಂದ ಬೆಳೆದುನಿಂತ ಮಕ್ಕಳಿರಲಿಲ್ಲವೇ ? ಎಂದು ಕೇಳಬಹುದು. ಈ ಪಾಡಿನ ಮಕ್ಕಳಿದ್ದರು ನಿಜ, ಈಗಲೂ ನಾಗರೀಕ ಪ್ರಪಂಚದಲ್ಲಿ, ಬದಲಾವಣೆ ಕಂಡುಕೊಂಡ ರಾಜ್ಯದಲ್ಲಿಯೂ ತಾತ್ಸಾರದಿಂದ ಬೆಳೆದ ಮಕ್ಕಳು ಅಲ್ಲಲ್ಲಿ ಕಾಣುತ್ತಲಿದ್ದಾರೆ.

ಅರವತ್ತು ವರ್ಷದ ಹಿಂದೆ ನಿಜವಾಗಿಯೂ ಬಾಲ್ಯಜೀವನ ಉಪೇಕ್ಷೆಯಿಂದಲೇ ನಡೆದಿತ್ತು. ಮಾತಾಪಿತೃಗಳು ತಮ್ಮ ಮಕ್ಕಳನ್ನು ಪ್ರೀತಿಯಿಂದ ನೋಡುತ್ತಿರಲಿಲ್ಲವೆಂದರ್ಥವಲ್ಲ. ಪ್ರೀತಿಯಿಂದ ನೋಡುತ್ತಿದ್ದರು ನಿಜ; ಕಾಲ ಪದ್ಧತಿ ಮಾತ್ರ ಅಭಿವೃದ್ಧಿಗೆ ಅಡಚಣೆಯಾಗಿತ್ತು. "ಮಗುವನ್ನು ಶಿಕ್ಷಿಸದೆ ಮುದ್ದಿಸಿ ಕೆಡಿಸು." ಅಥವಾ "ಶಿಕ್ಷಿಸು ಮತ್ತು ಲಾಲಿಸು" ಇಲ್ಲವೆ "ತಾಡಿಸಿ ಅವರನ್ನು ಕಠಿಣರನ್ನಾಗಿ ಮಾಡು," ಈ ಧರ್ಮೋಪದೇಶ ಹೇಳಿಕೆಯ ಫಲಿತಾಂಶವೆಲ್ಲಾ ಒಂದೇ ಆಗಿತ್ತು. ಈ ನಂಬಿಕೆಯಿಂದ ಬೆಳೆದು ತರಬೇತಿ ಪಡೆದ ಬಾಲಕರು ಬಿರುಸಾಗಿ ಇಲ್ಲವೇ ಚೇತನ ಕಳೆದುಕೊಂಡವರಾಗುತ್ತಿದ್ದರು.

ಮಕ್ಕಳು ಸಹಾ ಜೀವನ ಸಾಗಾಟದ ಕಾರ್ಯನಿರ್ವಹಣದಲ್ಲಿ ಉಪಯೋಗಿಗಳಾಗಿದ್ದರು. ನಿರ್ವಹಣಕಾಲದಲ್ಲಿ ಮಕ್ಕಳು ಸಹಾ ತ್ಯಾಗಮಾಡ

ಬೇಕಾದ ಪ್ರಸಂಗ ಬರುತ್ತಿತ್ತು. ಹೀಗಾಗಿ ಜನ್ಮಸಿದ್ಧ ಹಕ್ಕುಗಳು ಮಕ್ಕಳಿಗಿರಲಿಲ್ಲ. ಮಕ್ಕಳು ಜೀವತಳೆದರೆ ಸಾಕು, ಇಲ್ಲಿಗೆ ತಮ್ಮ ಕರ್ತವ್ಯ ಮುಗಿಯಿತೆಂದು ಮಾತಾಪಿತೃಗಳು ತಿಳಿಯುತ್ತಿದ್ದರು. ಜೀವನ ಸಾಗಾಟದಲ್ಲಿ ಮಕ್ಕಳನ್ನು ಅಡ್ಡಿಯಿಲ್ಲದೆ ಆಗ ಉಪಯೋಗಿಸಿಕೊಳ್ಳುತ್ತಿದ್ದರು.

ಹುಟ್ಟಿ ಬೆಳೆದ ಮಗು, ಜೀವಜೀವನಕ್ಕಾಗಿ ಹೋರಾಡಬೇಕಾಗಿತ್ತು. ಸಂದರ್ಭಾನುಸಾರ ಮಕ್ಕಳು ತಮಗೆ ಸಿಕ್ಕಿದುದೇ ಪರಮಾರ್ಥವೆಂದೂ ನಂಬಿಕೊಂಡಿರಬೇಕಾಯಿತು. ಹೀಗಾಗಿ, ಬಲಯುತವಾದ್ದು ಬದುಕಿಕೊಂಡಿತು; ಉಳಿದದ್ದು ನಿತ್ರಾಣಿಯೆನಿಸಿಕೊಂಡಿತು. ನಿತ್ರಾಣಿಗೆ ಯಾವ ಅವಕಾಶವೂ ಇರಲಿಲ್ಲ. ಮಕ್ಕಳನ್ನು ಇಷ್ಟು ತಾತ್ಸಾರದಿಂದ ಕಾಣುವ ಮನೋವೃತ್ತಿ ಒಳ್ಳೆಯದಲ್ಲ. ಆಗ ಮನೆಗೆ ವೈದ್ಯನನ್ನು ಬರಮಾಡಿಕೊಳ್ಳುವುದು ಅಥವಾ ಕರೆಯುವುದು ಎಂದರೆ, ಕೊನೆಗೆ ಖರ್ಚಿಗೆ ದಾರಿಯೆಂದು ಭಾವಿಸಿದ್ದರು. ಒಮ್ಮೆ ವೈದ್ಯ ನನ್ನನ್ನು ನೋಡಲು ಬಂದು, "ಬೆಳಿಗ್ಗೆಯಾಗುವುದರೊಳಗಾಗಿ ಸಾಯುವೆ" ಎಂದು ಮುಂದಾಗಿ ತಿಳಿಸಿಬಿಟ್ಟ. ಈ ಮಾತು–ಪೂರ್ವ ಚಿಹ್ನೆ–ನನ್ನ ಸ್ಮೃತಿಯಲ್ಲಿ ಇನ್ನೂ ಇದೆ. ಮುಂದೆ "ಸ್ಥಿತಿ ತೀರ ಕೆಡಕಾಗಿದೆ, ಅಯ್ಯೊ ಚುರುಕು ಹುಡುಗನೆ!" ಎಂದು ಮರುಕತೋರಿ ಮಾತನಾಡಿದುದನ್ನು ನಾನು ನೆನಪಿನಲ್ಲಿಟ್ಟದ್ದೇನೆ. ಈ ವೈದ್ಯನೇ ಮುಂದಾಗಿ ಪೂರ್ವ ಮನೋಭಾವ ವ್ಯಕ್ತಪಡಿಸಿದವನು ಎಂದು ಹೇಳುವೆ.

ಶಾಲೆಯಲ್ಲಿ ನಾನು ಕಳೆದ ಮೊದಲನೆಯ ದಿನವನ್ನು ನೆನಪಿಗೆ ತಂದುಕೊಳ್ಳುವೆ. ನನ್ನ ಸಹೋದರಿ, ಮನೆಯಲ್ಲಿ ನನಗೆ ಓದು ಕಲಿಸಿದಳು. ಶಾಲೆಗೆ ಸೇರಿದ ಮೊದಲನೆಯ ದಿನ, ನಾನು, ಮೆತ್ತನೆಯ ಪೈನ್‌ಮರದಿಂದ ಮಾಡಿದ ಮೇಜಿನ ಮೇಲೆ ನವಂಬರ್ ೨೬, ೧೮೭೭ ಎಂದು ಸುಮಾರು ಎರಡು ಅಂಗುಲಗಳಷ್ಟು ಗಾತ್ರದ ಅಕ್ಷರಗಳನ್ನು ಕೆತ್ತಿದೆ. ಅಂದರೆ, ಏಳೂವರೆ ವರ್ಷದ ಹುಡುಗನ ಕೈಲಿ ಆಗ ಹರಿತವಾದ ಚಾಕು ಇದ್ದಿತೆಂದು ಮತ್ತು ಚಾಕುವನ್ನು ಉಪಯೋಗಿಸಲು ಮತ್ತು ಮೇಜಿನಮೇಲೆ ಕೆತ್ತುವಷ್ಟು ಸಾಮರ್ಥ್ಯವಿತ್ತೆಂದು ಅರ್ಥವಾಗುವುದು. ಹುಡುಗ ಈ ಸಾಧನೆಗೆ ಎಷ್ಟು ಸಾಮರ್ಥ್ಯ ಪಡೆದಿದ್ದನೆಂದು ತೋರಿಬರುವುದು. ಶಾಲೆಯಲ್ಲಿ ಮೇಜಿನಮೇಲೆ ಚಾಕುವಿನಿಂದ ಕೆತ್ತಿದ್ದಕ್ಕೆ ನನಗೆ ಹೊಡೆತಬಿತ್ತು. ಈಗಲೂ ನಾನು ಶಾಲೆಗೆ ಸೇರಿದ ಮೊದಲನೆಯದಿನ

ಚಾಕುವಿನಿಂದ ಕೆತ್ತಿ ಬರೆದುದನ್ನು ನೆನೆಸಿ ಪರಾಕ್ರಮವಾದ ಕೃತ್ಯವನ್ನೆಸಗಿದೆ ನೆಂದು ತಿಳಿಯುವೆ. ಈಗಿನ ಕಾಲದ ಹುಡುಗರು ನನ್ನಹಾಗೆ ಮೇಜಿನಮೇಲೆ ಕೆತ್ತಬಹುದು. ಹೀಗೆ ಕೆತ್ತುವುದಕ್ಕೆ ಚಾಕುವನ್ನು ಉಪಯೋಗಿಸಲು ತಕ್ಕ ನಿಪುಣತೆ ಅತ್ಯಗತ್ಯ. ಹೊಡೆತ ತಿನ್ನುವುದಕ್ಕೆ ಮಾತ್ರ ಈಗಿನ ಹುಡುಗರಿಗೆ ಶಕ್ತಿಯಿಲ್ಲ. ಇದು ನನ್ನ ಶಾಲಾನುಭವದ ಸಣ್ಣ ವಿವರಣೆಯಲ್ಲಿ ನಾನು ಮೊದಲನೆಯದಿನ ಶಾಲೆಯಲ್ಲಿ ನಡೆದುಕೊಂಡ ಬಗೆ.

ಹಳ್ಳಿಯ ಶಾಲೆಯಲ್ಲಿ ಆಗ ಕಲಿಸುತ್ತಿದ್ದುದು ಮೂರು ಬಗೆಯ ಪಾಠ. ಓದುವುದು, ಬರೆಯುವುದು, ಲೆಖ್ಖಮಾಡುವುದು ಈ ಮೂರು ಪಾಠಗಳೇ ಆಗ ನಡೆಯುತ್ತಿದ್ದುದು. ಈ ಮೂರು ಪಾಠಗಳೊಂದಿಗೆ ವಿದ್ಯಾರ್ಥಿ, ಅನೇಕಬಗೆಯ ಆಟಪಾಟಗಳನ್ನು ಹೆಚ್ಚಿಗೆ ಕಲಿಯುತ್ತಿದ್ದ. ಆಟ, ಬೇಟೆ, ಉಪಾಯದಾಟ, ಹೊಡೆದಾಟ ಈ ಬಗೆಯಲ್ಲಿ ವಿದ್ಯಾರ್ಥಿಗಳು ತಮ್ಮ ಆಟಪಾಟವನ್ನು ಸುಧಾರಿಸಿ ಕೊಳ್ಳುತ್ತಿದ್ದರು. ಈ ಸುಧಾರಣೆಯಿಂಗ ಮುಖ್ಯವಾಗಿ ವಿದ್ಯಾರ್ಥಿಗಳು ಮುಂದಿನ ಜೀವನದಲ್ಲಿ ಎರಡು ಮುಖ್ಯಾಂಶವಿದೆಯೆಂದು ತಿಳಿದುಕೊಂಡರು. ಯಾವುದಕ್ಕೋ ಬೇಟೆಯಾಡುವುದು, ಅದನ್ನು ವಶಪಡಿಸಿಕೊಳ್ಳಲು ಪ್ರಯ ತ್ನಿಸುವುದು, ವಶಪಡಿಸಿಕೊಂಡುದುದನ್ನು ಭದ್ರವಾಗಿರಿಸಿಕೊಳ್ಳಲು ಹೊಡೆದಾಡು ವುದು ಎಂದು ತಿಳಿದರು. ಅರ್ಧ ಶತಮಾನದಿಂದೀಚೆಗೆ ಈ ಸಂಪಾದನೆಯ ಅತಿಶಯ ಗುಣವನ್ನು ಆದಾಯ ತೆರಿಗೆಯ ಇಲಾಖೆಯವರು ಗ್ರಹಿಸಿಕೊಂಡಿ ದ್ದಾರೆ.

ಈ ಕಾಲದಲ್ಲಿ ಉಪಕಾರಿ ಮತ್ತು ಉದಾರವಾದ ಅಭ್ಯಾಸವೆಂದರೆ, ಅಸಾಮಾನ್ಯ ಮಗುವಿನ ಬೆಳವಣಿಗೆಯನ್ನು ಕೂಲಂಕಷವಾಗಿ ತಿಳಿಯುವುದು. ಹಿಂದಿನ ಕಾಲದಲ್ಲಿ ಇದೇ ಬಗೆಯಲ್ಲಿ ತಾಂತ್ರಿಕ ವಿಭಾಗದಲ್ಲಿ ಅಸಾಮಾನ್ಯ ಮಗುವನ್ನು ಪರಿಶೀಲಿಸಿದಲ್ಲಿ ಅದನ್ನು ರಾಕ್ಷಸೀ ಕೆಲಸವೆಂದೆನ್ನುತ್ತಿದ್ದರು. ಹಿಂದಿನ ಕಾಲದಲ್ಲಿ ಈಗಿರುವಂತೆ ಶಾಲೆಯಲ್ಲಿ ಸಣ್ಣ ಮಕ್ಕಳನ್ನು ನೋಡಿ ಕೊಳ್ಳಲು ದಾದಿಯರಿರಲಿಲ್ಲ. ಮಕ್ಕಳ ನ್ಯೂನತೆಯನ್ನು ಕಂಡುಕೊಳ್ಳಲು ಸಮರ್ಥ ವೈದ್ಯರಿರಲಿಲ್ಲ. ಈ ನನ್ನ ಅನುಭವ ಅಭಿಪ್ರಾಯವೂ ಪ್ರಖ್ಯಾತ ರಾದ ಸರ್ ಜೇಮ್ಸ್ ಮೆಕೆಂಜಿ ಅವರ ಅಭಿಪ್ರಾಯವೂ ಒಂದೇ ಆಗಿದೆ. ಅವ ರಿಗೆ ಹತ್ತಿರದಲ್ಲಿದ್ದ ವಸ್ತು ಮಾತ್ರ ಕಣ್ಣಿಗೆ ಗೋಚರವಾಗುತ್ತಿತ್ತು. ಕಾರಣ

ವಿಲ್ಲದೆ ಅವರನ್ನು ಶಾಲೆಯಲ್ಲಿ ಮೂಕ ಎಂಬ ಗುಂಪಿಗೆ ಸೇರಿಸಲಾಗಿತ್ತು. ಅವರು ವಿರೋಧಿಸದೆ ಈ ತೀರ್ಪಿಗೆ ಒಪ್ಪಿಕೊಳ್ಳದೇ ವಿಧಿಯಿರಲಿಲ್ಲ. ನನ್ನ ಬಗೆಗೆ "ಕಪ್ಪು ಹಲಗೆಯ ಮೇಲೆ ಏನು ಬರೆದಿದೆಯೆಂದು ನಾನು ಓದಿ ತಿಳಿಯಲಾರೆ" ಎಂದು ನಾನು ಹೇಳಿಕೊಂಡಾಗ, ನನ್ನ ಈ ಲೋಪದ ಅಪರಾಧಕ್ಕೆ ಚಬಕದೇಟುಬಿತ್ತು. ಚಬಕದೇಟಿಗೆ ನಾನು ಮುನಿದು ಕೊಳ್ಳುತ್ತಿದ್ದೆ. ನನ್ನ ಮುನಿಸಿಗೂ ಚಬಕದೇಟುಬಿತ್ತು. ನಾನು ಮುನಿಸಿ ಕೊಳ್ಳಬಾರದೆಂತಲೂ ಶಿಕ್ಷೆಗೆ ಕಾರಣನಾಗಬೇಕೆಂತಲೂ ಆಗಿನ ಅರ್ಥವಾಗಿತ್ತು. ಕರ್ತವ್ಯಚ್ಯುತಿಗೆ, ಅಪರಾಧಕ್ಕೆ, ಲೋಪಕ್ಕೆ ಶಿಕ್ಷೆಯೆಂದರೆ ಆಗ ಚಬಕದೇಟೇ ಆಗಿತ್ತು. ಈ ದಾಸ್ಯತ್ವ, ಉಗ್ರಶಿಕ್ಷೆಯ ಭಯದಿಂದ ನಮ್ಮಲ್ಲಡಗಿದ್ದ ಪ್ರತಿಭೆ ಸಂಪೂರ್ಣವಾಗಿ ಪ್ರಕಾಶಕ್ಕೆ ಬಾರದೇಹೋಗಿತ್ತು. ವಿಪತ್ತು ಕಾಣಿಸಿ ಕೊಂಡಾಗ, ಬಾಯಿತೆರೆಯದೆ ಅದನ್ನು ಸಾಹಸದಿಂದ ಎದುರಿಸುವುದೇ ಆಗ ನಮಗೆ ಗೊತ್ತಿದ್ದ ದಾರಿ. ಈ ನಿಯಮಿತ ತರಬೇತಿಗೆ ಸಿಕ್ಕಿ ಅನುಭವ ಪಡೆದ ವಿವರಣೆಯನ್ನು ಈಗ ವಿವರಿಸುವೆ.—

ಶಾಲೆಯಲ್ಲಿ ಪಾಠ ನಡೆಯುತ್ತಿದ್ದಾಗ ವಿದ್ಯಾರ್ಥಿಗಳಾದ ನಾವು ಚೆಂಡನ್ನು ಆಡುತ್ತಿದ್ದೆವು. ಉಪಾಧ್ಯಾಯಿನಿಯ ಕಣ್ಣಿಗೆ ಕಾಣಿಸಿಯೂ ಕಾಣಿಸಿದಂತೆ ಚೆಂಡು ಅಲ್ಲಿಂದಿಲ್ಲಿಗೆ ಓಡಾಡುತ್ತಿತ್ತು. ಒಂದೊಂದುಸಾರಿ ಚೆಂಡು ಯಾರಿಗೂ ಕಾಣಿಸದಂತೆ ಮಾಯವಾಗಿ ಬಿಡುತ್ತಿದ್ದುದುಂಟು. ಒಮ್ಮೆ ಉಪಾಧ್ಯಾಯಿನಿ ಚೆಂಡನ್ನು ಹಿಡಿದಿಟ್ಟುಕೊಳ್ಳಬೇಕೆಂದಿದ್ದಳು. ನೂಲು ಚೆಂಡಿಗೆ ದಾರಕಟ್ಟಿ ಅದು ಶಾಲಾ ಕೋಣೆಯ ನಡುಭಾಗದವರೆಗೂ ಹೊರಳಿ ಬರುವಂತೆ ಒಮ್ಮೆ ನಾನು ಮಾಡಿಬಿಟ್ಟೆ. ಚೆಂಡು ಕಾಣಿಸುತ್ತಿದೆ, ಅದನ್ನು ಹಿಡಿಯುವಾ ಎಂದಾಕೆ, "ಸಿಗುವುದೀಗ ಚೆಂಡು" ಎಂದು ಮುಂದಕ್ಕೆ ಕೈ ಚಾಚಿದಳು. ಚೆಂಡು ಹಿಡಿ ಯಲು ಆಕೆ ಕೈ ಚಾಚಿದಾಗ, ಚಂಡಿಗೆ ಕಟ್ಟಿದ ದಾರವನ್ನು ಹಿಡಿದೆಳೆದುಬಿಟ್ಟೆ. ಚೆಂಡಿಗೆ ಕಟ್ಟಿದ ದಾರವನ್ನು ಆಕೆಯು ಗಮನಿಸದಿದ್ದರಿಂದ ಅದು ಆಕೆಯ ಕೈಗೆ ಸಿಗಲಿಲ್ಲ; ಮಾಯವಾಗಿಬಿಟ್ಟಿತು. "ಚೆಂಡು ನಿಮಗೆಲ್ಲಿಯಾದರೂ ಕಾಣಿಸಿತೇ ?" ಎಂದು ತರಗತಿಯ ಬಾಲಕರನ್ನೆಲ್ಲಾ ಆಕೆ ಕೇಳಿದಳು. ಚೆಂಡು ಯಾರಿಗೂ ಕಾಣಿಸಲಿಲ್ಲ ಎಂದು ಕಂಡುಕೊಂಡ ಮೇಲೆ, ಆಕೆ ನಮ್ಮನ್ನೆಲ್ಲಾ ಸುಮ್ಮನಿರುವಂತೆ ಮುಟುಕಿಸಿಬಿಟ್ಟಳು. ಶಾಲಾ ಕೋಣೆಯ

ನಡುಭಾಗದಲ್ಲಿ ರಂಧ್ರವಿದ್ದುದೂ ಆಕೆಗೆ ತಿಳಿಯಲಿಲ್ಲ. ಆ ರಂಧ್ರದಲ್ಲಿ ನಾವು ತಪ್ಪಿಸಿ ತಂದ ವಸ್ತುಗಳ ಶೇಖರಣೆ ಮಾಡುತ್ತಿದ್ದೆವು. ತಪ್ಪಿಸಿ ತಂದುದನ್ನು ಜಮಾಯಿಸಿ, ಬೇಕೆಂದಾಗ ಕೆಳಕ್ಕೋಣೆಗೆ ನುಗ್ಗಿ ಆರಿಸಿ ತರುತ್ತಿದ್ದೆವು.

ನಮ್ಮ ಉಪಾಧ್ಯಾಯನಿಗೆ ವಯಸ್ಸು ಮೀರಿತ್ತು. ಆಕೆ ನಮಗೇನೂ ಕಲಿಸುತ್ತಿರಲಿಲ್ಲ. ಆದುದರಿಂದ ಆಕೆ ಹೆಚ್ಚುದಿನ ಶಾಲೆಯಲ್ಲಿ ನಿಲ್ಲಲಿಲ್ಲ. ಅನಂತರ, ನಮ್ಮ ಶಾಲೆಗೆ ಕಠಿಣಹೃದಯನಾದ ಉಪಾಧ್ಯಾಯನೊಬ್ಬ ಬಂದ. ಬಂದವನು, ಎಂತಹ ಶಾಲೆಯನ್ನಾದರೂ ಪಾಲಿಸುವೆ ಎನ್ನುತ್ತಲೇ ಬಂದ. ಹೊಸ ಉಪಾಧ್ಯಾಯ ಬಂದ ದಿನವೇ ಹದಿನೆಂಟು ವಿಧದ ವರ್ತನೆಯನ್ನು ನಿಷೇಧಿಸಿ, ನಾವು ಅದನ್ನು ನೆನಪಿನಲ್ಲಿಟ್ಟುಕೊಂಡು ನಡೆಯಬೇಕೆಂದು ಸೂಚನಾ ಪತ್ರದಲ್ಲಿ ಗುರ್ತಿಸಿ, ಗೋಡೆಗೆ ಮೊಳೆ ಹೊಡೆದು ನೇತುಹಾಕಿದ. ಈ ಹದಿನೆಂಟು ವಿಧವರ್ತನೆ ನಿಜವಾಗಿ ನಮಗೆ ಒಳ್ಳೆಯದಕ್ಕೇ ಕಟ್ಟುಪಾಡಾಗಿತ್ತು. ಮೊದಲನೆಯ ದಿನವೇ ನಾವು ಹದಿನೇಳು ವಿಧಿನಿಯಮಗಳನ್ನು ಮೀರಿ ವರ್ತಿಸಿ ಬಿಟ್ಟೆವು. ಈ ದಿನವೇ ನಾನು ಶಾಲೆಯಲ್ಲಿ ಹೆಚ್ಚು ಶ್ರಮದಿಂದ ಕೆಲಸ ಮಾಡಿದ್ದು.

ವಿದ್ಯಾರ್ಥಿಗಳು ತಮ್ಮ ಬೂಟಿಗೊಂದು (Boot) ಸೂಜಿ ಚುಚ್ಚಿಕೊಂಡು, ಅದನ್ನು ತಮ್ಮ ಮುಂದಾಗಿ ಕುಳಿತಿದ್ದ ಬಾಲಕರಿಗೆ ಹಗುರವಾಗಿ ಚುಚ್ಚುತ್ತಿದ್ದರು. ಹೀಗೆ ಚುಚ್ಚಿಸಿಕೊಂಡ ವಿದ್ಯಾರ್ಥಿ, ಚುಚ್ಚಿದವನ ಬೆನ್ನಿನಮೇಲೆ ಗುದ್ದುತ್ತಿದ್ದ. ಈ ಗುದ್ದು ಯಾರಿಗಾದರೂ ತಪ್ಪಿಬಿದ್ದಾಗ, ಈ ತಪ್ಪು ಒಪ್ಪಿಕೆಯ ನಿರ್ಣಯ ಶಾಲೆಬಿಟ್ಟನಂತರ ತೀರ್ಮಾನವಾಗುತ್ತಲಿತ್ತು. ಈ ಪದ್ಧತಿಯನ್ನು ಈಗ ಯಾವ ಶಾಲೆಯ ಬಾಲಕರೂ ಅನುಸರಿಸುತ್ತಿಲ್ಲವೆಂದು ತಿಳಿಯುತ್ತೇನೆ.

ಆಗ ಹೊಕಿ ಎಂಬ ಒಂದು ಚಮತ್ಕಾರದ ಆಟವೊಂದು ರೂಢಿಯಲ್ಲಿತ್ತು. ಬಿಡುವಿನಲ್ಲಿ ಮೊಲ ಬೇಟೆಯಾಡುತ್ತಿದ್ದೆವು. ಮೆಟ್ಟು ನಡಿಗೆಯ ಆಟ ಆಡುತ್ತಿದ್ದೆವು. ಈ ಎಲ್ಲಾ ಆಟಕ್ಕಿಂತ ನಮ್ಮ ಪರಿಶೋಧನಾ ರೀತಿಯೇ ಬೇರೆಯಾಗಿತ್ತು. "ನಿನ್ನೆ ಶಾಲೆಗೇಕೆ ಬರಲಿಲ್ಲ ? ತಪ್ಪಿಸಿಕೊಂಡೆಯೇಕೆ ?" ಎಂದು ಉಪಾಧ್ಯಾಯ ಪ್ರಶ್ನಿಸಿದಾಗ, ಅಧೋಮುಖರಾಗಿ ನಾವು ಅವನಿಗೆ ಉತ್ತರಕೊಡುತ್ತಿದ್ದೆವು. ಈ ಸಮಾಧಾನ ಹೇಳುವ ರೀತಿನೀತಿಯನ್ನು ನಿರ್ವಾಹವಿಲ್ಲದೆ ಅವನು

ಒಪ್ಪಿಕೊಳ್ಳಬೇಕಾಗಿತ್ತು. ಶಾಲಾ ಶಬ್ದಕೋಶದಿಂದ ಈಗ "ಕಳ್ಳ ತಪ್ಪಿಸಿಕೋ" ಎಂಬ ಪದವನ್ನು ತೆಗೆದುಹಾಕಿದ್ದಾರೆ ಎಂದು ನಾನು ತಿಳಿಯುತ್ತೇನೆ. ಈ ಅಕ್ಷೇಪಕರ ಪದಕ್ಕೆ ಬದಲಾಗಿ "ಗೈರುಹಾಜರಿ" ಎಂದ ಪದ ಉಪಯೋಗಿಸುತ್ತಿದ್ದಾರೆಯೆಂದು ತಿಳಿಯುತ್ತೇನೆ. ನಾಗರಿಕತೆ ಮುಂದುವರಿಯುತ್ತಿವೆ ಎಂದರೆ ಹೀಗೆಯೇ ಅಲ್ಲವೆ?

ಮರುವರ್ಷ, ಮಧುರ ಸ್ವಭಾವದ ಚಿಕ್ಕ ಮಹಿಳೆಯೊಬ್ಬಳು ಉಪಾಧ್ಯಾಯಿನಿಯಾಗಿ ಬಂದಳು. ಶಾಲೆಗೆ ಚಾಟಿತರದೇ ಬಂದ ಈ ಉಪಾಧ್ಯಾಯಿನಿಯ ಹೆಸರು ಲಿಲ್ಲಿ ಎಂದು. ನಾವು ಈಕೆಯನ್ನು ಉಪಾಧ್ಯಾಯಿನಿ ಎಂದೇ ಕರೆಯುತ್ತಿದ್ದೆವು. ನಾವಾಗ ನಮ್ಮ ಅತಿದುಷ್ಟತನವನ್ನೆಲ್ಲಾ ಬಿಟ್ಟುಬಿಟ್ಟೆವು. ಉಪಾಧ್ಯಾಯಿನಿಗೆ ನೋವಾಗುವಂತೆ ವರ್ತಿಸುವುದನ್ನು ಬಿಟ್ಟುಬಿಟ್ಟೆವು. ತೂಕದಲ್ಲಿ ನೂರು ಪೌಂಡಿಗೂ ಕಡಿಮೆಯಿದ್ದ ನಮ್ಮ ಉಪಾಧ್ಯಾಯಿನಿ, ನಿತ್ಯನಿತ್ಯ ಹೊಸದಾರಿ ಹಿಡಿದೇ ನಮಗೆ ಕಲಿಸುತ್ತಿದ್ದಳು. ಈ ಚಿಕ್ಕ ಮಹಿಳೆ, ಬಾಲಕರನ್ನು ಚಮುಕಿಸುವುದರಿಂದ ಪ್ರಯೋಜನವಿಲ್ಲವೆಂದು ಕಂಡುಕೊಂಡು ಕರುಣೆಯಿಂದ ನಮ್ಮನ್ನು ಕಾಣುತ್ತಿದ್ದಳು. ಈಕೆಯ ಕರುಣೆಗೆ ನಾವು ಪಾತ್ರರಾಗಿಬಿಟ್ಟಿದ್ದೆವು. ಈ ಭಾವನೆ, ರೀತಿ, ನಡವಳಿಕೆ ಆಗ ನಮಗೆ ವಿಚಿತ್ರವಾಗಿ ಕಂಡಿತು. ಹಿಂದೆ ಯಾರೂ ನಮ್ಮನ್ನು ಹೀಗೆ ಕಂಡಿರಲಿಲ್ಲ. ಉಪಾಧ್ಯಾಯಿನಿಯನ್ನು ವಾತ್ಸಲ್ಯಭಾವದಿಂದ ನಾವು ಕಾಣುತ್ತಿದ್ದೆವು. ಈ ಮುಂಚೆ ಪ್ರೀತಿ, ವಾತ್ಸಲ್ಯ ಎಂಬ ಪದದರ್ಥವೇ ನಮಗೆ ತಿಳಿದಿರಲಿಲ್ಲ. ಕ್ರೈಸ್ತಪಾದ್ರಿಯು ಪ್ರಾರ್ಥನಾವೇಳೆಯಲ್ಲಿ "ಕ್ರೈಸ್ತನನ್ನು ಪ್ರೀತಿಸಿ" ಎಂದು ಬೋಧಿಸುತ್ತಿದ್ದ. ಅವನು ಬೋಧಿಸುತ್ತಿದ್ದ ಪ್ರೀತಿಪರಿಯ ಅರ್ಥ ಆಗ ನಮಗೆ ತಿಳಿಯುತ್ತಿರಲಿಲ್ಲ.

ಪುಸ್ತಕವನ್ನು ಓದಿ ಮೆಚ್ಚುಗೊಳ್ಳುವುದು ಹೇಗೆಂಬುದನ್ನು ನಾನಾಗ ಅರಿತುಕೊಂಡೆ. ಡಾ|| ಫೂಟ್‌ರವರು ಬರೆದ "ಮನೆವೈದ್ಯ" ಎಂಬ ರಟ್ಟು ಹರಿದುಹೋದ ಪುಸ್ತಕವೊಂದು ನನಗೆ ಸಿಕ್ಕಿತು. ಈ ಪುಸ್ತಕವನ್ನು ನಾನು ಓದುತ್ತಿದ್ದೆ. ಕೂಡಲೇ ಪಾದ್ರಿಯೊಬ್ಬ ನನ್ನ ಕೈಯಿಂದ ಇದನ್ನು ಕಿತ್ತು ಬೆಂಕಿಗೆ ಹಾಕಿಬಿಟ್ಟ. ಪುಸ್ತಕವನ್ನೇಕೆ ಸುಟ್ಟುಬಿಟ್ಟ ಎಂದೀಗ ತಿಳಿಯುತ್ತೇನೆ. ಪುಸ್ತಕ ವಿವರಣೆಯಲ್ಲಿ ಗಂಡು, ಹೆಣ್ಣು ಎಂದು ಎರಡು ಲಿಂಗವಿದೆ ಎಂದು ಬರೆಯಲಾಗಿತ್ತು. ಈ ವಿವರಣೆ ವ್ಯತ್ಯಾಸ, ಬೇಸಾಯಗಾರ ಮಗನಿಗೆ ಆಗ ಹಿಡಿಸ

ದಂತಹ ಅಥವಾ ಸಂದೇಹಕ್ಕೆ ಆಸ್ಪದವಾಗುವಂತಹ ವಸ್ತುವಾಗಿತ್ತು. ಇದನ್ನು ಕಂಡುಕೊಂಡ ಪಾದ್ರಿ ವೈದ್ಯ ಪುಸ್ತಕವನ್ನು ಸುಟ್ಟುಬಿಟ್ಟ ಎಂದು ತಿಳಿದೆ. ನನಗೆ ಮತ್ತು ನನ್ನ ತಮ್ಮನಿಗೆ ಸೇರಿದ್ದ "ಡಾಮಿನೋಸ್" ಆಟದ ಚದುರ ಕಾಯಿಗಳಿದ್ದವು. ಇದನ್ನೂ ಪಾದ್ರಿ ಬೆಂಕಿಗೆ ಸೇರಿಸಿಬಿಟ್ಟ. ಮುಂದೆ "ಯೂಕರ್" ಇಸ್ಪೀಟು ಎಲೆಗಳನ್ನು ಒಯ್ದುಬಿಡುವೆಯೆಂದು ಬೆದರಿಸಿದ. ಒಳ್ಳೆಯದೆಂದು ನಾನು, ನನ್ನ ಚಿಕ್ಕಪ್ಪನ ಸಹಾಯದಿಂದ "ಯೂಕರ್" ಆಟ ಕಲಿತು, ಅವನಿಂದಲೇ ಎಲೆಗಳನ್ನು ಪಡೆದೆ. ಚರ್ಚಿನಲ್ಲಿ ಪುನರುಜ್ಜೀವದ ಪೂಜೋಪಚಾರದ ವೇಳೆಯಲ್ಲಿ ಹಿಂದಾಗಿ ಕುಳಿತು ನಾನು ನನ್ನ ತಮ್ಮನೊಂದಿಗೆ "ಯೂಕರ್" ಆಟವಾಡುತ್ತಿದ್ದೆ. ಹೀಗೆ ತಡೆಯಿಲ್ಲದೆ "ಡಾಮಿನೋಸ್" ಆಟ ನಾವು ಆಡುವ ಹಾಗಿರಲಿಲ್ಲ. ನನ್ನ ಹದಿನಾರನೇ ವಯಸ್ಸಿನಲ್ಲಿ ನಮ್ಮ ಪ್ರಾಂತದಲ್ಲಿ "ಯೂಕರ್" ಇಸ್ಪೀಟಾಟದಲ್ಲಿ ನಾನೇ ಪ್ರವೀಣನಾಗಿದ್ದೆ. ಮುಂದೆ, ಇಪ್ಪತ್ತುವರ್ಷ ಈ ಎಲೆಗಳನ್ನು ನಾನು ಮುಟ್ಟಲೇಯಿಲ್ಲ. "ಜಾನ್ ಹಾಲಿಫಾಕ್ಸ್ ಸಭ್ಯ" ಎಂಬ ಪುಸ್ತಕವನ್ನು ಪಡೆದೆ. ಅದು ಕಾದಂಬರಿಯಾದ್ದರಿಂದ ಅಗ್ನಿಗೆ ಆಹುತಿಯಾಗಿಬಿಟ್ಟಿತು. ಕೊನೆಗೆ ನನಗೆ ಸಿಕ್ಕಿದುದು, ಅಗ್ಗಬೆಲೆಯ ಕೆಂಪುರಟ್ಟಿನ ಕಾಡು ಪುಸ್ತಕಗಳೆ. ಈ ಕಾಡು ಪುಸ್ತಕಗಳಿಂದ ನನ್ನ ವಿದ್ಯಾರ್ಜನೆ ಮತ್ತು ಜ್ಞಾನವಿಕಾಸವಾಗಬೇಕಾಯಿತು. ಈ ಓದಿನಿಂದ ನಿಜವಾಗಿ ಒಬ್ಬನು ತನ್ನ ತಲೆಗೂದಲನ್ನು ಉದುರಿಸಿಕೊಳ್ಳುತ್ತಿದ್ದುದು ನಿಜ. ನನಗೆ ಬೇರೆ ಉಪಾಯವಿರಲಿಲ್ಲ. ಈ ಕಾಡು ಪುಸ್ತಕ ಓದಲು ಅಡ್ಡಿಯೇಯಿರಲಿಲ್ಲ.

ನನ್ನ ಹನ್ನೆರಡನೆಯ ವಯಸ್ಸಿನಲ್ಲಿ ನಾನು ಕೆಂಪುಬಣ್ಣದ ಶಾಲೆ ಬಿಟ್ಟು ಪಟ್ಟಣಕ್ಕೆ ಹತ್ತಿರವಿದ್ದ ಶಾಲೆಗೆ ಸೇರಿಕೊಂಡೆ. ಕಾಲೊಡೆದು ಸಿಪ್ಪೆ ಸುಲಿಯುವವರೆಗೆ ನಾನು ಶಾಲೆಗೆ ಹೋಗುವಂತಿರಲಿಲ್ಲ. ನಾನು ಶಾಲೆಗೆ ಸೇರಿಕೊಳ್ಳುವ ಮೊದಲೇ ಅಲ್ಲಿ ಎರಡು ತಿಂಗಳ ಪಾಠಕ್ರಮ ನಡೆದುಹೋಗಿತ್ತು. ಮುಗಿದ ಪಾಠಕ್ರಮವನ್ನಲ್ಲದೆ, ನಿತ್ಯನಿತ್ಯ ನಡೆಯುತ್ತಿದ್ದ ಪಾಠಗಳನ್ನು ನಾನು ಕಲಿಯಬೇಕಾಯಿತು. ಗಣಿತಪಾಠದಲ್ಲಾಗ ಘನಫಲದ ಲೆಕ್ಕ ಹೇಳಿಕೊಡುತ್ತಿದ್ದರು. ಮೊದಲಾಗಿ ನನಗೆ ವರ್ಗಮೂಲ ಲೆಕ್ಕವೇ ತಿಳಿದಿರಲಿಲ್ಲ. ವರ್ಗಮೂಲ ಲೆಕ್ಕವಾದಮೇಲೆ ಘನಫಲದ ಲೆಕ್ಕವೆಂಗು ಕ್ರಮೇಣ ತಿಳಿಯಿತು. ಗಣಿತಪಾಠ ಕಲಿಸಲು ನನ್ನ ಸಹಾಯಕ್ಕೆ ಆಗ ಗೆಳತಿಯೊಬ್ಬಳು ಸಿಕ್ಕಿದಳು. ನನಗಿಂತಲೂ

ಹಿರಿಯವಳು, ಹೆಚ್ಚು ವಯಸ್ಸಾದವಳು ಮತ್ತು ಪಟ್ಟಣದ ಸುಂದರಿಯೆನಿಸಿದವಳು. ಶಾಲೆಯಲ್ಲಿ ಮುಗಿಸಿದ್ದ ಗಣಿತಪಾಠವನ್ನೆಲ್ಲಾ ನನಗೆ ಹೇಳಿಕೊಟ್ಟಳು. ನನ್ನಂತಹ ಪ್ರಯೋಜನವಿಲ್ಲದವನಿಗೆ ಲೆಕ್ಕಪಾಠ ಹೇಳಿಕೊಟ್ಟು ರಕ್ಷಿಸಿದಳಲ್ಲಾ ! ಎಂದೀಗ ಆಕೆಯನ್ನು ನೆನೆಯುತ್ತೇನೆ. ಪಾಠ ಹೇಳಿಸಿಕೊಂಡ ನಾನು ಮುಂದೆ ಹೇಗೆ ಗುಣಗ್ರಹಣಮಾಡಿದನೆಂದರೆ, ಶಾಲಾಬಾಲಕರಿಗೆಲ್ಲಾ ಮುಂದಾಗಿ ಸರಳ ಗಣಿತಪಾಠದಲ್ಲಿ ಮಾತ್ರವಲ್ಲ, ಬೀಜ ಗಣಿತಪಾಠವಲ್ಲಿಯೂ ವಿಚಾರಿಸಿದೆ.

ಆಗಿನ ನನ್ನ ವಿದ್ಯಾಭ್ಯಾಸದ ಜೊತೆಗೆ ಬೇರೆ ರೀತಿಯದೊಂದು ಹೆಚ್ಚಿಗೆ ಸೇರಿಕೊಂಡಿತ್ತು. ಕಲಿಯುವುದಲ್ಲದೆ ನಾನು ನೆಲದ ಸಾಗುವಳಿ ಕೆಲಸ ನೋಡಿಕೊಳ್ಳುತ್ತಿದ್ದೆ. ಹನ್ನೊಂದನೆಯ ವರ್ಷಕ್ಕೆ ಭೂಮಿ ಉಳುವುದನ್ನು ಕಲಿತಿದ್ದೆ. ಹನ್ನೆರಡನೆಯ ವಯಸ್ಸಿಗೆ ನೇಗಿಲು ಹಿಡಿದು ಹತ್ತುಗಂಟೆಯ ಕಾಲ ವ್ಯವಸಾಯ ಮಾಡುತ್ತಿದ್ದೆ. ನನ್ನೊಂದಿಗೆ ಮುದಿ ಕುದುರೆಯೊಂದು ಮತ್ತು ಅವರ ಜಗಳಗಂಟ ಮರಿಯೊಂದು ಕೆಲಸಮಾಡುತ್ತಿತ್ತು. ಸಾಗುವಳಿ ಮಾಡುವುದಲ್ಲದೆ ಜಗಳಗಂಟ ಕುದುರೆ ಮರಿಯನ್ನು ನೋಡಿಕೊಳ್ಳುತ್ತಿದ್ದೆ. ಜಗಳಗಂಟ ನೇಗಿಲನ್ನು ಮುಂದೆಕ್ಕೆಳೆದುಕೊಂಡು ಹೋಗುವುದೋ ಇಲ್ಲವೋ ಎಂದು ನೋಡಿಕೊಳ್ಳಬೇಕಾಗಿತ್ತು. ಇದರಿಂದ ನನ್ನ ಶ್ರಮವು ಎರಡರಷ್ಟಾಯಿತು. ಉದ್ದನೆಯ ಮತ್ತು ಬಲವಿಲ್ಲದ ನನ್ನ ದೇಹ ಮತ್ತು ಹಿಂದಿನ ಕಷ್ಟದಿನಗಳನ್ನು ನಾನು ಪುನಃ ಪುನಃ ನೆನೆಯುವಂತೆ ಮಾಡುವುದು. ಶ್ರಮೆಯ ತೋಟದಲ್ಲಿ ನನ್ನ ತೂಗಾಟ ನಡೆಯಿತು. ತೂಗಾಟವೂ ಬಿರುಸಿನಿಂದಲೇ ನಡೆಯಿತೆಂದು ಹೇಳುವೆ.

ವರ್ಷಾಂತ್ಯದ ಋತುಕಾಲದಲ್ಲಿ ಅಷ್ಟು ಹೆಚ್ಚು ಕೆಲಸವಿರಲಿಲ್ಲ. ಮನಸ್ಸು ಬೇರೇಕಡೆಗೆ ತಿರುಗಲು ಅವಕಾಶವಿತ್ತು. ಆಗ ಕುದುರೆಯೇರಿ, ಓಡಿಸಿ, ಪಂದ್ಯದ ಆಟವಾಡುತ್ತಿದ್ದುದು ಇನ್ನೂ ನನ್ನ ಸ್ಮರಣೆಯಲ್ಲಿದೆ. ಕುದುರೆ ಜೀನಿನ ಮೇಲೆ ಕುಳಿತು, ಇಳಿಯದೆ, ಬಾಗಿಬಗ್ಗಿ ಕಲ್ಲಂಗಡಿ ಹಣ್ಣನ್ನು ಕೈಯಿಂದೆತ್ತಿ ತೋರುತ್ತಿದ್ದೆ. ಹೀಗೆ ಹಣ್ಣನ್ನು ಎತ್ತಿ ತೋರಲು ಯಾರಿಗೂ ಆಗುತ್ತಿರಲಿಲ್ಲ. ಅದನ್ನು ಇದ್ದ ಜಾಗದಿಂದ ಕದಲಿಸಲೂ ಆಗುತ್ತಿರಲಿಲ್ಲ. ಕುದುರೆಯಿಂದ ಜಾರಿಕೊಂಡು ಇಳಿದುಬಿಡುವುದೇ ಆಗೊಂದು ವರಸೆಯಾಗಿತ್ತು. ರಾತ್ರಿ ಹೊತ್ತು ಕೂಗ್‌ಮೃಗವನ್ನು ಹುಡುಕಿ ಬೇಟೆಯಾಡಲು ಹೋಗುತ್ತಿದ್ದೆವು. ಆಗ,

ಎರವಲಾಗಿ ತಂದ, ಅರೆಬೆಂದ ಕೋಳಿಮಾಂಸವನ್ನು ತಿಂದು ನಾವು ಉಲ್ಲಾಸ ಪಡುತ್ತಿದ್ದೆವು. ಈಗಿನ ಸ್ಕೌಟುದಳ ಹೆಚ್ಚು ಚಮತ್ಕಾರ ಸಾಧನ ತೋರ ಬಲ್ಲದು ಎಂದುಕೊಂಡೆ. ನಾವಾಡಿದ ಆಟ, ತೋರಿದ ಚಮತ್ಕಾರ, ಮಾಡಿದ ಸಾಧನೆ ಇವು (ನಮ್ಮ ತುಂಟಾಟಗಳು) ನಾಗರಿಕತೆ ಮುಂದುವರಿದಂತೆಲ್ಲಾ ಅಳಿಸಿಹೋಯಿತು. ನಾವು ತೋರುತ್ತಿದ್ದ ಸಾಧನಕಾಲದಲ್ಲಿ ವಿದ್ಯಾಸಂಪತ್ತು ಕೂಡಿಕೊಂಡಿತ್ತು. ಇದೆಲ್ಲಾ ಹೆಚ್ಚಿನ ಸಂಪತ್ತೆಂದುಕೊಳ್ಳಬಹುದು. ನಮ್ಮ ಮುಂದಿನ ಪೀಳಿಗೆಯವರು ಇದನ್ನೆಲ್ಲಾ ಗುರಿತಿಸಿಟ್ಟುಕೊಳ್ಳಬೇಕಾದ ಅಂಶವಲ್ಲ ವೆಂದು ತಳ್ಳಿಬಿಡಬಹುದು.

ನಾನು ಓದುತ್ತಿದ್ದ ಪಟ್ಟಣದ ಶಾಲೆಯಲ್ಲಿ ಕ್ರಮವಾದ ಪಾಠಪದ್ಧತಿಯಿರ ಲಿಲ್ಲ. ವಿದ್ಯಾರ್ಥಿಗಳು ತಮಗೆ ಬೇಕುಬೇಕಾದ್ದನ್ನು ಓದಿ ಕಲಿಯಬಹುದಾ ಗಿತ್ತು. ನಾಲ್ಕುವರ್ಷ ಪಟ್ಟಣದ ಶಾಲೆಯಲ್ಲಿ ಕಲಿಯಬೇಕಾದುದನ್ನು ಕಲಿತೆ. ಮುಂದಣ ವಿದ್ಯಾಭ್ಯಾಸವನ್ನು ಬೇರೆ ವಿದ್ಯಾಶಾಲೆಯಲ್ಲಿ ಮುಂದುವರಿಸಬೇಕಾ ಯಿತು. ಬೇರೆ ಪಟ್ಟಣದಲ್ಲಿ ಕಲಿಯಲು ಹೋಗಬೇಕೆಂದಿದ್ದ ನನ್ನ ನೆರವಿಗೆ ಚಿಕ್ಕಪ್ಪ ಸಿಕ್ಕಿದರು. ಚಿಕ್ಕಪ್ಪ ವೃತ್ತಿಯಲ್ಲಿ ಕಮ್ಮಾರರು. ಹೆಚ್ಚು ಸಾಗುವಳಿ ಕೆಲಸ ಇವರಿಗಿರಲಿಲ್ಲ. ಓದುಪ್ರಿಯರೆನಿಸಿ ಸರ್ವಗ್ರಾಹಿಗಳೆನಿಸಿದವರು, ನನ್ನ ವಿದ್ಯಾಭ್ಯಾಸಕ್ಕೆ ಸಹಾಯಮಾಡಲೊಪ್ಪಿದರು. ಚಿಕ್ಕಪ್ಪನೊಂದಿಗೆ ನಿಂತು ವಿದ್ಯಾಭ್ಯಾಸವನ್ನು ಮುಂದುವರಿಸಿದೆ. ಈ ಸಹಾಯಕ್ಕೆ ಪ್ರತಿಯಾಗಿ ನಾನವರ ಗೋವುಗಳನ್ನು ರಕ್ಷಿಸಿ, ಹಾಲು ಕರೆದುಕೊಡುತ್ತಿದ್ದೆ. ಕುದುರೆಯನ್ನು ನೋಡಿ ಕೊಳ್ಳುತ್ತಿದ್ದೆನಲ್ಲದೆ, ಹದಿನಾರು ಪೌಂಡು ತೂಕದ ಸುತ್ತಿಗೆಯನ್ನು ಎತ್ತಿ ಕಬ್ಬಿಣವನ್ನು ಬಡಿದು ತಟ್ಟಿಕೊಡುತ್ತಿದ್ದೆ. ಈ ಹೊಸ ಪ್ರಪಂಚದಲ್ಲಿ ಅಡಿ ಯಿಡುತ್ತಾ ಮೆಲ್ಲನೆ ಬಂದೆ.

ಹೊಸ ವಿದ್ಯಾಶಾಲೆ ಆರಂಭವಾಗಿ ಆರುವಾರವಾಗಿತ್ತು. ಸುಧಾರಿಸಿ ಕೊಳ್ಳಲು ನನಗಾಗ ಕಷ್ಟವಾಯಿತು. ಹಿಂದಿನಂತೆ, ಹೊಸಪಾಠದೊಂದಿಗೆ ಹಳೆಯ ಪಾಠಗಳನ್ನು ನಾನು ಕಲಿತು ಸರಿಪಡಿಸಿಕೊಳ್ಳಬೇಕಾಯಿತು. ಗಣಿತ ಕಷ್ಟವೆಂದು ತೋರಿಬರಲಿಲ್ಲ. ಲ್ಯಾಟಿನ್, ರೋಮನ್ ಭಾಷೆ ಕಲಿಯಲು ಕಷ್ಟವೆನಿಸಿತು. ಅಮೊ, ಅಮಾಸ್, ಅಮಾಟ್ ಎಂಬ ಈ ಭಾಷೆಯ ಮೊದಲ ಪಾಠವೇ ತಲ್ಲಣಿಸುವಂತೆ ಮಾಡಿತು. ಇಂಗ್ಲಿಷಿನಲ್ಲಿ ಪ್ರೇಮವೆಂದರೇನು?

ಎಂದು ತಿಳಿಯದ ನನಗೆ ಲ್ಯಾಟಿನ್ ಭಾಷೆಯಲ್ಲಿ ಪ್ರೇಮ ಎಂಬುದಿಲ್ಲವೆ ಎಂದು ನಾನಾಗ ತಿಳಿಯಲಾರದವನಾಗಿದ್ದೆನು. ಶಾಲಾ ವಿದ್ಯಾರ್ಥಿನಿಯರು ಈಗಿನ ತರುಣಿಯರಂತೆ ಕಿಲಕಿಲನೆ ಅಸಭ್ಯ ನಗುವನ್ನು ನಗುತ್ತಿದ್ದರು. ಎರಡು ಬಿಂದು ವಿನ ನಡುವೆ ನೇರವಾಗೆಳೆದ ಅಡ್ಡಗೆರೆಯೇ ( ಸರಳರೇಖೆ) ಅತಿಚಿಕ್ಕದೆಂದು ತಿಳಿದೆ. ಇದು ಅತ್ಯಲ್ಪ ವಿಚಾರವೆಂಬ ಭಾವನೆ ಆಗ ನನಗುಂಟಾಯಿತು. ಈ ಸಿದ್ಧಾಂತವನ್ನು ನಾನು ಸಾಗುವಳಿ ಮಾಡುತ್ತಿದ್ದ ಕಾಲದಲ್ಲಿ ಊಟದ ಘಂಟೆಯ ಸದ್ದಾದಾಗ ಪರೀಕ್ಷಿಸಿ ಕಂಡುಕೊಂಡಿದ್ದೆನು.

ಆಗ ಮುಖ್ಯವಾಗಿ ಲ್ಯಾಟಿನ್, ಗ್ರೀಕ್, ಗಣಿತ ಮತ್ತು ಇಂಗ್ಲಿಷ್ ಕಲಿಸಿ ಕೊಡುತ್ತಿದ್ದರು. ಗ್ರೀಕ್ ಕ್ರಿಯಾಪದವೊಂದನ್ನು ಪರಿಚಯಮಾಡಿಕೊಂ ಡಾಗ, ಈ ಭಾಷೆಯ ಕ್ರಿಯಾಪದವೆಲ್ಲವೂ ಕ್ರಮಹೀನವಾದುದೆಂದು ತಿಳಿ ಯಿತು. ವೈದ್ಯಶಾಸ್ತ್ರ ಪರಿಚಯ ಮಾಡಿಕೊಳ್ಳುವುದಕ್ಕೆ ಮುಂಚೆ ನಾನು ಲ್ಯಾಟಿನ್ ಮತ್ತು ಗ್ರೀಕ್ ಭಾಷೆ ಕಲಿಯಬೇಕಾಯಿತು. ನನ್ನಲ್ಲಿ ಷೇಕ್ಸ್ ಪಿಯರ್ ಕೃತಿಗಳು ಅಲ್ಪಸ್ವಲ್ಪ ಲ್ಯಾಟಿನ್, ಗ್ರೀಕ್ ಕೃತಿಗಳೂ ಇದ್ದುವು. ವೈದ್ಯಕೀಯ ಪಾರಿಭಾಷಿಕವನ್ನು ಅರ್ಥಮಾಡಿಕೊಳ್ಳಬೇಕೆಂದಿದ್ದಾಗ, ಲ್ಯಾಟಿನ್, ಗ್ರೀಕ್ ಭಾಷಾಜ್ಞಾನದಿಂದ ಹೆಚ್ಚು ಪ್ರಯೋಜನವಾಯಿತು. ಈ ಭಾಷಾ ಜ್ಞಾನದಿಂದ ಪರೀಕ್ಷೆಯಲ್ಲಿ ಮತ್ತು ಪಠಿಸಬೇಕಾದ ವೇಳೆಯಲ್ಲಿ ನಿರರ್ಗಳವಾಗಿ ಪಠಿಸಿ ತೋರಬಹುದಾಗಿತ್ತು. ಶಬ್ದ ವ್ಯುತ್ಪತ್ತಿಯು ಚೆನ್ನಾಗಿ ತಿಳಿದಿದ್ದಲ್ಲಿ, ಯಾರಿಗಾದರೂ ಸರಿಯೆ ಉಚ್ಚರಿಸಿ ಹೇಳುವಾಗ ಕಷ್ಟವೆನಿಸುವುದಿಲ್ಲ. ಒಮ್ಮೆ ನನ್ನ ಭಾಷಾಜ್ಞಾನವನ್ನು ಗ್ರೀಕ್ ವಿದ್ವಾಂಸನೊಂದಿಗೆ ತೋರಿದೆ. ಅವನ ಮೆಚ್ಚುಗೆ ಪಡೆದೆ. ಇದರಿಂದ ಹೆಚ್ಚು ಪ್ರಯೋಜನವಾಯಿತು. ಖರ್ಚಿಗಿರಲಿ ಎಂದು ಜೇಬಿನಲ್ಲಿ ಒಂದು ನಾಣ್ಯವಿಟ್ಟುಕೊಂಡಿರುವಂತೆ, ಈ ಅಲ್ಪ ಭಾಷಾ ಜ್ಞಾನ ಯಾವಾಗಲಾದರೂ ನಮ್ಮ ನೆರವಿಗೆ ಬರುವುದು ಎಂದು ಖಚಿತ ವಾಯಿತು. ಲ್ಯಾಟಿನ್, ಗ್ರೀಕ್ ಭಾಷಾ ಪರಿಚಯದಿಂದ ವೈದ್ಯಶಾಸ್ತ್ರದ ಪಾರಿಭಾಷಿಕವನ್ನು ಅರ್ಥಮಾಡಿಕೊಂಡೆ. ಮುಂದೆ ವೈದ್ಯಜೀವನದಲ್ಲಿ ಈ ಭಾಷಾಜ್ಞಾನದಿಂದ ಆನಂದಪಡೆದೆ.

ಆಹಾರಕ್ಕಾಗಿ ನಾನು ಮೊದಲು ಎರಡು ವರ್ಷ ದುಡಿದೆ. ಬೆಲ್ಲದ ಪಾಕ ಕುದಿಯುತ್ತಿದ್ದ ಕೊಪ್ಪರಿಗೆಯನ್ನು ಮತ್ತು ಉರಿಯನ್ನು ನೋಡಿಕೊಳ್ಳುವುದು

ನನ್ನ ಕೆಲಸವಾಗಿತ್ತು. ಉರಿಯನ್ನು ನೋಡಿಕೊಳ್ಳುತ್ತಾ, ಲಾಂದ್ರದ ಬೆಳಕಿನಲ್ಲಿ ನಕ್ಷತ್ರಪಟವನ್ನು ನೋಡುತ್ತಿದ್ದೆ. ಆಗಿಂದಾಗ್ಗೆ ತಲೆಯೆತ್ತಿ ಆಕಾಶದ ಕಡೆಗೆ ನೋಡುತ್ತಿದ್ದೆ. ಹೀಗೆ ನೋಡಿ ದಿವ್ಯಾಕಾಶದ ವಿವರಣೆಯನ್ನು ಗುರುತಿಸಿಕೊಂಡೆ.

ಹೊಟ್ಟೆಗಾಗಿ ದುಡಿಯುವುದು ಕಷ್ಟವೆನಿಸಿತು. ಆಗ ನಾನೇ ಈ ಪಾಡನ್ನು ನೋಡಿಕೊಳ್ಳಲು ಪ್ರಯತ್ನಿಸಿದೆ. ಅನೇಕ ಬುಟ್ಟಿ ಉರುಳುಗೆಡ್ಡೆಯನ್ನು ಹೊತ್ತು ತಂದು ನನ್ನ ಕೋಣೆಯಲ್ಲಿ ರಾಶಿಹಾಕಿದ್ದರು. ವಾರಾಂತ್ಯದಲ್ಲಿ, ನಾನು ಏಳು ಮೈಲಿ ನಡೆದು ಮನೆಗೆ ಬರುತ್ತಿದ್ದೆ. ಬರುತ್ತಿದ್ದಾಗ ಒಂದು ಚೀಲದ ತುಂಬಾ ರೊಟ್ಟಿಯನ್ನು ತರುತ್ತಿದ್ದೆ. ಆಗ ಆಹಾರಸತ್ವ ಮತ್ತು ಉಷ್ಣಜನಕ ವಸ್ತು (ಕ್ಯಾಲೊರೀಸ್) ಜೀವಸಂರಕ್ಷಣೆಗೆ ವಿಟಮಿನ್ ಅತ್ಯಾವಶ್ಯಕ ವಸ್ತುವೆಂದು ಯಾರೂ ತಿಳಿದಿರಲಿಲ್ಲ. ಬೆಳೆಯುವ ಹುಡುಗನಿಗೆ ತಿಂಗಳುಗಟ್ಟಲೆ ಬರೀ ಉರುಳುಗೆಡ್ಡೆ, ರೊಟ್ಟಿ ಆಹಾರ ಸಾಲದು, ಒಪ್ಪದು; ಎಂದು ನನಗೆ ಈಗ ಕಂಡುಬಂತು.

ಹಿಂದೆ ನಾನು ವಿದ್ಯಾಶಾಲೆಯಲ್ಲಿ ನಾಲ್ಕು ವರ್ಷ ಕಲಿತದ್ದನ್ನು, ಇಂದಿನ (ವಿಶ್ವವಿದ್ಯಾಲಯದ) ಕಲಾಶಾಲೆಯ ವಿದ್ಯಾರ್ಥಿ ಎರಡು ವರ್ಷದಲ್ಲಿ ಕಲಿಯುತ್ತಾನೆ. ವಿಶ್ವಾವಿದ್ಯಾಲಯದ ಪದವೀಧರ (ಡಿಗ್ರಿಹೋಲ್ಡರ್)ರಿಗಿಂತಲೂ ನನ್ನ ಭಾಷಾಪರಿಚಯ ಚೆನ್ನಾಗಿತ್ತು. ಇಂಗ್ಲಿಷ್ ಪ್ರಬಂಧರಚನೆ ಮತ್ತು ಸಾಹಿತ್ಯಶಾಸ್ತ್ರದಲ್ಲಿ ಹೆಚ್ಚು ಪಾಂಡಿತ್ಯ ನನಗಿತ್ತು. ನನಗೆ ಇಂಗ್ಲಿಷ್ ಕಲಿಸುತ್ತಿದ್ದ ಕೆನೆಡಿಯನ್ ಅಧ್ಯಾಪಕ, ಕಲಿಯಲು ಇಂಗ್ಲಿಷ್ ಭಾಷೆಯೇ ಒಳ್ಳೆಯದೆಂದು ಹೇಳುತ್ತಿದ್ದ. ಚಲನಕಲನ (ಕ್ಯಾಲಿಕ್ಯುಲಸ್) ಭಾಗದವರೆಗೆ ಗಣಿತಶಾಸ್ತ್ರಾಭ್ಯಾಸಮಾಡಿದೆ. ಜರ್ಮನ್ ಭಾಷೆ ಮತ್ತು ಭಾಷಾ ವ್ಯಾಕರಣ ಕಲಿಯಲು ವ್ಯರ್ಥವಾಗಿ ಕಾಲಕಳೆದೆ. ವ್ಯಾಲನ್‌ಸ್ಟೀನ್ ಕೃತಿಗಳನ್ನು ಓದಿ ದಿನತಳ್ಳಿದೆ. ಇಂಗ್ಲಿಷಿನ ಕಾವ್ಯ, ಕವನ ಮತ್ತು ನಾಟಕವೆಂದರೆ ನನಗೆ ಹಿಡಿಸದು. ಜರ್ಮನ್ ಭಾಷೆಯೆಂದರೆ ದುಃಸ್ವಪ್ನ ಕಂಡಂತೆಯೇ ಆಗುವುದು.

ನನ್ನ ನಾಲ್ಕು ವರ್ಷದ ವಿದ್ಯಾಭ್ಯಾಸದಲ್ಲಿ ಹೆಚ್ಚು ಮೂಲಾಂಶಭಾಗ (ಫಂಡಮೆಂಟಲ್ ಫ್ಯಾಕ್ಟ್ಸ್)ವನ್ನು ತಿಳಿಯಲು ಅನುಕೂಲವಾಯಿತು. ಪೂರಾ ಅಂಶಭಾಗವನ್ನು ತಿಳಿಯಲು ನಾನು ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಲಿಲ್ಲ.

ಸಾಮಾಜಿಕ ಸಂಸರ್ಗದಿಂದ ವಿದ್ಯಾರ್ಥಿ ಹೆಚ್ಚು ಜ್ಞಾನ ಸಂಪಾದಿಸಿಕೊಳ್ಳ ಬಹುದು. ಸರಿಯಾಗುವಂತಹ ಉಡುಪಿಲ್ಲದಿದ್ದುದರಿಂದ ಮತ್ತು ತರಬೇತಿ ಸಾಲದಾದ ನನಗೆ, ಸಾಮಾಜಿಕ ಜೀವನದೊಡನೆ ಬೆರೆತು ಜ್ಞಾನಸಂಪಾದಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಸ್ವಲ್ಪ ಉತ್ತಮರೆನಿಸಿಕೊಂಡ ಸಂಸಾರವರ್ಗದವರು ಮುಂಬಾಗಿಲವರೆಗೆ ಮಾತ್ರ ನನ್ನನ್ನು ಯೋಗ್ಯರೀತಿಯಲ್ಲಿ ಕಂಡುಕೊಳ್ಳುತ್ತಿದ್ದರು. ಒಂದು ಪ್ರಬಂಧ ರಚಿಸಬೇಕಾದ ಸಮಯದಲ್ಲಿ ಫ್ಲಾಸಿಯೆಂಬ ಚಿಕ್ಕ ತರುಣಿಯೊಂದಿಗೆ ಕೆಲವು ಮೈಲಿಗಳಾಚೆ ತೋಡುತ್ತಿದ್ದ ಬುಗ್ಗೆಯಬಾವಿ ನೋಡಲು ಹೋಗಿದ್ದೆ. ನಾನು ಫ್ಲಾಸಿಯೊಂದಿಗೆ ಹೊರಟಾಗ, ಅವಳ ತಾಯಿ ನೋಡಿದ ಕುಹಕ ನೋಟ–ಇರಿಯುವಂತಹ ತೀಕ್ಷ್ಣ ನೋಟವಾಗಿತ್ತು. ಇದನ್ನು ನಾನು ಇಂದಿಗೂ ಮರೆಯಲಾರದವನಾಗಿರುವೆ. ಆ ನೋಟ ನನ್ನನ್ನು ಕುಗ್ಗಿಸಿತು. ವಿದ್ಯಾಭ್ಯಾಸ ನಾಲ್ಕು ವರ್ಷ ನಡೆಯಿತು. ಈ ಕಾಲದಲ್ಲಿ ವ್ಯರ್ಥ ಕಲ್ಪನೆಮಾಡಿಕೊಂಡು ನೈಶ್ಚಿತ ಮನೋಭಾವ ಬೆಳೆಸಿಕೊಂಡನೆಂದು ತಿಳಿಯುತ್ತೇನೆ.

ಹತ್ತೊಂಬತ್ತನೆಯ ವಯಸ್ಸಿಗೆ ವಿಶ್ವವಿದ್ಯಾಲಯದ ಪದವೀಧರನಾಗಿ ಹೊರಬಿದ್ದೆ. ಹೊರಬಿದ್ದ ವೇಳೆಯಲ್ಲಿ ನಡೆದ ಎರಡು ಸಂಗತಿ ನನ್ನ ಸ್ಮೃತಿಪಟಲದಲ್ಲಿ ಇನ್ನೂ ನಿಂತಿದೆ. ಪದವೀಧರರು ಆಗ ಯಾವುದಾದರೂ ಒಂದು ಆದರ್ಶವಾಕ್ಯವನ್ನು ಆರಿಸಿಕೊಳ್ಳಬೇಕಾಗಿತ್ತು. "ಹೊತ್ತು ಮೀರಿ ಊಟ ಮಾಡಬಾರದು" ಎಂಬ ವಾಕ್ಯವನ್ನು ಆರಿಸಿಕೊಂಡೆ. ನನ್ನ ಈ ಆಯ್ಕೆ ಯಾರಿಗೂ ಹಿಡಿಸಲಿಲ್ಲ, ರುಚಿಸಲಿಲ್ಲ. ಹೆಚ್ಚು ಉಚ್ಚಧ್ವನಿಯಿಂದ ಹೇಳಿಕೊಳ್ಳುವಂತಹ ಆದರ್ಶವನ್ನು ಮಿಕ್ಕವರೆಲ್ಲರೂ ಆರಿಸಿಕೊಂಡರು. ನಾನು ಆರಿಸಿಕೊಂಡ ಆದರ್ಶದಂತೆ ಕೊನೆಯವರೆಗೂ ನಡೆದೆ. ಕೆಲವರು "ಮೆಟ್ಟಿಲು ಮೆಟ್ಟಿಲಾಗಿ ಹತ್ತಿ ಮೇಲೇರಿ ಹೋಗೋಣ" ಎಂದು ಆದರ್ಶ ವಾಕ್ಯವನ್ನು ನೆನೆದರು. ಇನ್ನುಳಿದವರು, ಸಮಗ್ರ ಉಡುಪಿನಲ್ಲಿ ಆದರ್ಶ ತಳೆದರು. ಮೊದಲು, ಮೊಟಕು ಅಂಗಿಧರಿಸಿ ಪದವೀಧರರೆಂದು ಕರೆಯಿಸಿಕೊಳ್ಳಬೇಕಾಗಿತ್ತು. ಉದ್ದವಾಗಿ ಬೆಳೆದಿದ್ದ ನನಗೆ, ಮೊಟಕು ಅಂಗಿ ಚೆನ್ನಾಗಿ ಕಾಣಿಸುತ್ತಿರಲಿಲ್ಲ. ಆಗ ಅಂಗಿ ಮತ್ತು ಷರಾಯಿಯ ಬೆಲೆ ಹನ್ನೆರಡು ಡಾಲರ್‌ಗಳು. ಮೊಟಕು ಅಂಗಿ ಷರಾಯಿಗಳನ್ನು ಕೊಂಡು ಮೋಸಹೋದೆ. ಈ ಸಮಗ್ರ ಉಡುಪುಕೊಂಡ

ನಾನು ಅತಿ ಸಂಕಟಪಡುವಂತಾಯಿತು. ಈ ಉಡುಪು ವಿನೋದಾವಳಿಯಲ್ಲಿ ತೊಡುವಂತಹ ಉಡುಪಾಗಿತ್ತು. ವಿಚಿತ್ರವಾದ ನನ್ನ ಉಡುಪನ್ನು ನೋಡಿ ಯಾರೂ ನಗಲಿಲ್ಲ. ಇದು ನನ್ನ ಪುಣ್ಯ.

"ಮುಂದಿನ ನಡಿಗೆಯೇನು ?" ಎಂದು ಕುರಿತು ನಾನು ಭಾಷಣ ಮಾಡಿದೆ. ವಿದ್ಯಾಲಯದ ಮುಖ್ಯೋಪಾಧ್ಯಾಯರಿಗೆ ನನ್ನ ಕಷ್ಟಸ್ಥಿತಿ ತಿಳಿದಿತ್ತು. ಅವರು ನನ್ನನ್ನು ಕರುಣೆಯಿಂದ ನೋಡುತ್ತಿದ್ದರು. ಗಣಿತ ಶಾಸ್ತ್ರದಲ್ಲಿ ನಾನು ಗಳಿಸಿಕೊಂಡ ಪಾಂಡಿತ್ಯ ಮತ್ತು ಇತರ ಅಂಶಭಾಗವನ್ನು ಎತ್ತಿ, ನನಗೆ ಮತ್ತು ನನ್ನ ತಂದೆಗೆ ಅರ್ಥನಾಗುವಂತೆ ವಿವರಿಸಿದರು. ಮುಖ್ಯೋಪಾಧ್ಯಾಯರ ಹಿತವಚನ ಮತ್ತು ಕರುಣೆಯ ನುಡಿಯನ್ನು ಕೇಳಿ ನಾವು ವಿದ್ಯಾಲಯದಿಂದ ಹೊರಬಿದ್ದೆವು. ನಮಗೆ ದೊರೆತ ಈ ಆದರ, ಸ್ಮರಣೀಯವಾದುದೇ. ಈ ಸ್ಮರಣೆ ನನಗೆ ಹೊಸ ಅನುಭವವಾದಂತಾಯಿತು.

೩

ಐವತ್ತು ವರ್ಷದ ಹಿಂದೆ, ಹಳ್ಳಿಗಾಡಿನ ಹುಡುಗ ವೈದ್ಯಕೀಯ ವೃತ್ತಿ ಹಿಡಿಯಬೇಕೆಂದು ಮಹತ್ವಾಕಾಂಕ್ಷೆಯಿಂದಿದ್ದ ಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದು ಸುಲಭವಲ್ಲ. ವಕೀಲರಲ್ಲಿ ಮತ್ತು ವೈದ್ಯರಲ್ಲಿ ಮೂರನೆ ಎರಡು ಭಾಗದಷ್ಟು ಮಂದಿ ನೇರವಾಗಿ ನರಕಕ್ಕೆ ಹೋಗುತ್ತಾರೆ. ಈ ನಂಬಿಕೆ ನಮ್ಮ ಮನೆತನದಲ್ಲಿ ಬಂದಿತ್ತು. ಈ ನಂಬಿಕೆಯಿಂದ ಪಾರಾಗಿ ಉಳಿದುಕೊಂಡವರು ಗಡ್ಡ ಬೆಳೆಸಿಕೊಂಡ ಹೋಮಿಯೋಪತಿ ವೈದ್ಯರು ಮಾತ್ರ. ಆಗಿನ ಕಾಲದ ವೈದ್ಯರು ಮದ್ಯಪಾನ ಮಾಡುತ್ತಿದ್ದರಲ್ಲದೆ, ಹುಕ್ಕಾ ಸೇವನೆಯ ಚಟಕ್ಕೆ ಅಂಟಿಕೊಂಡಿದ್ದರು. ಪ್ರಾರ್ಥನಾವಿಧಿಗೆಂದು ಅವರು ಚರ್ಚಿಗೆ ಹೋಗುತ್ತಿರಲಿಲ್ಲ. ವೈದ್ಯನಾಗಬೇಕು, ವೈದ್ಯಕೀಯ ವೃತ್ತಿ ಹಿಡಿಯಬೇಕು ಎಂದು ಯಾರಾದರೂ ತಮ್ಮ ಕಾಂಕ್ಷೆ ತೋರಿಕೊಂಡಲ್ಲಿ, ಹೆಚ್ಚು ವಿರೋಧಗಳನ್ನು ಅವರು ಎದುರಿಸಬೇಕಾಗುತ್ತಿತ್ತು.

ವೈದ್ಯಶಾಸ್ತ್ರ ನನ್ನನ್ನೆಲ್ಲಿಗೆ ಒಯ್ಯುವುದು ? ಎಂಬ ಯೋಚನೆ ನನಗಾಗಿರಲಿಲ್ಲ. ನಾಲ್ಕನೆಯ ವಯಸ್ಸಿನಿಂದಲೇ ನಾನು ಬಾಟಲು ಹಿಡಿದು ಆಡುತ್ತಿದ್ದೆ. ಹಾಸಿಗೆ ಹಿಡಿದು ಮಲಗಿದ್ದ ನನ್ನ ತಾಯಿಯನ್ನು ನೋಡಲು ಬರು

ತ್ತಿದ್ದ ವೈದ್ಯರ ನಡೆವಳಿಕೆಯನ್ನು ತಿಳಿಯುತ್ತಿದ್ದೆ. ಆಗ ನನ್ನ ಮನಸ್ಸಿಗೆ ಯಾವ ಯಾವ ವಿಚಾರವೋ ಹೊಳೆಯುತ್ತಿತ್ತು. ಹೇಗೋ ಔಷಧಿಶಾಸ್ತ್ರ ನನ್ನ ಮನಸ್ಸಿಗೆ ನಾಟಬಿಟ್ಟಿತು. ಹೇಗೆ ನಾಟಿತೋ ಹೇಳಲಾರೆ. ಹಿಂದೆ ಯಾರೂ ನನ್ನ ಮನೆತನದಲ್ಲಿ ವೈದ್ಯವೃತ್ತಿ ಹಿಡಿದಿರಲಿಲ್ಲ. ಸಾಗುವಳಿದಾರರು ಮತ್ತು ಮಂತ್ರಜ್ಞರು ಮಾತ್ರ ಇದ್ದರು. ಈ ಕಸಬುದಾರರು, ಭಾನುವಾರ ಚರ್ಚಿನಲ್ಲಿ ಧರ್ಮೋಪದೇಶ ಮಾಡುತ್ತಿದ್ದರು. ವೃತ್ತಿಯ ಉದ್ದೇಶವೇನೇ ಇರಲಿ, ಚಿಂತೆಯಿಲ್ಲ; ವೈದ್ಯವೃತ್ತಿಯನ್ನೂ ಬಿಟ್ಟು ಮತ್ತಾವ ವೃತ್ತಿಯನ್ನೂ ಅವಲಂಬಿಸುವುದಕ್ಕೆ ನನ್ನ ಮನಸ್ಸು ಒಪ್ಪಲಿಲ್ಲ.

ಹಿಂದೆ ವೈದ್ಯರು ಕೆನ್ನೆಗೂದಲನ್ನು ಬೆಳೆಸಿಕೊಂಡು ವೃತ್ತಿಮಾಡುತ್ತಿದ್ದರು. ಆಗ ರೋಗಿಗಳನ್ನು ಪರೀಕ್ಷಿಸುವುದಕ್ಕಾಗಿ ಪ್ರತ್ಯೇಕ ತೆರೆಕೋಣೆಯಿರಲಿಲ್ಲ. ರೋಗಿಗಳ ಪರೀಕ್ಷೆ ಬಹಿರಂಗದಲ್ಲಿಯೇ ನಡೆಯುತ್ತಲಿತ್ತು. ರೋಗಿಗಳು ತಮ್ಮ ನಾಡಿ ಮತ್ತು ನಾಲಿಗೆಯನ್ನು ಇತರ ರೋಗಿಗಳ ಮತ್ತು ತುಚ್ಛ ಜನರ ಇದಿರಲ್ಲೇ ವೈದ್ಯರಿಗೆ ತೋರಬೇಕಾಗಿತ್ತು. ಮಳಿಗೆಯಲ್ಲಿ ಸಾಮಾನು ಕೊಡುವಂತೆ, ಕಾದು ಕುಳಿತುಕೊಂಡಿರುವ ಜಾಗವನ್ನು ಬಿಟ್ಟೇಳದೆಯೇ ವೈದ್ಯರು ರೋಗಿಗಳಿಗೆ ಔಷಧ ಕೊಡುತ್ತಿದ್ದರು. ನಾನು ಹುಡುಗನಾಗಿದ್ದಾಗ್ಗೆ ಒಮ್ಮೆ ತಂದೆಯವರು ನನ್ನನ್ನು ವೈದ್ಯಾಲಯಕ್ಕೆ ಕರೆದುಕೊಂಡು ಹೋಗಿದ್ದರು. ಆಗ ನನಗೆ ಬೆನ್ನುನೋವು ಬರುತ್ತಿದ್ದಿತಲ್ಲದೆ, ನೋವು ತೊಡೆಯ ಮೇಲ್ಭಾಗದವರೆಗೂ ಕಾಣಿಸುತ್ತಿತ್ತು. ನನ್ನ ಪ್ರಕೃತಿಯನ್ನು ಪರೀಕ್ಷಿಸಿದ ವೈದ್ಯ, ನಿಡಿಗಷ್ಟವನ್ನು ನೀಡಿಕೊಳ್ಳುತ್ತಾ "ಇವನಿನ್ನೂ ಹೆಚ್ಚು ಬೆಳೆಯಬೇಕು" ಎಂದು ಹೇಳಿದ. ಇದು ಒಳ್ಳೆಯ ತರ್ಕ ಎಂದುಕೊಂಡೆ. ರೋಗಪರೀಕ್ಷೆ ಸರಿಯಾಗಿ ಮಾಡಲಿಲ್ಲವೆಂದು ಕಂಡೆ. ಸ್ವಲ್ಪ ದಿನದಮೇಲೆ, ನನ್ನ ಮೂತ್ರಪಿಂಡದಲ್ಲಿ ಕಲ್ಲು ಸೇರಿದೆಯೆಂದು ಕಂಡಿತು. ಆಗಾಗ್ಗೆ ಕಾಣಿಸಿಕೊಳ್ಳುವ ನೋವಿಗೆ ಇದೆಯೇ ಕಾರಣವೆಂದು ತೋರಿಬಂತು. ಉಚಿತ ಪರಿಹಾರವೂ ನನಗೆ ದೊರೆಯಿತು.

ಆಗಿನ ವೈದ್ಯರು ವೈದ್ಯಕೀಯ ಶಾಲೆಗಳಿಗೆ ಹೋಗಿ ಶಿಕ್ಷಣ ತರಬೇತಿಯನ್ನು ಪಡೆಯುತ್ತಲೇ ಇರಲಿಲ್ಲ. ಔಷಧಪರಿಚಯ ಮಾಡಿಕೊಂಡು, ಅನುಭವಿಕ ವೈದ್ಯರಿಂದ ವೃತ್ತಿ ಕಲಿಯುತ್ತಿದ್ದರು. ಅವರಲ್ಲಿ ಒಂದಕ್ಕಿಂತ ಹೆಚ್ಚು ವೈದ್ಯಗ್ರಂಥಗಳಿರಲಿಲ್ಲ. ಕೆಲವು ವೈದ್ಯರು ವೈದ್ಯಾಲಯದಲ್ಲಿ ಮತ್ತು ವೈದ್ಯ

ಕೀಯ ಕಾಲೇಜಿನಲ್ಲಿ ಶಿಕ್ಷಣ ಪಡೆದಿದ್ದರು. ಹೀಗೆ ವೈದ್ಯಕೀಯ ಶಾಲೆಯಲ್ಲಿ ಶಿಕ್ಷಣ ಪಡೆದ (ಕುಕ್ ಮೆಡಿಕಲ್ ಕಾಲೇಜು) ಪ್ರತಿವರ್ಷವೂ ಐದೈದು ತಿಂಗಳಿನಂತೆ ಎರಡು ವರ್ಷಗಳ ಕಾಲ ಶಿಕ್ಷಣ ಪಡೆದಿದ್ದ ವೈದ್ಯನೊಬ್ಬ ನಮ್ಮ ಪಟ್ಟಣದಲ್ಲಿದ್ದ. ಅವನು ಕುಡುಕ ವೈದ್ಯ. ಸ್ಥಿಮಿತಬುದ್ಧಿಯಲ್ಲಿದ್ದಲ್ಲಿ ಅವನಿಗಿಂತ ಉತ್ತಮ ಬೇರೊಬ್ಬನಿಲ್ಲ ಎಂಬ ಅಭಿಪ್ರಾಯವಾಗಿತ್ತು. ನಮ್ಮ ವೈದ್ಯನ ಬುದ್ಧಿ ಯಾಪಾಗಲೂ ವ್ಯತ್ಯಾಸವಾಗಿರಲಿಲ್ಲ. ಈ ವೈದ್ಯ ತನ್ನ ಕಾರ್ಯಾಲಯವೊಂದನ್ನಿಟ್ಟುಕೊಂಡಿದ್ದನೇ ವಿನ ಔಷಧ ಮಾರುತ್ತಿರಲಿಲ್ಲ. ಉಪಜೀವನಕ್ಕಾಗಿ ಬಟ್ಟೆ ಇಳಿಸುವ ಕಾರ್ಖಾನೆಯಿಟ್ಟುಕೊಂಡಿದ್ದ. ಒಳಕಾರ್ಯಾಲಯ ಹೇಗಿರುವುದೋ ನೋಡಬೇಕೆಂದು ನನಗೊಮ್ಮೆ ಎನಿಸಿತು. ನೋಡಲು ಅವಕಾಶ ಸಿಗುವಂತಿರಲಿಲ್ಲ. ನನ್ನ ಮನೆಯವರು ಹೋಮಿಯೋಪತಿ ವೈದ್ಯರನ್ನಲ್ಲದೆ ಕೆನ್ನೆಗೂದಲಿನ ಅಥವಾ ಔಷದಾಗಾರವನ್ನಿಟ್ಟುಕೊಂಡಿದ್ದ ವೈದ್ಯರನ್ನು ಪ್ರೋತ್ಸಾಹಿಸುತ್ತಿರಲಿಲ್ಲ.

ಒಂದುದಿನ, ವೈದ್ಯನ ಒಳಾಡಿತ ಭಾಗವನ್ನು ಕಾಣಲು ಉಪಾಯ ಕಂಡುಕೊಂಡೆ. ವೈದ್ಯಾಲಯದೊಳಗೆ ನುಗ್ಗಿ ನೋಡಿ ಬರುವಷ್ಟು ಧೈರ್ಯ ಯಾರಿಗೂ ಇರಲಿಲ್ಲ. ನನ್ನ ಹಲ್ಲುಗಳು ಶುಭ್ರವಾಗಿ ಗಟ್ಟಿಯಾಗಿದ್ದವು. ಹಲ್ಲು ಕೀಳಿಸಿಕೊಳ್ಳಬೇಕೆಂಬ ನೆಪದಿಂದ ಔಷಧಾಲಯದೊಳಗೆ ನುಗ್ಗಿಹೋದೆ. ನನ್ನ ಪ್ರವೇಶಿಸುವಿಕೆಯಿಂದಲೋ ಅಥವಾ ಕಾಲಸಪ್ಪಳದಿಂದಲೋ ವೈದ್ಯ ಎಚ್ಚೆತ್ತ. ಕೊಳಕಿನ ಗೂಡಿನಂತಿದ್ದ ಕುರ್ಚಿಯಿಂದೆದ್ದು "ನಿನಗೇನುಬೇಕು? ಏನಾಗಿದೆ?" ಎಂದು ಕೇಳಿದ. "ಹಲ್ಲು ಕೀಳಿಸಿಕೊಳ್ಳಬೇಕು" ಎಂದೆ. "ಕೂಡು, ಯಾವ ಹಲ್ಲು ಕೀಳಬೇಕು?" ಎಂದೆನ್ನುತ್ತವನು, ಕೊಳಕು ಉಪಕರಣವಿಟ್ಟಿದ್ದ ಜಾಗದಿಂದ ಇಕ್ಕಳವೊಂದನ್ನು ತೆಗೆದುಕೊಂಡುಬಂದ. ನನ್ನ ಮೇಲು ದವಡೆಯ ಹಲ್ಲನ್ನು ಸುಲಭವಾಗಿ ಕೀಳಬಹುದೆಂದು ತಿಳಿದು ಅದನ್ನು ತೋರಿಸಿದೆ. ಅವನು ಒರಟೊರಟಾಗಿ ಹಿಡಿದೆಳೆದು ಕಿತ್ತಿದ. ರಕ್ತಧಾರೆ ಹರಿದು ಬರುತ್ತಿದ್ದುದರಿಂದ "ಬೋಗುಣಿಯಲ್ಲಿ ಉಗುಳು" ಎಂದು ಹೇಳಿ, ಪುನಃ ತನ್ನ ಕುರ್ಚಿಯೇರಿ ಕುಳಿತುಕೊಂಡ. ಹೆಚ್ಚುಹೊತ್ತು ನಾನು ಅಲ್ಲಿ ಕೂಡಲು ಅವಕಾಶ ಸಿಕ್ಕಿತು. ಅವನ ಒಳಾಡಳಿತ ಭಾಗವನ್ನು ಕೂಲಂಕಷವಾಗಿ ಪರೀಕ್ಷಿಸಿದೆ. ನಾನೆಣಿಸಿದಂತೆ ಅವನ ಬೀರುವಿನಲ್ಲಿ ಹೆಚ್ಚು ಪುಸ್ತಕಗಳಿದ್ದವು. ಆಡ

ಳಿತ ಭಾಗದಲ್ಲಿ ಮೂರು ಕುರ್ಚಿಗಳಿದ್ದವಲ್ಲದೆ, ಒಂದು ಮೇಜು, ಒಂದು ಒರಗು ಮಂಚವಿತ್ತು. ಮೇಜಿನ ಮೇಲೆ ವಿವರಿಸಲಾರದಷ್ಟು ಕೊಳಕು ಉಪ ಕರಣಗಳು ಬಿದ್ದಿದ್ದವು. ಅವುಗಳಲ್ಲಿ ನನ್ನ ಹಲ್ಲನ್ನು ಕೀಳಲು ಉಪಯೋಗಿ ಸಿದ ವೈದ್ಯನ ಇಕ್ಕಳವೂ ಇತ್ತು.

ವೈದ್ಯನ ಕೊಳಕು ಉಪಕರಣ ಮತ್ತು ಒಳಾಡಳಿತ ಭಾಗದ ಅಸ್ತವ್ಯಸ್ತತೆ ಯನ್ನು ನೋಡಿದ ನನಗೆ ಜಿಗುಪ್ಸೆ ಹುಟ್ಟಲಿಲ್ಲ. ಈ ವೈದ್ಯ ಇತರ ವೈದ್ಯರಂತೆ ಮಾತಾಪಿತೃಗಳ ರಕ್ಷಣೆಗಾಗಿ ದುಡಿದು ಜೀವಿಸುತ್ತಿದ್ದ. ಶಕ್ತಿಮೀರಿ ದುಡಿಯು ತ್ತಿದ್ದ ನಿಜ. ಬೇಸರವಾದಾಗ "ವ್ಹಿಸ್ಕಿ" ಕುಡಿದು ಚೇತನ ಹೊಂದುತ್ತಿದ್ದ. ಈ ವೈದ್ಯ ಒಂದುಸಾರಿ ಕುಡಿದು ಹಳ್ಳದಲ್ಲಿ ಮಲಗಿಬಿಟ್ಟ. ಇದರಿಂದ ನ್ಯುಮೋ ನಿಯಾ ಜ್ವರಕ್ಕೆ ಕಾರಣನಾಗಿ ತೀರಿಕೊಂಡ. ವೈದ್ಯ ಹೇಗೆ ಸತ್ತುಹೋದ ನೆಂದು ತಿಳಿಯಲು ಜನರು ಅಂಚೆ ಕಛೇರಿಯ ಬಳಿ ಸೇರಿ ತಮ್ಮೊಳಗೆ ತೀರ್ಮಾ ನಿಸಿಕೊಂಡರು. "ಈ ಸತ್ತ ವೈದ್ಯ ಒಳ್ಳೆಯವನೆ; ಸ್ಥಿಮಿತ ಬುದ್ಧಿಯಲ್ಲಿದ್ದಾಗ ಮಾತ್ರ" ಎಂದು ಹೇಳಿಕೊಂಡು ಸರಿದರು.

ಹೆಣವನ್ನು ಪೆಟ್ಟಿಗೆಯಲ್ಲಿಟ್ಟು ಹಳ್ಳಿಯ ಚರ್ಚಿಗೆ ತಂದರು. ಅಲ್ಲಿಯ ಪಾದ್ರಿ ಪಾನನಿರೋಧವನ್ನು ಕುರಿತು ಉದಾತ್ತವಾಗಿ ಭಾಷಣಮಾಡಿದ. ಹೆಣ ವನ್ನು ಹೂಳುವ ಸ್ಥಳಕ್ಕೆ ತೆಗೆದುಕೊಂಡುಹೋದರು. ಆಗ ಮಸಣವಿರಲಿಲ್ಲ. ಹೆಣವಿಳಿಸಿದುದು ವಿಚಿತ್ರವಾಗಿತ್ತು. ಹೆಣವಿಳಿಸಿ ಮುಚ್ಚಿದುದಾಯಿತು. ಅವನಿಗಿಂತಲೂ ಮುಂದಾಗಿ ಸತ್ತ ಅವನ ರೋಗಿಗಳೊಡನೆ ಕೂಡು ವಂತಾಯಿತು. ವೈದ್ಯ ಜೀವಿಸಿದ್ದಾಗ ಅವನ ಸಹಾಯವನ್ನು ಸ್ಮರಣೆಗೆ ತಂದು ಕೊಳ್ಳದ ಜನರು ಅವನು ಸತ್ತನಂತರ ಹೆಣ ಸಾಗಿಸುವುದಕ್ಕಾಗಿ ತಲಾ ಒಂದು ಡಾಲರಿನಂತೆ ಸಹಾಯಧನವನ್ನು ಕೊಟ್ಟರು. ಈ ಶಕ್ತಿವಂತ ವೈದ್ಯ ಸತ್ತ. ಇವನ ಶಕ್ತಿ, ದುಡಿತ, ಪ್ರತಿಫಲಾಪೇಕ್ಷೆಯಿಲ್ಲದ ಸೇವೆ ಮುಗಿದಿತ್ತು. ಸ್ಥಿಮಿತ ಬುದ್ಧಿಯಲ್ಲಿದ್ದಾಗ ವೈದ್ಯ ಒಳ್ಳೆಯವನೋ ಹೇಗೋ ಹೆಚ್ಚಾಗಿ ಮಕ್ಕಳು ಇವನೆಡೆಗೆ ಬರುತ್ತಿದ್ದರು. ಮಕ್ಕಳನ್ನು ಪ್ರೀತಿಸುವುದು ಒಳ್ಳೆಯದೆಂದು ಈ ವೈದ್ಯ ಕಂಡುಕೊಂಡಿದ್ದ. ಇವನ ಧೈರ್ಯ, ಸಾಹಸ, ಅಸಾಮಾನ್ಯ ವಾದುದು ಎಂದು ನನ್ನ ಅಲ್ಪ ಬುದ್ಧಿಗೆ ತೋರಿತು.

ಅದು ಹೇಗಾದರಿರಲಿ, ನಾನು ಮಾತ್ರ ವೈದ್ಯಶಾಸ್ತ್ರ ಓದಿಯೇ ತೀರಬೇಕೆಂದು ಮನಸ್ಸುಮಾಡಿದೆ. ವೈದ್ಯ ಶಿಕ್ಷಣಶಾಖೆಯನ್ನು ಸೇರುವುದಕ್ಕೆ ಮೊದಲು, ವೃತ್ತಿ ಅವಲಂಬಿಸಬೇಕೆಂದಿದ್ದವನು, ಒಬ್ಬ ಅಧ್ಯಾಪಕನ ಸಹಾಯದಿಂದ ಶಾಸ್ತ್ರಾಭ್ಯಾಸಮಾಡಬೇಕಾಗಿತ್ತು. ಅಧ್ಯಾಪಕನ ಈ ಸಹಾಯಕ್ಕಾಗಿ, ಅವನ ಕುದುರೆಯನ್ನು ನೋಡಿಕೊಳ್ಳುವುದು, ವೈದ್ಯಾಲಯವನ್ನು ಸ್ವಚ್ಛಗೊಳಿಸುವುದು ಮತ್ತು ಸಹಾಯಕನಾಗಿ ಸೇವೆ ಮಾಡುವುದು ವಿದ್ಯಾರ್ಥಿಯ ಕೆಲಸವಾಗಿತ್ತು. ಈ ಕಾಲದಲ್ಲಿ ನಡೆದ ವಿಚಿತ್ರ ಸಂಗತಿಯೊಂದನ್ನು ವಿವರಿಸುವೆ. ನನಗೆ ಪರಿಚಿತವಾಗಿದ್ದ ಪಟ್ಟಣದ ವಿದ್ಯಾರ್ಥಿಯೊಬ್ಬನು ಒಬ್ಬ ವೈದ್ಯನೊಂದಿಗೆ ಶಾಸ್ತ್ರಾಭ್ಯಾಸ ಮಾಡುತ್ತಿದ್ದ. ಅಭ್ಯಾಸ ಪ್ರಾರಂಭವಾಗಿ ಇನ್ನೂ ಮೂರು ವಾರಗಳಾಗಿರಲಿಲ್ಲ. ನನ್ನಲ್ಲಿ ಈ ವಿದ್ಯಾರ್ಥಿಯೊಮ್ಮೆ "ನಿತ್ಯವೂ ರಾತ್ರಿಯೆಲ್ಲಾ ನಿದ್ರೆಗೆಟ್ಟು ಎಚ್ಚರವಾಗಿರಬೇಕೆಂದು ಈ ಮೊದಲೇ ನನಗೆ ತಿಳಿದಿದ್ದಲ್ಲಿ ವೈದ್ಯವೃತ್ತಿ ಹಿಡಿಯಲು ನಾನು ಬರುತ್ತಲೇ ಇರಲಿಲ್ಲ" ಎಂದು ಹೇಳಿಕೊಂಡ. ಈ ವಿದ್ಯಾರ್ಥಿಗೆ ಕಲಿಯಲೆಷ್ಟು ಆಸಕ್ತಿಯಿತ್ತು ಎಂಬುದು ಇದರಿಂದ ವ್ಯಕ್ತವಾಗುವುದು.

ವೈದ್ಯ ವಿದ್ಯಾರ್ಥಿ ಮಾಡುತ್ತಿದ್ದ ಸೇವೆಗೆ ಬದಲಾಗಿ ಅವನ ಅಧ್ಯಾಪಕ ವೈದ್ಯ ತನ್ನ ಗ್ರಂಥಗಳನ್ನು ಓದಲು ಕೊಡುತ್ತಿದ್ದನಲ್ಲದೆ, ರೋಗಿಗಳನ್ನು ಪರೀಕ್ಷಿಸಲು ಹೋಗುವಾಗ ವಿದ್ಯಾರ್ಥಿಯನ್ನು ಜೊತೆಯಲ್ಲಿ ಕರೆದೊಯ್ಯುತ್ತಿದ್ದ. ರೋಗಲಕ್ಷಣ, ಚಿಕಿತ್ಸಾಭಾಗವನ್ನು ವಿದ್ಯಾರ್ಥಿಗೆ ಪರಿಚಯಮಾಡಿಕೊಡುತ್ತಿದ್ದ. ಒಮ್ಮೆ ಮುದಿತನದಿಂದ ಅಂಗಭಾಗ ಅಂಗಕ್ಷಯಕ್ಕೆ ಕಾರಣನಾಗಿದ್ದವನನ್ನು ನೋಡಿದೆ. ವೈದ್ಯರು, ವಿದ್ಯಾರ್ಥಿಗಳಿಗೆ ವೈದ್ಯಗ್ರಂಥ ಓದಿ ಅರ್ಥಮಾಡಿಕೊಳ್ಳಲಿಯೆಂದು ಬೋಧಿಸಿ, ವ್ಯಾಸಂಗಕ್ಕೆ ಸಹಾಯಮಾಡುತ್ತಿದ್ದರು. ಈ ಸಹಾಯ ನಿಜವಾಗಿಯೂ ವಿದ್ಯಾರ್ಥಿಗಳಿಗೆ ಪ್ರಯೋಜನವಾಗಿತ್ತು. ನನಗೆ ಕಲಿಸಿಕೊಡುತ್ತಿದ್ದ ವೈದ್ಯಗುರು, ಗ್ರೇ ಅವರು ಬರೆದ ಅಂಗವಿಮರ್ಶೆಯ ಗ್ರಂಥವನ್ನು ನಾನು ಓದಿ ಮನದಟ್ಟುಮಾಡಿಕೊಳ್ಳಲು ಸಹಾಯ ಮಾಡಿದನಲ್ಲದೆ, ನಿತ್ಯವೂ ನಾನು ಈ ಗ್ರಂಥದ ಹತ್ತು ಪುಟವನ್ನು ಮನನಮಾಡಿಕೊಂಡು ಒಪ್ಪಿಸುವಂತೆ ಅಭ್ಯಾಸ ಮಾಡಿಸಿದ.

ರೋಗಿಯನ್ನು ಸಮಕ್ಷನೋಡಿ ರೋಗಲಕ್ಷಣ ತಿಳಿಯಲು ನನಗೊಮ್ಮೆ ಅವಕಾಶ ಸಿಕ್ಕಿತು. ಒಬ್ಬ ಎಪ್ಪತ್ತಾರು ವರ್ಷದ ವೃದ್ಧ, ಮೇಲು ಮೆಟ್ಟಲಿಂದ ಬಿದ್ದು ಸೊಂಟಮುರಿದುಕೊಂಡನೆಂದು ಒಮ್ಮೆ ಸುದ್ದಿ ಬಂತು. ವೃದ್ಧನ ಸಹಾಯಕ್ಕೆಂದು ನಾನೂ ನನ್ನ ಜತೆಗಾರರೂ ವೈದ್ಯಗುರುವಿನೊಂದಿಗೆ ಹೋದೆವು. ಭಾರೋತ್ತೋಲನ ಯಂತ್ರ ಸಹಾಯದಿಂದ ಸೊಂಟಮುರಿದುಬಿದ್ದವನನ್ನು ಎತ್ತಿ ಹೊರಳಿಸಿದೆವು. ಹೊರಳಿಸಿ ನೋಡಿದಾಗ, ವೃದ್ಧನ ಕಾಲೊಂದು ನಾಲ್ಕು ಇಂಚು ಕೆಳಗೆ ಬಾಗಿಕೊಂಡಿತ್ತು. ವೈದ್ಯಗುರುವಿಗೆ ನಾನು "ರೋಗಿಯ ತೊಡೆಯೆಲುಬು ಮುರಿದಿದೆ. ಹೀಗೆ ಎಲುಬು ಮುರಿದಿರುವ ಚಿತ್ರವನ್ನು ಶಸ್ತ್ರವೈದ್ಯ ಶಾಸ್ತ್ರ ಗ್ರಂಥವನ್ನು ಓದಿ ತಿಳಿದಿದ್ದೇನೆ" ಎಂದು ಹೇಳಿದೆ. ವೈದ್ಯಗುರು ಮಾತನಾಡದೆ ರೋಗಿಯನ್ನು ಪರೀಕ್ಷಿಸಿ, ನೆಟ್ಟಗೆ ಅವನನ್ನು ಮಲಗಿಸಿದನು. ನಿಜವಾಗಿಯೂ ವೃದ್ಧನ ತೊಡೆಯೆಲುಬು ಮುರಿದಿತ್ತು. ಒಂದು ವಾರದೊಳಗೆ ಈ ವೃದ್ಧ ತೀರಿಕೊಂಡ. ಗುರುವಿನೊಂದಿಗೆ ಹಿಂದಿರುಗಿ ಬರುತ್ತಿದ್ದೆ. ಆಗ, "ವೈದ್ಯನಿಗೆ ಇರಬೇಕಾದ ಸೂಕ್ಷ್ಮದೃಷ್ಟಿಯ ನೋಟ ನಿನಗಿದೆ" ಎಂದು ನನ್ನನ್ನು ಹೊಗಳಿದನು.

ಮೊದಲವರ್ಷ ವೈದ್ಯಗುರುವಿನ ಸಹಾಯದಿಂದ ಕಲಿತ ವಿದ್ಯಾರ್ಥಿಯು ಮುಂದೆ ವೈದ್ಯಕೀಯ ಶಾಲೆಸೇರಿ ವ್ಯಾಸಂಗ ಮುಂದುವರಿಸಬೇಕಾಗಿತ್ತು. ನಾನು ನನ್ನ ವ್ಯಾಸಂಗ ಮುಂದುವರಿಸಲು, ನನ್ನ ಗುರುವಿನ ಸಲಹೆಯ ಮೇರೆ ವಾಯವ್ಯ ವಿಶ್ವವಿದ್ಯಾನಿಲಯವನ್ನು ಸೇರಿಕೊಂಡೆ. ಈ ವಿಶ್ವವಿದ್ಯಾನಿಲಯಕ್ಕೆ ಸೇರಿಕೊಳ್ಳಲು ಹೆಚ್ಚಿನ ಶಿಕ್ಷಣಾರ್ಹತೆ ವಿದ್ಯಾರ್ಥಿ ಪಡೆದಿರಬೇಕಾಗಿತ್ತು. ವರ್ಷಕ್ಕೆ ಏಳು ತಿಂಗಳಂತೆ ಮೂರು ವರ್ಷಗಳಕಾಲ ವೈದ್ಯಶಾಲೆಗೆ ಹೋಗಿ ಕಲಿಯಬೇಕಾಗಿತ್ತು. ವಿಶ್ವವಿದ್ಯಾನಿಲಯದ ಶಿಕ್ಷಣ, ವರ್ಗೀಕರಣ, ಒಂದು ರೂಢಿಬದ್ಧವಾದ ರೀತಿಯಲ್ಲಿ ನಡೆಸಲ್ಪಡುತ್ತಿತ್ತು. ಡಾ|| ಡೇವಿಸ್ ಎಂಬುವರು ತೋರಿಗೊಟ್ಟ ಶಿಕ್ಷಣ ಮಾರ್ಗಕ್ರಮವನ್ನು ಈ ವಿಶ್ವವಿದ್ಯಾನಿಲಯದವರು ಅನುಸರಿಸುತ್ತಿದ್ದರು.

ಈ ವಿಶ್ವವಿದ್ಯಾನಿಲಯದ ಪಾಠ ಅಭ್ಯಾಸಕ್ರಮ ನಿಜವಾಗಿಯೂ ಉತ್ತಮವಾಗಿತ್ತು. ಆಧುನಿಕ ವೈದ್ಯವಿದ್ಯಾರ್ಥಿ ತನ್ನ ಈಗಣ ಅನುಭವದೊಂದಿಗೆ ಇದನ್ನು ಹೋಲಿಸಿ ನೋಡಿದಲ್ಲಿ ತೃಪ್ತಿಪಡುವನು.

ಸಾಧಾರಣವಾಗಿ ಶಿಕ್ಷಣಭಾಗದಲ್ಲಿ ರಸಾಯನ ಶಾಸ್ತ್ರಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡುವುದಿಲ್ಲ. ರಸಾಯನ ಶಾಸ್ತ್ರಾಧ್ಯಯನಕ್ಕಾಗಿ ನಮ್ಮ ವಿಶ್ವ ವಿದ್ಯಾನಿಲಯದಲ್ಲಿ ಇಬ್ಬರು ವಿದ್ವಾಂಸರಿದ್ದರು. ಶಾಸ್ತ್ರೀಯಭಾಗ, ತಂತ್ರಾಭ್ಯಾಸಮಾಡಲು ಅಷ್ಟು ಅನುಕೂಲ ಅಲ್ಲಿ ಕಲ್ಪಿಸಿರಲಿಲ್ಲ. ಚಾರಿತ್ರಿಕ ಶಾರೀರಕ ಲಕ್ಷಣ, ರೋಗವಿದಾನ ತಿಳಿಯಲು ನಮಗೆ ಕೊಡುತ್ತಿದ್ದ ಜಾರುಗಾಜಿನ ದಪ್ಪ, ರೆಸ್ಟುರಾದಲ್ಲಿ ಗೋಮಾಂಸ ತಂದುಕೊಡುವಂತಹ ದಪ್ಪ ಗಾಜಿನ ತಟ್ಟೆಯಂತೆ ಪ್ರಕಾಶಬೇಧ್ಯವಾಗಿತ್ತು. ಇದರಿಂದ ರೋಗವಿದಾನ ತಿಳಿಯಲು ಅಥವಾ ತನಗೆ ತಿಳಿಯದ ವಿಷಯವನ್ನು ಗುರುವನ್ನು ಕೇಳಿ ತಿಳಿಯಲು ವಿದ್ಯಾರ್ಥಿಗೆ ಕಷ್ಟ ವಾಗುತ್ತಿತ್ತು. ಸಾರ್ಕೋಮಾ ಅಂಗಾಂಶ ನೋಡಲು ನನಗೆ ಕೊಟ್ಟಿದ್ದ ಜಾರು ಗಾಜು ಮಹೊಗನಿಮರದ ಕೆಂಪು ಛಾಯೆಯ ಕಂದುಬಣ್ಣದಂತಿತ್ತು. ಪರೀಕ್ಷೆ ಯಲ್ಲಿ ಈ ಜಾರುಗಾಜನ್ನು ಗುರಿತಿಸಿ ತೋರಿದ್ದಕ್ಕಾಗಿ ನನಗೆ ಹತ್ತು ಹೆಚ್ಚು ಅಂಕಿ ದೊರೆಯಿತು. ಈ ಜಾರುಗಾಜಿನಲ್ಲಿ ಅಂಗಾಂಶದ ಒಂದು ಸಣ್ಣರಂಧ್ರ ವನ್ನು ಸ್ಪಷ್ಟವಾಗಿ ನಾವು ಕಾಣುವುದಕ್ಕಾಗುತ್ತಿರಲಿಲ್ಲ.

ದುರ್ಜಯನೆಂದೆನಿಸಿದ್ದ ಜಾನ್ ಹಾರ್‌ಪರ್‌ಲಾಂಗ್ ನಮಗೆ ರಸಾಯನ ಶಾಸ್ತ್ರವನ್ನು ಚೆನ್ನಾಗಿ ಬೋಧಿಸುತ್ತಿದ್ದನು. ಇವನನ್ನು ನಾವು "ಜಾನಿ ಜಲ ಜನಕ" ಎಂದು ಕರೆಯುತ್ತಿದ್ದೆವು. ವಿಶ್ವವಿದ್ಯಾನಿಲಯ ಸೇರಿಕೊಳ್ಳುವ ಮೊದಲು ನಮ್ಮಲ್ಲಿ ಅನೇಕರು ರಸಾಯನ ಶಾಸ್ತ್ರಾಭ್ಯಾಸ ಮಾಡಿರಲಿಲ್ಲ. ಇದ ರಿಂದವರಿಗೆ ಪಾಠವನ್ನು ಧಾರಣಮಾಡಲು ಸ್ವಲ್ಪ ಕಷ್ಟವಾಯಿತು. ಈ ಕಷ್ಟ ವನ್ನು ದುರ್ಜಯ ರಸಾಯನ ಶಾಸ್ತ್ರಬೋಧಕ ಪರಿಹರಿಸಿದ. ಆದರೆ, ಈ ಬೋಧಕನ ದೈನ್ಯಾನುವರ್ತನೆ ಯಾತನಾತೀತವಾಗಿತ್ತು.

ಶಾರೀರಕ ಲಕ್ಷಣವನ್ನು ತರುಣ ಶಸ್ತ್ರವೈದ್ಯರು ಬೋಧಿಸುತ್ತಿದ್ದರು. ಗ್ರೇ ಅವರ ಇಡೀ ಶಾರೀರಕ ಶಾಸ್ತ್ರಗ್ರಂಥವನ್ನು ನಾವು ಕಂಠಪಾಠ ಮಾಡಬೇಕಾ ಯಿತು. ಪ್ರಾರ್ಥನಾವೇಳೆಯಲ್ಲಿ ತಡೆಯಿಲ್ಲದೆ ಭಕ್ತಿಮಂತ್ರ ಪಠಿಸುವ ರೀತಿ, ನಾವು ಈ ಗ್ರಂಥಭಾಗವನ್ನು ತಡೆಯಿಲ್ಲದೆ ಹೇಳುವಷ್ಟು ಕಂಠಪಾಠ ಮಾಡಿ ದೆವು. ಹಿಂದೆಯೇ ನಾನು ಮೊದಲ ಗುರುವಿನ ಸಹಾಯದಿಂದ ಕಂಠಪಾಠ ಮಾಡಿದ್ದೆನಾದ್ದರಿಂದ ಸುಲಭವಾಗಿ ಪಾರಾದೆ. ಮುಖ್ಯವಾದ ಪಾಠ ಯಾವುದು, ಮುಖ್ಯವಲ್ಲದ್ದು ಯಾವುದು ಎಂದು ತರಗತಿಯಲ್ಲಿ ಲಕ್ಷ್ಯಕೊಡುತ್ತಿರಲಿಲ್ಲ.

ನಾನು ಪುಸ್ತಕದಲ್ಲಿದ್ದುದನ್ನು ಮಾತ್ರ ತಿಳಿದುಕೊಂಡಿದ್ದೆನು. ಉದಾಹರಣೆ ಗಾಗಿ ಯಾವುದೋ ಒಂದು ನರಭಾಗ ನಲವತ್ತು ವಿಭಾಗವಾಗಿ ಕವಲುಗೊಂಡಿವೆ ಯೆಂದು ನಾವು ಪಾಠ ಕಲಿತ ಸಂದರ್ಭದಲ್ಲಿ ತಿಳಿದಿದ್ದೆವು. ನಾವು ಆ ನರ ವನ್ನು ಪ್ರತ್ಯಕ್ಷವಾಗಿ ಬೇರ್ಪಡಿಸಿ ಕತ್ತರಿಸಿ ನೋಡಿದಾಗ, ಈ ನರಭಾಗ ಮೂರು ಕವಲಾಗಿ ಒಡೆದಿದೆಯೆಂದು ಕಂಡೆವು. ಹೀಗೆ ಪ್ರತ್ಯಕ್ಷವಾಗಿ ಪರೀಕ್ಷಿಸಿ ದಾಗ ಆ ನರವು ನಲವತ್ತು ವಿಭಾಗವಾಗಿ ಕವಲುಗೊಂಡಿಲ್ಲವೆಂದು ತಿಳಿದು ಬಂತು.

ರೋಗಿಷ್ಠವಾದ ಅಂಗಾಂಗಗಳನ್ನು ಕೊಯ್ದು ಪರೀಕ್ಷಿಸಿ ತಿಳಿಯುವ ಭಾಗದಲ್ಲಿಯೂ ಅಷ್ಟೇ. ವೈದ್ಯವೃತ್ತಿಗೆ ಮುಖ್ಯವಾಗಿ ಆಗ ರೂಢಿಯಲ್ಲಿದ್ದ ಷ್ಟನ್ನು ಮಾತ್ರಾ ನಾವು ತಿಳಿದುಕೊಳ್ಳುತ್ತಿದ್ದೆವು. ಏಕೆಂದರೆ ಆ ತರುಣ ಶಸ್ತ್ರ ವೈದ್ಯರು ಮುಖ್ಯವಾಗಿ ಶರೀರ ರಚನಾಕ್ರಮವನ್ನು ಮುಖ್ಯವಾಗಿ ತಿಳಿಯಬೇಕಾ ಗಿತ್ತು. ಇಷ್ಟನ್ನೇ ತಿಳಿಯುವುದು ಸಾಕೆಂದು ಭಾವಿಸಿದ್ದರು. "ಶರೀರ ರಚನಾ ಕ್ರಮವು ಪ್ರಯೋಗದಲ್ಲಿ ಅತಿಮುಖ್ಯವಾದುದು" ಎಂದು ಒತ್ತಿಒತ್ತಿ ಶಸ್ತ್ರವೈದ್ಯರು ನಮಗೆ ಬೋಧಿಸುತ್ತಿದ್ದರು. ಗಾಳಿ ಕೊಳವೆಯ (ಶ್ವಾಸನಾಳದ) ರಚನಾಭಾಗ ವನ್ನು ನಾವು ಪರೀಕ್ಷಿಸಿದೆವು. ಗಂಟಲು ರೋಗ, ಉರಿಯೂತಗಳ ಕಾರಣವನ್ನರಿ ಯಲು ಬೇಗ ಶ್ವಾಸನಾಳವನ್ನು ಛೇದಿಸಿ ನೋಡಿದೆವು. ಇವಕ್ಕಾಗಿ ನಾವು ಪುಸ್ತಕವನ್ನು ನೋಡಬೇಕಾಗಿರಲಿಲ್ಲ.

ಅಂಗಚ್ಛೇದನಾಲಯದಲ್ಲಿ ಏನುಮಾಡುತ್ತಾರೆ ನೋಡೋಣವೆಂದು ಕುತೂಹಲದಿಂದ ಹಲವು ಜನರು ಬಂದು ಸೇರುತ್ತಿದ್ದರು. ಹೀಗೆ ಬರುತ್ತಿದ್ದ ವರ ಪೈಕಿ ಪೋಲಿಸಿನವರನ್ನು, ನಮ್ಮ ಕೆಲಸವೇನೇಯಿರಲಿ ಮರ್ಯಾದೆಯಿಂದ ಬರಮಾಡಿಕೊಳ್ಳುತ್ತಿದ್ದೆವು. ತರಗತಿಯಲ್ಲಿ ಗಲಭೆಯೆದ್ದಾಗ ಸದ್ದಡಗಿಸಲು ನಾವು ಇವರ ಸಹಾಯ ಪಡೆಯುತ್ತಿದ್ದೆವು. ಈ ಕಾರಣದಿಂದ ನಾವು ಇವ ರನ್ನು ಗೌರವದಿಂದಲೇ ಕಾಣಬೇಕಾಗಿತ್ತು. ಒಂದು ದಿನ ಸಂಜೆ ಮತಧರ್ಮ ಜ್ಞಾನವಿಭಾಗದ ವಿದ್ಯಾರ್ಥಿಗಳು ನಮ್ಮ ವಿಶ್ವವಿದ್ಯಾನಿಲಯಕ್ಕೆ ಭೇಟಿಕೊಟ್ಟರು. ವೈದ್ಯವಿದ್ಯಾರ್ಥಿಗಳಾದ ನಾವು ಬಹಳ ಪುಂಡಾಟದವರು ಎಂದೆನಿಸಿಕೊಂಡಿದ್ದೆವು. ಪ್ರಿನ್ಸ್ ಆಲ್ಬರ್ಟ್ ಕೋಟು ಧರಿಸುತ್ತಿದ್ದ ಅವರು, ಕೋಟಿನ ಬದಿಯ ಕಿಸೆ ಯಲ್ಲಿ ತಮಗೆ ಬಹುಮಾನವಾಗಿ ಕೊಟ್ಟ ವಸ್ತುಗಳನ್ನು ಇಟ್ಟುಕೊಳ್ಳುತ್ತಿದ್ದರು.

ಪ್ರಯೋಗಭಾಗವನ್ನು ಹೆಚ್ಚು ನಿಷ್ಣಾತವೈದ್ಯರು ನಮಗೆ ಬೋಧಿಸುತ್ತಿದ್ದರು. ಈ ಬೋಧನೆ ಉಪನ್ಯಾಸ ಮೂಲಕ ನಡೆಯುತ್ತಿತ್ತು. ನಡುವೆ ನಡುವೆ ಅನಾವಶ್ಯಕವಾದ ಹುಚ್ಚಾಟದ ನಡತೆಗೆ ಎಡೆಯಿತ್ತು. ಉಪನ್ಯಾಸ ಕೇಳಿ ಟಿಪ್ಪಣಿ ಬರೆದುಕೊಂಡ ವಿದ್ಯಾರ್ಥಿಗಳು ಎಲ್ಲವನ್ನೂ ಕಂಠಪಾಠ ಮಾಡಬೇಕಾಗಿತ್ತು. ನಾವು ಹತ್ತುಹತ್ತು ಮಂದಿ ಒಂದು ಸಂಗಡವಾಗಿದ್ದುಕೊಂಡು ಕಂಠಪಾಠಮಾಡಿ ಪರಸ್ಪರ ಹೇಳಿಕೊಳ್ಳುತ್ತಿದ್ದೆವು. ಹೀಗೆ ಹೇಳಿಕೊಳ್ಳುತ್ತಿದ್ದಾಗ ಕೆಲವಂಶಗಳು ಚೆನ್ನಾಗಿ ನಮಗೆ ತಿಳಿಯುತ್ತಿತ್ತು. ನನ್ನಲ್ಲಿ ಈಗಲೂ ಟಿಪ್ಪಣಿ ತೆಗೆದುಕೊಂಡ ಲೇಖನ ಪುಸ್ತಕಗಳಿವೆ. ಈಗಲೂ ನಾನು ವೈದ್ಯ ಪರೀಕ್ಷೆಯಲ್ಲಿ ಸುಲಭವಾಗಿ ಅಂಕಿಅಂಶಗಳನ್ನು ಗಳಿಸಿ ಉತ್ತೀರ್ಣನಾಗಬಲ್ಲೆ. ಅಂದರೆ ವಿದ್ಯಾರ್ಥಿದೆಸೆಯಲ್ಲಿದ್ದಾಗ ಕಂಠಪಾಠ ಮಾಡಿದ ಭಾಗಗಳನ್ನು ನಾನು ಮರೆತಿಲ್ಲ. ನಾವು ಹೆಚ್ಚಿಗೆ ಕಲಿತ ಭಾಗವನ್ನು ಚೆನ್ನಾಗಿಯೇ ಮನನ ಮಾಡಿಕೊಂಡಿರಬೇಕೆಂದು ವೈದ್ಯರು ಅಭಿಪ್ರಾಯಪಡುತ್ತಾರೆ.

ಹೆಚ್ಚಾಗಿ ನಾವು ಪಠ್ಯಪುಸ್ತಕಗಳನ್ನು ಓದಿಕೊಳ್ಳುತ್ತಿದ್ದೆವು. ಉಪನ್ಯಾಸಕ ನಮಗೆ ಬೋಧಿಸುತ್ತಿದ್ದ ವೇಳೆಯಲ್ಲಿ, ತನಗೆ ಪ್ರಯೋಗಿಕ ಸಂದರ್ಭದಲ್ಲಿ ಕಂಡುಬಂದ ಮುಖ್ಯಾಂಶವನ್ನು ಒತ್ತಿಒತ್ತಿ ನಮಗೆ ತಿಳಿಯುವಂತೆ ಹೇಳುತ್ತಿದ್ದ. ನಮಗೆ ಒಟ್ಟು ಹದಿನಾರುಮಂದಿ ಉಪನ್ಯಾಸಕರಿದ್ದರು. ಈ ವಾಯವ್ಯ ವಿಶ್ವವಿದ್ಯಾನಿಲಯದಲ್ಲಿ ಕಲಿಯಲು ನಾಲ್ಕುನೂರು ವಿದ್ಯಾರ್ಥಿಗಳಿದ್ದರು. ಸಣ್ಣ ಸಣ್ಣ ವಿದ್ಯಾರ್ಥಿ ಸಂಗಡಕ್ಕೆ ಪ್ರಯೋಗ ಶಿಕ್ಷಣ ಕೊಡಲು ಬೇರೆ ಅಧ್ಯಾಪಕರಿದ್ದರು. ಉಪನ್ಯಾಸಕ ಮಾತ್ರ ಇಡೀ ತರಗತಿಯ ವಿದ್ಯಾರ್ಥಿಗಳಿಗೆ ಬೋಧಿಸಬೇಕಾಗಿತ್ತು. ಪಠ್ಯಪುಸ್ತಕಗಳಿಗೆ ಹೆಚ್ಚು ಕೊರತೆಯಿದ್ದುದರಿಂದ, ಹೆಚ್ಚಾಗಿ ಅಧ್ಯಾಪಕರ ಉಪನ್ಯಾಸಗಳ ಮೂಲಕವಾಗಿಯೇ ನಾವು ಕಲಿಯಬೇಕಾಗಿತ್ತು. ಪ್ರಾಯೋಗಿಕ ಶಾಲೆಯಲ್ಲಿ ಅಧ್ಯಾಪಕರ ನೆರವು ನಮಗೆ ಅತ್ಯಾವಶ್ಯಕವಾಗಿತ್ತು. ನಮಗೆ ಏಕಾಣುಜೀವಶಾಸ್ತ್ರ ಬೋಧಿಸಲು ಇಬ್ಬರು ತರುಣ ಅಧ್ಯಾಪಕರಿದ್ದರು. ಈ ಶಾಸ್ತ್ರಸಂಬಂಧಕ್ಕೆ ಪ್ರಾಯೋಗಿಕ ಶಾಲೆಯಿರಲಿಲ್ಲ.

ಉಪನ್ಯಾಸ ಪದ್ಧತಿ ಈಗ ಹಿಂದಿನ ವೈಶಿಷ್ಟ್ಯತೆಯನ್ನು ಕಳೆದುಕೊಂಡಿದೆಯೆಂದು ಹೇಳಬಹುದು. ಶಾಸ್ತ್ರೀಯ ಸಂಶೋಧನೆ ನಡೆಸುವವರಿಗೆ ಸಾಧಾರಣವಾಗಿ ವಾಕ್ಸಾಮರ್ಥ್ಯವಿರುವುದಿಲ್ಲ. ಸುಲೋಚನ ಅಥವಾ ಕೃತಕ ಹಲ್ಲು

ಪಡೆದಿರುವ ಉಪನ್ಯಾಸಕರು, ತಮ್ಮ ವಾಕ್ಚಾತುರ್ಯದ ಏರಿಕೆಯಲ್ಲಿ ಕ್ರಮಗೆಡಿಸಿ ಕೊಳ್ಳುತ್ತಾರೆ. ರೂಢಿಬದ್ಧ ಕೆಲಸವನ್ನು ತೋರಿಕೊಡುವಾಗ ಒಬ್ಬನು ಸುಲೋಚನ ಧರಿಸಬಹುದು. ವಾಕ್ಚಾತುರ್ಯ ತೋರುವವನು ಮಾತ್ರ ಸುಲೋಚನ ಧರಿಸುವುದು ಉತ್ತಮವಲ್ಲ. ವಾಗೀಶ ಮಾತನಾಡುತ್ತ ಹೆಚ್ಚು ಅಂಶವನ್ನು ಒತ್ತಿ ನುಡಿಯುತ್ತಾನೆ. ರಾಜನೀತಿಜ್ಞ ಧಾರಾಳವಾಗಿ ನಿರೂಪಿಸುತ್ತಾನೆ. ಶಾಸ್ತ್ರೀಯ ಸಂಶೋಧನೆ ನಡೆಸುವವನು ಸಿದ್ಧಾಂತವನ್ನು ಎಚ್ಚರಿಕೆಯಿಂದ ಅಂಶಅಂಶವನ್ನು ಅಳತೆಮಾಡಿ ತಿಳಿಯುತ್ತಾನೆ. ವೈದ್ಯಶಾಸ್ತ್ರ ಸಂಶೋಧಕ ನಿಜವಾಗಿ ತಿಳಿಯುವುದು ಶಾಸ್ತ್ರಸಂಬಂಧ ಸಮಸ್ಯೆಯಲ್ಲಿ. ಈ ಸಂಶೋಧಕ ನಿಗೆ ವೈದ್ಯ ಸಂಶೋಧನಾಲಯದಲ್ಲಿ ಜಾಗವಿರಕೂಡದು. ಸಾಧಾರಣವಾಗಿ ವೈದ್ಯರಿಗೆ ಸಂಶೋಧನಾಸಮಸ್ಯೆಯ ಬಗೆಯನ್ನು ಅರ್ಥಮಾಡಿಕೊಳ್ಳಲು ಕಷ್ಟ ವಾಗುವುದು. ವೈದ್ಯರಿಗೆ, ಶಾಸ್ತ್ರೀಯರೀತಿ ಪ್ರಸೂತಿ ನಡೆಸುವ ಸಮಯದಲ್ಲಿ ಪ್ರವೇಶವಿರಬಾರದು. ಹೆರಿಗೆಯಾಗಿ ಸ್ವಚ್ಛಗೊಳಿಸಿ ಮತ್ತು ಮಗುವನ್ನು ತೊಳೆದನಂತರ ಎತ್ತಿಹಿಡಿಯಲು ಅವಕಾಶಕೊಡಬೇಕು.

ಒಳ್ಳೆಯ ಅಧ್ಯಾಪಕನೆಂದೆನಿಸಿದವನಿಗೆ ಪ್ರಮುಖ ಗುಣಗಳಿರಬೇಕು. ನಮ್ಮ ಅಧ್ಯಾಪಕರಲ್ಲಿ ಇಬ್ಬರಿಗೆ ಮಾತ್ರ ಈ ಅನುರಾಗ ಗುಣಗಳಿದ್ದವು.

ಪ್ರಸವಶಾಸ್ತ್ರ ವಿದ್ವಾಂಸ ಜಗಾರ್ಡರು, ಬಹಳ ಮೆಲ್ಲನೆ ಮಾತನಾಡು ತ್ತಿದ್ದರು. ಬೇಗಬೇಗ ಬರೆದುಕೊಳ್ಳುವ ಶಕ್ತಿವಂತ, ಅವರ ಇಡೀ ಉಪ ನ್ಯಾಸವನ್ನು ಒಂದಕ್ಷರವೂ ಬಿಡದೆ ಬರೆದುಕೊಳ್ಳಬಹುದಾಗಿತ್ತು. ಅವರ ಉಪ ನ್ಯಾಸ ಬೋಧನೆಯನ್ನು ನಾವು ಮನನಮಾಡಿಕೊಳ್ಳಬೇಕಾಗಿತ್ತು. ಹೆಚ್ಚಾಗಿ ಬೋಧನೆಯೇ ಮನನಕ್ಕಾಗಿ ಎಂದು ತಿಳಿಯಬೇಕಾಗಿತ್ತು. ಹಿಂದೆ ಕೆಲವು ದಿನಗಳ ಹಿಂದೆ ಹೇಳಿದ ಉಪನ್ಯಾಸ–ಬೋಧನೆಯನ್ನು ಒಪ್ಪಿಸೆಂದು ಯಾವಾಗ ಲಾದರೊಮ್ಮೆ ಕೇಳುತ್ತಿದ್ದರು. ಒಪ್ಪಿಸದಿದ್ದವ ಸಿಕ್ಕಿಕೊಳ್ಳುತ್ತಿದ್ದ. ಸುಲಭ ವಾಗಿ ಅವರು ಅವನನ್ನು ಬಿಡುತ್ತಿರಲಿಲ್ಲ.

ಜುಗಾರ್ಡ ಅವರಿಗೆ ಅವರ ವಿದ್ವತ್ತಿನ ಹೊಣೆ ತಿಳಿದಿತ್ತು. ಅವರು ಮಾತಿನಲ್ಲಿಯೂ ಮತ್ತು ಕೆಲಸದಲ್ಲಿಯೂ ತಮ್ಮ ಹೊಣೆಗಾರಿಕೆಯನ್ನು ತೋರಿ ಗೊಡುತ್ತಿದ್ದರು. "ಮೊದಲು ನೀವು ನಡೆಸಬೇಕೆಂದಿರುವ ಚಿಕಿತ್ಸೆಯಿಂದ ಯಾವ ಕೆಡಕಾಗುವುದು ಎಂದು ತಿಳಿದು ನೋಡಿರಿ" ಎಂಮ ಪ್ರಮಾಣವಾಕ್ಯ

ದಿಂದ ಎಚ್ಚರಿಸಿ ಹೇಳುತ್ತಿದ್ದರು. ಸ್ಪಷ್ಟವಾಗಿ ಕಂಡುಬಂದುದನ್ನು ಅವರು ನುಡಿಯುತ್ತಿರಲಿಲ್ಲ. "ನೋಡಿ ನಿಮಗೆ ಇದು ತಿಳಿದಿದೆಯೇ ?" ಎಂದು, ಒಂದು ಸೀಸದಕಡ್ಡಿಯನ್ನು ನೆಟ್ಟಗೆ ಮೇಜಿನಮೇಲೆ ನಿಲ್ಲಿಸಿ ಕೇಳುತ್ತಿದ್ದರು. "ನಿಮ್ಮ ರೋಗಿಗೆ ತಿಳಿವಿರುವ ವಿಚಾರ" ಎಂದೆನ್ನುತ್ತಾ ಹಿಂದೆ ನಿಲ್ಲಿಸಿದ ಸೀಸದ ಕಡ್ಡಿಯ ಜೊತೆಗೆ ಇನ್ನೊಂದನ್ನು ನಿಲ್ಲಿಸುತ್ತಿದ್ದರು. ಹೀಗೆ ನಿಲ್ಲಿಸಿ ನುಡಿದು, "ಎಷ್ಟು ಜನಕ್ಕೆ ಇದು ಅರ್ಥವಾಯಿತು ಹೇಳಿ ?" ಎಂದು ಕೇಳುತ್ತಿದ್ದರು. ಹೀಗೆ ಕೇಳುವಾಗ ಅವರು ಇನ್ನೊಂದು ಸೀಸದಕಡ್ಡಿಯನ್ನು ಎರಡರೊಂದಿಗೆ ಸೇರಿಸಿಡುತ್ತಿದ್ದರು. ಉತ್ತರ ಹೇಳಲು ಸಿದ್ಧರಾಗಿದ್ದ ವಿದ್ಯಾರ್ಥಿಗಳು ಈ ಮೂರು ಸೀಸದಕಡ್ಡಿಗಳನ್ನು ನೋಡಿ "ಮೂರು ಮುಖ್ಯಾಂಶ ತಿಳಿದುಕೊಂಡೆವು" ಎಂದುಬಿಡುತ್ತಿದ್ದರು. "ಇಲ್ಲ, ಹಾಗಲ್ಲ! ಎಂದೆನ್ನುತ್ತ ಜುಗಾರ್ಡ್ ಕೂಗಿ ಕೊಳ್ಳುತ್ತಾ "ನೀವು ತಿಳಿಯಬೇಕಾದುದು ಮೂರು ಮುಖ್ಯಾಂಶವಲ್ಲ–ನೂರ ಹನ್ನೊಂದು ಮುಖ್ಯಾಂಶ" ಎಂದೆನ್ನುತ್ತಿದ್ದರು. ರೋಗಿಗಳಲ್ಲಿ ನಂಬಿಕೆಯಿಟ್ಟು ಕೊಳ್ಳಬೇಕಾದುದು ಪವಿತ್ರವಾದ ಕೆಲಸವೆಂದು ಹೇಳುತ್ತಿದ್ದರು. ಸುತ್ತಿಗೆ ಬಡಿ ದಂತೆ, ಮುಖ್ಯಾಂಶವನ್ನು ಒತ್ತಿಒತ್ತಿ ಹೇಳಿ ನೆನಪಿನಲ್ಲಿಟ್ಟುಕೊಳ್ಳುವಂತೆ ಮಾಡುತ್ತಿದ್ದರು.

ನಮಗೆ ಫೆನ್‌ಜರ್ ಎಂಬ ಮತ್ತೊಬ್ಬ ಡೆನ್ಮಾರ್ಕ್ ದೇಶದ ಅಧ್ಯಾಪಕ ರಿದ್ದರು. ಇವರಾಡುತ್ತಿದ್ದ ಇಂಗ್ಲಿಷ್ ಅಷ್ಟು ಚೆನ್ನಾಗಿರಲಿಲ್ಲ. ಇವರ ಬೋಧನೆಯೇ ಕಷ್ಟ. ನಾವು ಸುಲಭವಾಗಿ ಅನುಸರಿಸಲಾಗುತ್ತಿರಲಿಲ್ಲ. ಈ ಅಧ್ಯಾಪಕರು ಶಾರೀರಕ ಲಕ್ಷಣವನ್ನು ಮತ್ತು ಶಸ್ತ್ರವಿದ್ಯೆಯನ್ನು ಚೆನ್ನಾಗಿ ತಿಳಿದು ಅದ್ವಿತೀಯರೆಂದೆನಿಸಿಕೊಂಡಿದ್ದರು. "ಶಸ್ತ್ರಕ್ರಿಯಾಗಾರದಿಂದ ಪ್ರಾಯೋ ಗಿಕ ಮಂದಿರಕ್ಕೆ ಬಿಡದೆ ಹಾದಿ ತುಳಿಯುತ್ತಿರಿ, ನಿಮಗೆ ಶಾರೀರಕ ಲಕ್ಷಣ ಚೆನ್ನಾಗಿ ತಿಳಿಯುವುದು" ಎಂದು ಹೇಳುತ್ತಿದ್ದರು. "ಶರೀರ ಲಕ್ಷಣ ತಿಳಿ ಯಲು ನೀವು ನಿತ್ಯನಿತ್ಯವೂ ಸೂಕ್ಷ್ಮದರ್ಶಕ ಕನ್ನಡಿ ನೋಡುವ ಅಭ್ಯಾಸವ ನ್ನಿಟ್ಟುಕೊಳ್ಳಿ" ಎಂದೆನ್ನುತ್ತಿದ್ದರು. ಆದ್ಯಂತವಾಗಿ ಇವರಿಗೆ ಶಾಸ್ತ್ರಲಕ್ಷಣ ಪರಿಚಯವಾಗಿತ್ತು. ಒಂದು ಬಾವಿನಿಂದ ಹನ್ನೆರಡು ಬೇರೆಬೇರೆಯಾದ ಅಂಗಾಂಶಸತ್ವವನ್ನು ಕಂಡು ತೆಗೆಯುತ್ತಿದ್ದರು. ತೆಗೆದು "ಈ ಬಾವು ಇಂತ ಹದು ಎಂದು ತಿಳಿದಿರುವೆ" ಎಂದೆನ್ನುತ್ತಿದ್ದರು. ಅವರು ಹೇಳಿದುದನ್ನು ಒಪ್ಪದ

ವಿದ್ಯಾರ್ಥಿ "ಆ ಹನ್ನೆರಡು ಅಂಗಾಂಶಸತ್ವದಲ್ಲಿ ಏನಿದೆಯೆಂದು ಹೇಳಿರಿ" ಎಂದು ಕೇಳುತ್ತಿದ್ದ. "ಜಾರುಗಾಜಿನಲ್ಲಿ ಕಂಡ ಅಂಶದಿಂದ ರೋಗಲಕ್ಷಣ ತಿಳಿದು ಚಿಕಿತ್ಸೆ ನಡೆಸಿದಲ್ಲಿ, ಶಾರೀರಕ ಲಕ್ಷಣ ತಿಳಿಯುವವರು ಹೆಚ್ಚಿಗೆ ತಪ್ಪನ್ನು ಮಾಡುವುದಿಲ್ಲ" ಎಂದು ತಮ್ಮ ಅಭಿಪ್ರಾಯ ಎಂದನ್ನುತ್ತಿದ್ದರು.

ನಾನು ಶಸ್ತ್ರಕ್ರಿಯೆ ನಡೆಸಿದಾಗ ಪಡೆದ ಎಲ್ಲಾ ಅಂಗಾಂಶಸತ್ವವನ್ನು ಸೂಕ್ಷ್ಮದರ್ಶಕ ಕನ್ನಡಿಯಲ್ಲಿ ಪರೀಕ್ಷಿಸಿ ನೋಡಬೇಕೆಂದು ಒತ್ತಾಯಪಡಿಸುತ್ತಿದ್ದರು. ಒಂದುಸಾರಿ ರೋಗಿಯ ದುಗ್ಧರಸವಾಹಕನಾಳ ಕ್ಷಯಕ್ಕೆ ಕಾರಣವಾಗಿತ್ತು. ಶಸ್ತ್ರಕ್ರಿಯೆ ನಡೆಸಿದಮೇಲೆ ಈ ಅಂಗಾಂಶಸತ್ವವನ್ನು ಪರೀಕ್ಷಿಸುವುದಕ್ಕಾಗಿ ನಿತ್ಯಸಿತ್ಯ ವಿದ್ಯಾರ್ಥಿಯೊಬ್ಬ ಶ್ರಮಿಸುತ್ತಿದ್ದ. ಒಮ್ಮೆ ಬೇಸರದಿಂದ ಅಂಗಾಂಶಸತ್ವವಿದ್ದ ಜಾರುಗಾಜನ್ನು ಬಿಸಾಡಿಬಿಟ್ಟ. ಒಂದುವಾರ ಕಳೆದನಂತರ ವೈದ್ಯ ಫೆನ್‌ಜರ್, ಆ ಜಾರುಗಾಜನ್ನು ನೋಡಬಯಸಿ ಅದನ್ನು ತರಲು ಹೇಳಿ ಕಳುಹಿಸಿದರು. ತನ್ನ ತಪ್ಪನ್ನು ಮರೆಸಿಕೊಳ್ಳಲು ವಿದ್ಯಾರ್ಥಿ, ಇನ್ನೂ ಪರೀಕ್ಷೆ ಮುಗಿದಿಲ್ಲವೆಂದು ಹೇಳಿದ. ಇನ್ನೊಂದುವಾರ ಕಳೆಯುವುದರೊಳಗೆ ವೈದ್ಯ ಮರೆತುಬಿಡುತ್ತಾನೆ, ತಪ್ಪನ್ನು ಪೂರಾ ಮುಚ್ಚಿಬಿಡಬಹುದು ಎಂದು ಅವನು ಆಲೋಚಿಸಿದ. ಆದರೆ ಅವನ ಆಲೋಚನೆ ಕುಸಿಯಿತು. ಮುಂದಿನವಾರ ಅವನನ್ನು ನೋಡಿದಕೂಡಲೇ ಫೆನ್‌ಜರ್ "ಜಾರು ಕನ್ನಡಿಯೆಲ್ಲಿ ?" ಎಂದವನನ್ನು ಕೇಳಿಬಿಟ್ಟರು. ನಿರ್ವಾಹವಿಲ್ಲದೆ ವಿದ್ಯಾರ್ಥಿ ತನ್ನ ತಪ್ಪನ್ನು ಒಪ್ಪಿಕೊಳ್ಳಬೇಕಾಯಿತು. ಫೆನ್‌ಜರ್ ಅವರಿಗೆ ಆಗ ಮಿತಿಮೀರಿದ ಕೋಪ ಬಂತು. ಕೋಪಗೊಂಡವರು ಹೊತ್ತಿದ್ದ ಉಪಕರಣವನ್ನು ಕೆಳಗೆ ಎತ್ತಿಹಾಕಿಬಿಟ್ಟರು. ಅವರ ಶಾಂತ ಮನೋಪ್ರಕೃತಿ ಬದಲಾಯಿಸಿತು. "ನೀನು ಸಾವಿರ ಬಾರಿ ಆ ಪಾಠವನ್ನು ಕಂಠಪಾಠಮಾಡಿ ಒಪ್ಪಿಸು. ಅಂಗಾಂಶಸತ್ವವನ್ನು ಬಿಸಾಡಿ ಚೆಲ್ಲಿ ಹೇಗೆ ಕಲಿತುಕೊಳ್ಳುವೆಯೋ ಕಾಣೆ! ಶಸ್ತ್ರಕ್ರಿಯೆ ನಿನಗೆ ಹೇಗೆ ಹಸ್ತಗತವಾದೀತು ?" ಎಂದುಬಿಟ್ಟರು.

ವಿದ್ವಾಂಸ ಫೆನ್‌ಜರ್ ಅವರ ಸ್ವಭಾವವೇನೇಯಿರಲಿ, ಅವರು ನನ್ನ ನೆಚ್ಚಿನ ಅಧ್ಯಾಪಕರ ಪೈಕಿ ಒಬ್ಬರಾಗಿದ್ದರು. ಅವರು ತೋರಿದ ಶ್ರಮೆ, ಶಕ್ತಿ ಪ್ರಭಾವದಿಂದ ನಾವು ಅವರನ್ನು ಶ್ರೇಷ್ಠರೆಂದು ತಿಳಿದಿದ್ದೆವು. "ನಿಲ್ಲಿಸದೆ ಕಲಿಯುತ್ತಿರು, ಫಲಿತಾಂಶ ಕಾಣುವವರೆಗೆ ಶಸ್ತ್ರಾಗಾರದಿಂದ ಪ್ರಾಯೋಗಿಕ

ಮಂದಿರದ ಹಾದಿ ತುಳಿಯುತ್ತಿರು" ಎಂದು ಒತ್ತಿ ನುಡಿದು ಪ್ರೇರೇಪಿಸಿ ನಮಗೆ ಮಾರ್ಗದರ್ಶಕರಾಗಿದ್ದರು. ಇದೇ ಅವರು ನಮಗೆ ಹೇಳಿದ ಮುಖ್ಯ ಸಂದೇಶ ವಾಕ್ಯ.

ಶಸ್ತ್ರಕ್ರಿಯೆಯಿಂದ ತಿಳಿಯುವ ಶಾರೀರಕ ಲಕ್ಷಣಭಾಗವನ್ನು ಮತ್ತು ಅಂಗಾಂಶಭಾಗವನ್ನು ಏಕಾರ್ಥವೆಂದು ತಿಳಿಯುತ್ತಾರೆ. ಹೀಗೆ ತಿಳಿಯುವುದು ಒಪ್ಪಿತ. ಶಸ್ತ್ರಕ್ರಿಯೆಯಿಂದ, ರೋಗಾರಂಭದ ದೆಶೆಯಿಂದ ಬೆಳೆದು ಬಂದುದನ್ನು ವೈದ್ಯ ಮತ್ತು ರೋಗಿ ಕಂಡುಕೊಳ್ಳುವರು. ಬೆಳೆದು ಬಂದುದನ್ನು ದೃಷ್ಟಿ ಯಿಟ್ಟು ನೋಡಬೇಕು. ಮಾನವ ಶರೀರದಲ್ಲಿ ಈ ಬೆಳವಣಿಗೆ ಕಾಣಿಸಿ ಕೊಳ್ಳುವುದಲ್ಲದೆ ಅಲ್ಲಿಯೇ ಅದು ಕೊನೆಗಾಣುವುದು. ಬೆಳವಣಿಗೆ ಮಾನವ ನಲ್ಲಿಯೇ ಮರೆಯಾಗಿ ಕೊನೆಗಾಣುವುದಕ್ಕೆ ಬಿಡಬಾರದು. ಮೊದಲ ಬೆಳ ವಣಿಗೆ ಕಂಡು, ಬೇರೆಬೇರೆ ರೀತಿಯಲ್ಲಿ ಅದು ಹೆಚ್ಚು ಹೆಚ್ಚಾಗುವುದಕ್ಕೆ ಮುಂಚೆಯೇ ಪರೀಕ್ಷಿಸಿ ಪ್ರಯೋಜನವಾಗುವ ರೀತಿಯಲ್ಲಿ ನಡೆಯಬೇಕು. ಶಸ್ತ್ರಕ್ರಿಯಾಭ್ಯಾಸದಲ್ಲಿ, ಶಾರೀರಕಲಕ್ಷಣ ತಿಳಿಯಬೇಕಾದ ಸಂದರ್ಭದಲ್ಲಿ ಈ ಸಾಧನೆ ನಡೆಯಬೇಕು.

ಈಗಿನ ವಿದ್ಯಾರ್ಥಿಗಳಂತೆಯೇ ನಾವು ಆಗಲೂ ಶ್ರಮಿಸುತ್ತಿದ್ದೆವು. ಪ್ರಯೋಗದಿಂದ ತಿಳಿಯುವುದಕ್ಕಿಂತಲೂ ಅಭ್ಯಾಸಬಲದಿಂದ, ಓದಿನ ಶಕ್ತಿ ಯಿಂದ ನೆನಪಿನಿಂದ ತಿಳಿಯುವುದು ಮೇಲು. ಓದಿನಶಕ್ತಿಯ ನೆನಪಿನಿಂದ ನಾವು ಅಂತ್ರಪುಚ್ಛ ರೋಗವನ್ನು (ಅಪೆಂಡಿಸೈಟಿಸ್) ಅಥವಾ ಪಿತ್ತಾಶ್ಮರಿ ರೋಗವನ್ನು ಕಂಡುಕೊಂಡೆವು. ಮಲಗಿದ ರೋಗಿಯನ್ನು ನೋಡುತ್ತಲೆ ಓದಿನ ಶಕ್ತಿ ಯಿಂದ, ಅಭ್ಯಾಸಬಲದಿಂದ ರೋಗಲಕ್ಷಣವನ್ನು ತಿಳಿಯುತ್ತಿದ್ದೆವು.

ಶೂಲಹರಮಾರ್ಗ ಅಥವಾ ಉಪಶಮನವಿಧಿಯನ್ನು ನಾವು ತಿಳಿದಿದ್ದೆವು. ರೋಗಲಕ್ಷಣ ತಿಳಿಯುವವರೆಗೆ ಪರಿಹಾರಾರ್ಥವಾಗಿ ರೋಗಿಗೆ ಉಪಶಮನವಿಧಿ ಯನ್ನು ಸೂಚಿಸಿ ಎಚ್ಚೆತ್ತುಗೊಳ್ಳುವಂತೆ ಮಾಡುತ್ತಿದ್ದೆವು. ಈಗಲೂ ಹೀಗೆ ಎಚ್ಚೆತ್ತುಕೊಳ್ಳುವಂತೆ ಮಾಡುತ್ತಾರೆ. ರೋಗಿಯ ಜೀವವನ್ನು ಉಳಿಸುವುದು ವೈದ್ಯನ ಮುಖ್ಯಕರ್ತವ್ಯ. ವೈದ್ಯನು ರೋಗಿಗಳ ಜೀವವನ್ನು ಆಗಿಂದಾಗ್ಗೆ ರಕ್ಷಿಸು ತ್ತಲೇ ಇರುತ್ತಾನೆ. ಶೂಲಹರಿಣಿಯನ್ನು ಕಂಡು ರೋಗಿ ಆಶ್ಚರ್ಯಪಡುತ್ತಾನೆ. ಪರಿಹಾರ ಮಾರ್ಗದಲ್ಲಿ ವೈದ್ಯ ತನ್ನ ಚತುರತೆಯನ್ನು ತೋರಬೇಕು. ರೋಗ

ಲಕ್ಷಣ ಅಥವಾ ಚಿಹ್ನೆಯನ್ನು ಶಾಸ್ತ್ರರೀತಿಯಲ್ಲಿ ಕಂಡು ಪರಿಹರಿಸಬಾರದು. ಹೀಗೆ ಪರಿಹರಿಸಿಯೆಂದು ನಮಗೆ ಹೇಳಿಕೊಡಲಿಲ್ಲ.

ರೋಗಲಕ್ಷಣ ಹೆಚ್ಚಾಗದು. ಅದಾಗಿಯೇ ಶಮನಗೊಳ್ಳುವುದು ಎಂದು ಕಂಡ ವೈದ್ಯ, ರೋಗಿಯನ್ನು ದಾದಿಯ ಕರುಣೆಗೆ ಒಪ್ಪಿಸಿಬಿಡುವ ಪದ್ಧತಿಯುಂಟು. ಹೀಗೆ ಒಪ್ಪಿಸಿ, ಶಮನವಾಗಲಿ ಎಂದು ಬಿಟ್ಟುಬಿಡುವುದು ಒಳ್ಳೆಯಪದ್ಧತಿಯಲ್ಲ. ರೋಗಿ ಪರಿಹಾರಕಂಡು, ಚೇತರಿಸಿಕೊಂಡು ಏಳಬಹುದು. ರೋಗಿಯ ಬೇನೆಗೆ ಔಷಧ ತಿಳಿದ ವೈದ್ಯ, ಔಷಧ ಯಾವರೀತಿ ಉಪಯೋಗವಾಗಬಹುದು ಎಂದು ತಿಳಿಯದೇ ಬಿಟ್ಟುಬಿಡುವುದೇಕೆ? ಯಾವ ರೋಗಕ್ಕೆ, ಯಾವ ಬೇನೆಗೆ ಯಾವ ಔಷಧಿ ಕೊಡಬೇಕು ಎಂದು ಪ್ರಯೋಗ ಪರೀಕ್ಷೆಯಲ್ಲಿ ತಿಳಿಯುತ್ತೇವೆಯಲ್ಲವೆ? ಸರಿಯಾದ ಔಷಧಿ ವಿನಿಯೋಗ ನಮ್ಮಿಂದಾಗಬೇಕು. ಪ್ರಯೋಗ ಪರೀಕ್ಷೆಯಲ್ಲಿ ಅಥವಾ ತಾಂತ್ರಿಕ ದೃಷ್ಟಿಯಲ್ಲಿ ಯೋಗ್ಯವೆಂದು ಕಂಡುಬಾರದ ಔಷಧವನ್ನು ಯಾರೂ ಉಪಯೋಗಿಸುವುದಿಲ್ಲ. ಪೊಟ್ಯಾಸಿಯಂ ಅಯೊಡೈಡ್ ಔಷಧಿಯನ್ನು ಗೂರಲು ರೋಗ (ಉಬ್ಬಸ)ದಿಂದ ನರಳುತ್ತಿರುವ ಗೂಳಿಕಪ್ಪೆಗೆ ಪ್ರಯೋಗಿಸಿದ್ದಲ್ಲಿ ಯಾವ ವ್ಯತ್ಯಾಸವೂ ಕಾಣಿಸದು. ಇದೇ ಔಷಧಿಯನ್ನು ವೃದ್ಧಾಪ್ಯದೆಶೆಯಿಂದ ಉಬ್ಬಸಪಡುತ್ತಿರುವವನಿಗೆ ಕೊಟ್ಟಲ್ಲಿ ಅವನ ಉಬ್ಬಸ ಶಮನವಾಗುವುದು.

ವೈದ್ಯವಿದ್ಯಾರ್ಥಿಯೆಂದೆನಿಸಿದ್ದ ನಾವು ಶಾಲೆಯಿಂದ ಉತ್ತೀರ್ಣರಾಗಿ ಬಂದಮೇಲೆ ಈಗಿನ ಯುವಕ ವೈದ್ಯರಂತೆ ಸರಿಸಮಾನರೆಂದುಕೊಳ್ಳುತ್ತಿದ್ದೆವು. ವೃತ್ತಿದೃಷ್ಟಿಯಲ್ಲಿ ನಾವು ಸರಿಸಮಾನರಾದವರೆ. ಹಿಂದೆ ನಾವು ಕನಸಿನಲ್ಲಿಯೂ ನೆನಸಲಾರದ, ತಿಳಿಯಲಾರದ ವಿಷಯಗಳನ್ನು ಆಧುನಿಕ ತರುಣ ವೈದ್ಯರು ತಿಳಿಯುತ್ತಾರೆ ನಿಜ. ಸಾಧಾರಣರೋಗ ಬೇನೆಗಳಿಗೆ ಮೂಲಕಾರಣಾಂಶ ನಮಗೆ ತಿಳಿದಿರುವಷ್ಟು ಆಧುನಿಕ ವೈದ್ಯರಿಗೆ ತಿಳಿದಿರುವುದಿಲ್ಲ. ಔಷಧಿ ಪ್ರಯೋಗ ನಮಗೆ ಗೊತ್ತಿಲ್ಲದಿದ್ದರೂ ಬೇನೆ ಪರಿಹಾರಕ್ರಮದಲ್ಲಿ ಹೇಗೆ ಕೆಲಸ ಮಾಡುವುದೆಂದು ತಿಳಿದಿದ್ದೆವು.

ವೈಜ್ಞಾನಿಕ ಜ್ಞಾನವನ್ನು ನಾವು ಎಷ್ಟೇ ಪಡೆದಿರಲಿ, ಔಷಧಿಶಾಸ್ತ್ರ ಪ್ರಯೋಗಮಾತ್ರ ಒಂದು ಕಲೆಯೇ ಆಗಿರುವುದು. ನಾಯಿಗಳನ್ನು ಪರೀಕ್ಷಿಸಿ ಎಷ್ಟೋ ವಿಚಾರ ಕಂಡುಕೊಂಡಿದ್ದೇವೆ. ನಾಯಿ ಬರೀ ವಾಸನೆಯಿಂದಲೇ

ಎಷ್ಟೋ ವಿಷಯ ತಿಳಿದುಕೊಳ್ಳುವುದು. ವಾಸನೆ ಯಾತರದು? ಎಲ್ಲಿಂದ ಬರುವುದು? ಎಂದು ನಾಯಿ ಸುಲಭವಾಗಿ ತಿಳಿಯುವುದು. ಅಲ್ಲಿ ಒಂದು ಮೊಲ ಇದೆಯೆಂದು ಭಾವಿಸೋಣ. ತಿಳಿಯುವುದಕ್ಕೆ ಮೊದಲೇ ನಾಯಿ ಅಲ್ಲಿ ಮೊಲವಿದೆ ಅದರಿಂದಲೇ ವಾಸನೆ ಬರುತ್ತಿದೆಯೆಂದು ತಿಳಿಯುವುದು. ಔಷಧಿ ಪ್ರಯೋಗವೂ ಈ ರೀತಿಯಲ್ಲಿಯೇ ನಡೆಯಬೇಕು. ರೋಗಿಯ ಹೊಟ್ಟೆಯಮೇಲೆ ಕೈಯಿಟ್ಟು ನೋಡಿದ ವೈದ್ಯ, ಒಳಗೇನೋ ಉಬ್ಬರವಿದೆ ಯೆಂದು ತಿಳಿಯುತ್ತಾನೆ. ಈ ತಿಳಿವಳಿಕೆ ಗಂಭೀರವಾದ್ದು. ವಾಸನೆಯನ್ನು ನಾಯಿ ಸೂಕ್ಷ್ಮವಾಗಿ ತಿಳಿದುಕೊಳ್ಳುವಂತೆ, ವೈದ್ಯ ರೋಗಿಯನ್ನು ನೋಡಿ, ಅವನ ಹೊಟ್ಟೆಯ ಮೇಲೆ ಕೈಯಿಟ್ಟು ಪರೀಕ್ಷಿಸಿ ತಿಳಿಯುತ್ತಾನೆ. ಹೀಗೆ ರೋಗಬೇನೆಯ ಪರಿಶೀಲನೆಯಾಗುವುದು ಒಳ್ಳೆಯದು.

ಮುಖಬೆಲೆಯಿಂದ ವೈದ್ಯನ ಚತುರತೆಯನ್ನು ತಿಳಿಯಬೇಡಿ. ರೋಗ ಸಾಮಾನ್ಯವಾದುದು, ಉಗ್ರವಾದುದು ಎಂದು ವೈದ್ಯ ಕಂಡುಕೊಳ್ಳುತ್ತಾನೆ. ಆಗ ಅವನ ಸಾಮರ್ಥ್ಯವನ್ನು ನಾವು ತಿಳಿಯಬಹುದು. ಬೇನೆಯೇನು? ಬೇನೆಯ ಅರ್ಥವೇನು? ಏರಿಳಿತವೇನು? ಎಂದು ವೈದ್ಯ ಕಂಡುಕೊಳ್ಳಬೇಕಲ್ಲದೆ, ಯಾವಾಗ ಔಷಧಪ್ರಯೋಗ ಬೇಗ ನಡೆಸಬೇಕು ಮತ್ತು ಔಷಧಿಯನ್ನು ತಡೆದು ಕೊಡಬೇಕು ಎಂಬುದನ್ನು ತಿಳಿದು ಪ್ರಯೋಗಿಸಬೇಕು.

ನಮ್ಮ ವಿದ್ಯಾಶಕ್ತಿ, ತಿಳಿವಳಿಕೆ ಎಷ್ಟೇಯಿರಲಿ. ವಿದ್ಯಾಭ್ಯಾಸ ಮುಗಿಸಿದ ಮೇಲೆ ನಾವು, "ರೋಗವನ್ನು ವಾಸಿಮಾಡುವ ಕಲೆ ನಮಗೆ ಪರಿಚಯವಾಗಿದೆ, ಉತ್ತೀರ್ಣರಾಗಿದ್ದೇವೆ" ಎಂದು ತಿಳಿದು ಪ್ರಶಸ್ತಿಪತ್ರಿಕೆ ಪಡೆದುಕೊಳ್ಳುತ್ತೇವೆ. ಅಧ್ಯಾಪಕರ ಮೂಲಕ ದತ್ತವಾದ ವೈದ್ಯವಿದ್ಯೆಯನ್ನು ಸ್ವಲ್ಪಮಟ್ಟಿಗೆ ಪಡಕೊಳ್ಳುತ್ತೇವೆ. ಬಿಡದೆ ಹೋರಾಡುವುದಕ್ಕೆ ಎಷ್ಟು ಶಕ್ತಿ ನಮಗೆ ಬೇಕೋ ಅಷ್ಟನ್ನು ಅಧ್ಯಾಪಕರು ನಮಗೆ ದಯಪಾಲಿಸಿರುತ್ತಾರೆ. ನಮಗೆ ಇಂತಹ ಹಳೆಯ ಅನುಭವಶಾಲಿಗಳಾದ ಅಧ್ಯಾಪಕರೇ ಬೇಕು. ಶ್ವಾಸಾಂಗಗಳಂತೆ ಅಧ್ಯಾಪಕರು ಅನ್ಯಪರರಾಗಿದ್ದರೂ ಅವರೆಲ್ಲ ಪ್ರತ್ಯೇಕ ಪ್ರತ್ಯೇಕವಾಗಿ ತಮ್ಮದೇ ಆದ ಸ್ವಂತ ಅನುಭವಜ್ಞಾನದಿಂದ ಬೆಳೆದುಬಂದವರಾಗಿದ್ದರು. ಶಿಕ್ಷಣ ಪಡೆದು ವೈದ್ಯರೆನಿಸಿದ ನಮ್ಮಲ್ಲಿಯೂ ವೈಶಿಷ್ಟ್ಯತೆಯಿದೆ. ನಮ್ಮ ಅನುಭವ, ಹೋರಾಟ, ಬುದ್ಧಿಬಲದಿಂದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿದ್ದೇವೆ. ರೋಗಿಯನ್ನು

ಕಂಡಾಗ ವೈದ್ಯ ತನ್ನದೇ ಆದ ವೈಶಿಷ್ಟ್ಯತೆಯಿಂದ, ಶಾಸ್ತ್ರೀಯ ಜ್ಞಾನದಿಂದ ಮಾನವ ಸ್ಥಿತಿಗತಿಯನ್ನರಿತು ಪ್ರಯೋಗಿಸುತ್ತಾನೆ. ಪ್ರಯೋಗ ಕಲೆ ತನಗೆ ಹಸ್ತಗತವಾಗಿದೆಯೆಂದು ತಿಳಿಯುತ್ತಾನೆ.

ವೈದ್ಯರು ಕೆಲವು ಸಂದರ್ಭಗಳಲ್ಲಿ ರೋಗ ತಡೆಗಟ್ಟುವ ವಿಧಾನವನ್ನು ಕಂಡುಹಿಡಿಯಲು, ವ್ಯರ್ಥವಾಗಿ ಕಾಲಕಳೆದು ತಮ್ಮ ಸಂಪಾದನೆಯನ್ನು ಹಾಳು ಮಾಡಿಕೊಳ್ಳುವರು ಎಂಬ ದೋಷಾರೋಪಣೆಗೆ ಗುರಿಯಾಗಿದ್ದಾರೆ. ಹೀಗೆ ಭಾವಿಸುವುದು ತಪ್ಪು. ಸಾಂಕ್ರಾಮಿಕ ರೋಗವನ್ನು ತಡೆಗಟ್ಟಿ, ಚಿಕ್ಕಮಕ್ಕಳಿಗೆ ಒಬ್ಬರಿಂದ ಮತ್ತೊಬ್ಬರಿಗೆ ಹರಡದಂತೆ ಕಾಪಾಡಿಕೊಂಡಲ್ಲಿ ಮಕ್ಕಳು ಅಭಿವೃದ್ಧಿಹೊಂದಿ ದೊಡ್ಡವರಾಗುವವರೆಗೆ ಅವರಿಗೆ ಸಂಧಿವಾತ ಅಥವಾ ಹೆಚ್ಚು ರಕ್ತ ಒತ್ತಡ ಇವುಗಳ ಭಯವಿರುವುದಿಲ್ಲ. ದಡಾರಕ್ಕಿಂತಲೂ ಸಂಧಿವಾತಕ್ಕೆ ಕಾರಣನಾಗಿರುವ ರೋಗಿಯಿಂದ ವೈದ್ಯನಿಗೆ ಹೆಚ್ಚು ಸಂಪಾದನೆಯಾಗುವುದು. ನಾನು ಬರೆದಿಟ್ಟಿರುವ ದಿನಚರಿ ಪುಸ್ತಕದ ಅಂಕಿ ಅಂಶಗಳಿಂದ ಅದನ್ನು ನಿರೂಪಿಸಬಲ್ಲೆ.

ವೈದ್ಯಜ್ಞಾನ ಹೆಚ್ಚಿಗೆ ಬೆಳೆಯಬೇಕು ಎನ್ನುವುದರಲ್ಲಿ ಯಥಾರ್ಥ ಕಾರಣವಿದೆ. ಒಂದುವೇಳೆ ವೈದ್ಯರು ತಪ್ಪುಮಾಡಬಹುದು. ಹೀಗೆಂದು ನಾನು ವೃತ್ತಿರಹಸ್ಯವನ್ನು ಬಹಿರಂಗಪಡಿಸುತ್ತಿರುವೆನೆಂದು ತಿಳಿಯಬೇಡಿ. ರೋಗಿಯನ್ನು ಅಲಕ್ಷಿಸಿ, ಸಾಯಲು ಬಿಟ್ಟನೆಂದು ತಿಳಿಯೋಣ. ರೋಗಿಯ ಹೆಣವನ್ನು ಮಣ್ಣಿನಲ್ಲಿ ಹೂಳಿಬಿಡುತ್ತಾರೆ. ನಮ್ಮನ್ನು ಎದುರಿನಲ್ಲಿಯೇ ಜರಿಯುತ್ತಾರೆ ನಿಜ. ಇವನ್ನು ನಾವು ಮರೆಯುವುದಿಲ್ಲ. ಸಂಕಟವನ್ನು ನಿವಾರಿಸಲಿ ಅಥವಾ ನಿವಾರಿಸಲಿಕ್ಕಾಗದಿರಲಿ ಅದು ಬೇರೆ ವಿಷಯ. ಅದು ದುರ್ದೈವದ ಮಾತು. ಅದೃಷ್ಟಹೀನ ವೈದ್ಯನ ಸ್ಮೃತಿಯಲ್ಲಿ ಇದು ನಿಲ್ಲುವುದು. ಜೀವನದಲ್ಲಿ ಎಪ್ಪತ್ತುವರ್ಷ ಕಳೆದವ ಎಂದಾದರೊಮ್ಮೆ ವೈದ್ಯನನ್ನು ಕೋರಿಯೇ ಇರುತ್ತಾನೆ. ವೈದ್ಯ ಎಪ್ಪತ್ತುವರ್ಷ ದಾಟಿದನೆಂದರೆ ಅವನ ಸ್ಮೃತಿಯಲ್ಲಿ ಸಂಕಟ ಪರಂಪರೆಯ :ನೆನಪು, ಅದನ್ನು ಸಾಧಿಸಲು ತಾನು ಪ್ರಯತ್ನಪಟ್ಟ ಬಗೆ ಚಿರವಾಗಿ ನಿಂತಿರುವುದು. ವೈದ್ಯ ತಾನು ಜಯಗಳಿಸಿಕೊಂಡುದುದನ್ನು ನೆನಪಿಗೆ ತಂದುಕೊಳ್ಳುವುದಿಲ್ಲ. ದೈವವನ್ನು ನೆನಸಿ, ಹೆದರಿದವನಂತೆ, ದುರಂತವನ್ನೇ ನೆನೆಸಿಕೊಳ್ಳುತ್ತಿರುತ್ತಾನೆ. ಕಾರಣ ತಿಳಿಯದ ಸಾಂಕ್ರಾಮಿಕ ರೋಗವೋ ಅಥವಾ ಹೃದಯ ಕಟ್ಟಿಕೊಂಡ ಬಗೆಯೋ, ರಕ್ತ ಹೆಪ್ಪುಗಟ್ಟಿಕೊಂಡ ಬಗೆಯೋ

ಅವರ ಸ್ಮರಣೆಗೆ ಬರುತ್ತಿದ್ದು ಅದು ಅವನನ್ನು ಪೀಡಿಸುತ್ತಲೇ ಇರುವುದು. ಹೀಗೆ ಪೀಡಿಸುವುದು ಮಾತ್ರವಲ್ಲ; ಅಪಾಯದಿಂದ ಉದ್ಧರಿಸಲು ಸಾಧ್ಯತೆ ಇರಲಿಲ್ಲವೆ? ಎಂದು ಬಾಧಿಸುತ್ತಿರುವುದು. ಹೆಚ್ಚಿನ ವಿದ್ಯಾರ್ಜನೆಗೆ ಇದು ಉತ್ತೇಜನೀಯವಾದದ್ದು. ಹೊಸ ವಿಚಾರಗಳ ತಿಳಿವಳಿಕೆಯಿಂದ ನಾವು ಹಳೆಯ ತಪ್ಪನ್ನು ತಿದ್ದಿಕೊಳ್ಳಲು ಅನುಕೂಲವಾಗುವುದು.

೪

ಗ್ರಾಮಾಂತರದ ಪದ್ಧತಿಯೇ ವಿಚಿತ್ರ. ರೋಗಿಗಳು ಹಳ್ಳಿಗಾಡಿನಲ್ಲಿ ಎಲ್ಲಿಯೋ ಇರುವರು. ವೈದ್ಯನು ರೋಗಿಗಳನ್ನು ನೋಡಿ ಚಿಕಿತ್ಸೆ ನಡೆಸಲು ಹಳ್ಳಿಹಾದಿ ತುಳಿದೇ ಹೋಗಬೇಕಾಗಿತ್ತು. ರೋಗಿಗಳಿರುತ್ತಿದ್ದುದು ಹಳ್ಳಿಗಳಲ್ಲಿ; ವೈದ್ಯನಿರುವುದು ಪಟ್ಟಣದಲ್ಲಿ ಎಂಬ ಭಾವನೆಗೆ ಆಸ್ಪದವಿರಲಿಲ್ಲ. ವೈದ್ಯರಿರುತ್ತಿದ್ದುದೂ ಗ್ರಾಮದಲ್ಲಿಯೆ. ಆದರೆ, ಹಳ್ಳಿಗಳಲ್ಲಿ ವಾಸಿಸುತ್ತಿರುವವರು ಅಲ್ಪ. ಇದರಿಂದ ಅಲ್ಲಿ ವೈದ್ಯವೃತ್ತಿಯಿಂದ ಜೀವನ ಸಾಗುವಂತಿರಲಿಲ್ಲ. ಪ್ರತಿಮನೆಯಲ್ಲಿಯೂ, ಅಲ್ಪ ಸ್ವಲ್ಪ ವೈದ್ಯಕ್ರಿಯೆಯೇನೋ ನಡೆಯುತ್ತಿತ್ತು. ಸಾಮಾನ್ಯವಾದುವುಗಳಿಗೆಲ್ಲಾ ರೂಢಿಯಲ್ಲಿದ್ದ ಔಷಧಗಳನ್ನು ತೆಗೆದುಕೊಂಡು ನೋವು ಬೇನೆಯನ್ನು ಸುಧಾರಿಸಿಕೊಳ್ಳುತ್ತಿದ್ದರು. ಆದರೆ ಬೇನೆಯು ಅತ್ಯುಲ್ಬಣಗೊಂಡು, ಸಹಿಸಲಾರದಷ್ಟಾದಾಗ ಜೀವಕ್ಕೆ ಧಕ್ಕೆಯೆಂದು ಹೆದರಿ ಪರಿಣಿತ ವೈದ್ಯನ ಸಹಾಯ ಕೋರುತ್ತಿದ್ದರು.

ಹಳ್ಳಿಗಾಡಿನ ಚಿಕಿತ್ಸೆಯಲ್ಲಿ ಎರಡುಬಗೆ—ಸಂಚಾರವಾಹನ. ರೋಗಿಯ ಹಾಸಿಗೆಯ ಬಳಿ ಹೋಗುವುದು. ಅಥವಾ ರೋಗಿಯ ಹಾಸಿಗೆಯ ಬಳಿಗೆ ಬಂದು ವೈದ್ಯ ಏನುಮಾಡುತ್ತಿದ್ದ ಎಂಬುದು.

ವೈದ್ಯ ರೋಗಿಯನ್ನು ನೋಡಲು ಒಂದು ಅಥವಾ ಎರಡು ಕುದುರೆ ಹೂಡಿದ ಹಗುರಗಾಡಿಯೇರಿ ಹೋಗುತ್ತಿದ್ದ. ಕುದುರೆ, ಕುದುರೆಗಾಡಿ, ಹಾದಿಗಾಡಿ ಅಥವಾ ಎರಡು ಚಕ್ರದ ವಾಹನ ಅಥವಾ ಅತಿಸಾಮಾನ್ಯ ವಾಹನವೆನಿಸಿದ್ದ ಕುಳ್ಳನೆಯ ಸೈಕಲ್ ತುಳಿಯುತ್ತಾ ಹೋಗುತ್ತಿದ್ದ. ರಸ್ತೆ ಸರಿಯಾಗಿದ್ದಲ್ಲಿ, ನಡೆದೋ, ಸೈಕಲ್ಲಿನ ಮೇಲೋ ಹೆಚ್ಚುದೂರವಿಲ್ಲದ ಗ್ರಾಮಾಂತರ ಭಾಗದಲ್ಲಿ ಸುತ್ತಾಡಿಬರಲು ಅಡ್ಡಿಯೇನಿರಲಿಲ್ಲ. ಸೈಕಲ್ ಹತ್ತಿ ತುಳಿಯುತ್ತಾ ಹೋಗು

ವುದರಲ್ಲಿ ಕೆಳಮಟ್ಟದ ಮನೋಭಾವವನ್ನು ಮುಚ್ಚಿಡುವುದಕ್ಕಾಗುತ್ತಿರಲಿಲ್ಲ. ಉದ್ದನೆಯ ಕಾಲುಳ್ಳ ಮನುಷ್ಯ ಚಲೋ ಸೈಕಲ್ ಹತ್ತಿದಲ್ಲಿ ಎಂದಿಗೂ ಕಸಬುದಾರ ವೈದ್ಯನೆನಿಸಿಕೊಳ್ಳುವುದಿಲ್ಲ.

ಸ್ವಾಭಾವಿಕವಾಗಿ ರೋಗ ಹೆಚ್ಚಾಗುತ್ತಿದ್ದುದು ಅಥವಾ ವೈದ್ಯರಿಗೆ ಕರೆ ಬರುತ್ತಿದ್ದುದು, ಹವಾಗುಣ ತೀರ ಬಿಸಿಯೇರಿದಾಗ, ತೀರ ಚಳಿ ಕಂಡಾಗ ಅಥವಾ ಗಾಳಿಯಿದ್ದಾಗ, ವಿವರಿಸಲಾರದಷ್ಟು ರಸ್ತೆಕೆಟ್ಟುಹೋಗಿದ್ದಾಗ. ರೋಗ, ಸಾಂಕ್ರಾಮಿಕವಾಗಿ ಹೆಚ್ಚಾಗಿದ್ದಾಗ ಕರೆಗೆ ತಡೆಯೇ ಇರುತ್ತಿರಲಿಲ್ಲ. ಹವೆ ಕೆಟ್ಟು, ರೋಗ ಉಪದ್ರವ ಮಿತಿಮೀರಿದಂತಹ ಸಂದರ್ಭಗಳಲ್ಲಿ ನಾನು ಇಡೀದಿನ ಹಗುರಗಾಡಿಯೇರಿ ಹೋಗುತ್ತಿದ್ದುದುಂಟು. ವಸಂತಕಾಲ ದಲ್ಲಿ ಹವಾಗುಣ ಚೆನ್ನಾಗಿದ್ದ ಕಾಲದಲ್ಲಿ ನಮಗೆ ಗ್ರಾಮಾಂತರದಿಂದ ಕರೆ ಬರು ತ್ತಿದ್ದುದು ವಾರಕೊಮ್ಮೆ ಅಥವಾ ಹೆಚ್ಚುದಿನಗಳಿಗೊಮ್ಮೆಯೇ. ರಸ್ತೆಯು ವಾಹನ ಸೌಕರ್ಯಕ್ಕೆ ಅನುಕೂಲವಾಗಿದ್ದಾಗ, ಗ್ರಾಮಂತರದ ಜನರು ಆರೋಗ್ಯವಾ ಗಿರುವಂತೆ ಕಾಣುತ್ತಿದ್ದರು. ಹೇಗೋ ಇವೆಲ್ಲ ವೃತ್ತಿಲಕ್ಷಣವೆಂದು ತಿಳಿಯು ತ್ತಿದ್ದೆವು. ಈ ಶ್ರಮಸಾಧ್ಯವಾದ ಕೆಲಸಕ್ಕೆ, ಸುತ್ತಾಟಕ್ಕೆ ಹೆದರಿ ಗ್ರಾಮಂತರ ಚಿಕಿತ್ಸೆಯ ಕೆಲಸ ನಮಗೆ ಬೇಡವೇಬೇಡವೆಂದು ತರುಣ ವೈದ್ಯರು ಹಿಂದೆ ಬೀಳುತ್ತಿದ್ದರು. ನನಗಾದರೋ ಗಾಡಿಯಲ್ಲಿ ಅಲೆಯುವುದು, ಹಳ್ಳಿಗಾಡಿಗೆ ಹೋಗಿ ರೋಗಿಗಳನ್ನು ಪರೀಕ್ಷಿಸಿ ವೈದ್ಯವೃತ್ತಿ ನಡೆಸುವುದು ಅಭ್ಯಾಸವಾಗಿ ಹೋಗಿತ್ತು. ಶ್ರಮಸಾಧ್ಯವಾದ ಕೆಲಸವೆಂದು ತಿಳಿದೂ ನಾನು ಬಗ್ಗಿಹೋದ ಈ ವೃತ್ತಿಯನ್ನು ಸಂತೋಷದಿಂದಲೇ ಮಾಡುತ್ತಿದ್ದೆ. ಈ ರೀತಿಯಲ್ಲಿ ನನಗೂ ಸಂಪಾದನೆಯಾಗುತ್ತಿತ್ತು.

ಚಳಿಗಾಲದಲ್ಲಿ ಚೆನ್ನಾಗಿದ್ದ ರಸ್ತೆಯಲ್ಲಿ ಗಂಟೆಗೆ ಏಳು ಮೈಲಿ ವೇಗದಲ್ಲಿ ನಾವು ಹಗುರಗಾಡಿಯೇರಿ ಹೋಗುತ್ತಿದ್ದೆವು. ಹೆಚ್ಚು ಕೆಸರು ಮಣ್ಣಾಗಿದ್ದ ರಸ್ತೆಗಳಲ್ಲಿ ಮನುಷ್ಯನ ನಡಿಗೆಯ ವೇಗಕ್ಕಿಂತ ಹೆಚ್ಚಾಗಿ ಕುದುರೆ ಸಾಗುತ್ತಿರ ಲಿಲ್ಲ. ಆಗ ಗಂಟೆಗೆ ಮೂರು ಮೈಲಿಯಂತೆ ಗಾಡಿ ಸಾಗುತ್ತಿತ್ತು. ಗಾಡಿಗೆ ಹೂಡಿರುವ ಹೇಸರ ಕತ್ತೆ ತಡೆಯಿಲ್ಲದೆ ಗಂಟೆಗೆ ಎರಡುವರೆ ಮೈಲಿಯಂತೆ ದಾರಿ ಸವೆಸುತ್ತಿತ್ತು. ಬಲವಂತ ಮಾಡಿದಲ್ಲಿ, ವೇಗದ ಮಿತಿ ಎರಡು ಮೈಲಿಗೆ ಇಳಿಯು ತ್ತಿತ್ತು. ಹೆಚ್ಚು ಬಲವಂತ ಮಾಡಿದಾಗ, ಚಲಿಸದೆ "ಈಗೇನು ಮಾಡುವೆ ?"

ಎಂದು ಕೇಳುವ ರೀತಿ ನಿಂತುಬಿಡುತ್ತಿತ್ತು. ಈ ಪ್ರಶ್ನೆಗೆ ಒಡೆಯ ಉತ್ತರ ಹೇಳಬೇಕಾಗುತ್ತಿತ್ತು. ಹೇಸರಕತ್ತೆಯನ್ನು ಸಮಾಧಾನಕ್ಕೆ ತರುವಂತಿರಲಿಲ್ಲ. ಒಟ್ಟಿನಲ್ಲಿ ಹೇಸರಕತ್ತೆಯೇ ಆಗ ಗಾಡಿಯನ್ನು ಎಳೆದೊಯ್ಯಲು ಉತ್ತಮವಾದ ಪ್ರಾಣಿಯಾಗಿತ್ತು.

ವೈದ್ಯರು ಸುತ್ತಾಡಲು ಉಪಯೋಗಿಸುತ್ತಿದ್ದ ಹಗುರಗಾಡಿಗೆ ನಾಲ್ಕು ಚಕ್ರಗಳಿರುತ್ತಿತ್ತು. ಒಬ್ಬರು ಕುಳಿತು ಈ ಗಾಡಿಯಲ್ಲಿ ಸುತ್ತಾಡಬಹುದಾಗಿತ್ತೇ ಹೊರತು ಹೆಚ್ಚಿಗೆ ಜನರು ಕೂಡಲು ಆಗುತ್ತಿರಲಿಲ್ಲ. ಒಂದು ಅಥವಾ ಎರಡು ಕುದುರೆಗಳು ಈ ಗಾಡಿಯನ್ನು ಎಳೆಯಬಹುದಾಗಿತ್ತು. ಹಾದಿಗಾಡಿಗಿಂತಲೂ ಈ ಹಗುರಗಾಡಿ ಸಂಚಾರಕ್ಕೆ ಉತ್ತಮವಾಗಿತ್ತು. ರಸ್ತೆ ಚೆನ್ನಾಗಿದ್ದಲ್ಲಿ ಮಾತ್ರ ಸಂಚಾರಕ್ಕೆ ಅನುಕೂಲವಾಗಿತ್ತು. ಗಾಳಿ, ಮಳೆ, ಮಂಜು ಈ ಹೊಡೆತಕ್ಕೆ ಸಿಕ್ಕಿ ಆಶ್ರಯಪಡೆದು ಸುತ್ತಾಡಲು ಹಗುರಗಾಡಿ ಅನುಕೂಲವಾಗಿತ್ತು. ರಸ್ತೆಕೆಟ್ಟು ಕೆಸರಿನಿಂದ ತುಂಬಿದ್ದಾಗ ಹಗುರಗಾಡಿ ಸಂಚಾರದ ಉಪಯೋಗಕ್ಕೆ ಬರುವಂತಿರಲಿಲ್ಲ. ಈ ಗಾಡಿ ಎಳೆಯಲು ಕುದುರೆಗಳಿಗೂ ಆಯಾಸವಾಗುತ್ತಿರಲಿಲ್ಲ. ಗಾಡಿ ಹತ್ತಿ ಇಳಿಯಲು ಅಷ್ಟು ಕಷ್ಟವಿರುತ್ತಿರಲಿಲ್ಲ. ಗಾಡಿ ತಿರುಗಿಸಲು ಅಥವಾ ಅಡ್ಡಹಾದಿ ಹಾಯಲು ತೊಂದರೆಯೇನೂ ಇರುತ್ತಿರಲಿಲ್ಲ. ಗಾಡಿ ಉರುಳಿಬಿದ್ದರೂ ಸರಿಯಾಗಿ ನಿಲ್ಲಿಸಿ ಪ್ರಯಾಣ ಮುಂದುವರಿಸಲು ಅನುಕೂಲವಾಗಿತ್ತು.

ಹಗುರಗಾಡಿಯಲ್ಲಿ ಮೂವತ್ತು ಅಥವಾ ಮೂವತ್ತಾರು ಅಂಗುಲ ಉದ್ದವಾಗಿದ್ದ ಪೀಠವಿತ್ತು. ಈ ಪೀಠವನ್ನೇರಿ ಇಬ್ಬರು ಕೂಡಬಹುದಾಗಿತ್ತು. ಉದ್ದ ಕಡಿಮೆಯಿದ್ದ ಈ ಪೀಠದಲ್ಲಿ ನನ್ನಂತಹ ಉದ್ದನೆಯ ಮನುಷ್ಯ ಮಲಗುವಂತಿರಲಿಲ್ಲ. ಮಲಗಿಕೊಳ್ಳಬೇಕು, ಕಾಲು ನೀಡಿಕೊಳ್ಳಬೇಕು ಎಂದೆನಿಸಿದಾಗ, ಕಾಲುಗಳನ್ನು ಗಾಡಿಯ ಇಕ್ಕೆಡೆಯ ಕಮಾನಿನಂತಿದ್ದ ಹಲಗೆಗೆ ಚುಚ್ಚಿಕೊಳ್ಳಬೇಕಾಗಿತ್ತು- ಹೀಗೆ ಕಾಲು ಚುಚ್ಚಿ ಒರಗಿಕೊಳ್ಳುವುದು ಸಾಧುವಲ್ಲ. ಆದರೂ ಮಲಗಬೇಕೆನಿಸಿದಾಗ ಬೇರೆ ದಾರಿಯಿರಲಿಲ್ಲ. ನಿದ್ರೆಯು ಯಾವುದನ್ನೂ ಗಮನಿಸುವುದಿಲ್ಲ. ಗಾಡಿಯು ಮುಂದೆ ಹೋಗುತ್ತಿದ್ದಾಗ ಒಬ್ಬ ಹೆಚ್ಚುಹೊತ್ತು ಮಲಗಲಾಗುತ್ತಿರಲಿಲ್ಲ. ಲಕ್ಷ್ಯವಿಟ್ಟು ಕುದುರೆಯನ್ನು ಸರಿಯಾಗಿ ಓಡಿಸಿಕೊಂಡು ಹೋಗಬೇಕಾಗುತ್ತಿತ್ತು. ಆದರೆ ಕುದುರೆಗಾಡಿಗೆ, ಅದೇ ದಾರಿಹಿಡಿದು ಹಿಂದಿರುಗಿ

ಮನೆಗೆ ಹೋಗುತ್ತಿದ್ದಾಗ ಅಷ್ಟು ಎಚ್ಚರಿಕೆ ತೆಗೆದುಕೊಳ್ಳಬೇಕಾಗಿರಲಿಲ್ಲ. ಹೂಡಿದ ಕುದುರೆಗಳಿಗೆ ಮನೆಗೆ ಹಿಂದಿರುಗಿ ಹೋಗುವದಾರಿ ರೂಢಿಯಾಗಿ ಹೋಗಿತ್ತು.

ಬಾಡಿಗೆಗಾಗಿ ತಂದ ಕುದುರೆಗಳನ್ನು ನೆಚ್ಚಿಕೊಂಡಿರುವಂತಿರಲಿಲ್ಲ. ಬಂದ ದಾರಿಯಲ್ಲೆ ಹಿಂದಿರುಗಿ ಕುದುರೆಯನ್ನು ಹೂಡಿಹೋಗಬಹುದೆಂಬ ಭರವಸೆಯಿರಲಿಲ್ಲ. ಒಮ್ಮೆ ನಾನು ನಿದ್ರಿಸುತ್ತಿದ್ದೆ. ನಿದ್ರೆಯಿಂದ ಎಚ್ಚೆತ್ತು ಒಂದು ಸಾರಿ ನೋಡಿದಾಗ, ಕುದುರೆ ಯಾವುದೋ ಬೇರೆ ದಾರಿ ಹಿಡಿದು ಹೋಗುತ್ತಿದ್ದುದನ್ನು ತಿಳಿದೆ. ರಾತ್ರಿಯಹೊತ್ತು ಮೋಡದ ಮುಸುಕು ಕವಿಯದಿದ್ದಾಗ, ಉತ್ತರದಿಕ್ಕಿನ ನಕ್ಷತ್ರದ ಬೆಳಕಿನ ಸಹಾಯದಿಂದ ದಿಕ್ಕುಕಂಡು ಗಾಡಿ ನಡೆಸುತ್ತಿದ್ದೆ. ರೈಲುದಾರಿಯಿಂದ ಒಮ್ಮೊಮ್ಮೆ ದಾರಿ ಗುರುತಿಸಲು ಸಹಾಯವಾಗುತ್ತಿತ್ತು. ದಾರಿದಿಕ್ಕನ್ನು ತಿಳಿದು ಗಾಡಿಯನ್ನು ಎಡಬಲಕ್ಕೆ ತಿರುಗಿಸಿ ಮುಂದೆ ಹೋಗುತ್ತಿದ್ದೆ. ಮುಸುಕುಮೋಡ ಮುಚ್ಚಿಕೊಂಡಿದ್ದಾಗ, ಹೊಲಮನೆಯನ್ನು ಹೊಕ್ಕು ಮನೆಯವನನ್ನು ದಾರಿತೋರಿಸೆಂದು ಕೇಳುತ್ತಿದ್ದೆ. ಅವೇಳೆಯಲ್ಲಿ ರೈತಾಪಿ ಜನರನ್ನು ಎಬ್ಬಿಸಿ ದಾರಿ ತಿಳಿಯುವುದೂ ಕಷ್ಟವಾಗಿತ್ತು. ಬೊಗಳುತ್ತಾ ನಿಂತ ನಾಯಿ, ಮನೆಯ ಹತ್ತಿರಕ್ಕೆ ನಮ್ಮನ್ನು ಸೇರಗೊಡುತ್ತಿರಲಿಲ್ಲ. ನನ್ನಲ್ಲಿದ್ದ ಕೋಲ್ಟ್ ಬಂದೂಕು ಹಾರಿಸಿದಾಗ ಸದ್ದು ಕೇಳಿ ಮಲಗಿದ್ದವ ಎದ್ದು ಬರುತ್ತಿದ್ದ. "ಅವೇಳೆಯಲ್ಲಿ ಗದ್ದಲವೇಕೆ ?" ಎಂದವನು, ಎಚ್ಚೆತ್ತು ಬಂದೂಕು ಹಿಡಿದುಬರುತ್ತಿದ್ದ. ತನ್ನನ್ನು ಎಬ್ಬಿಸಿದವನು ವೈದ್ಯ, ಅವನಿಗೆ ಸಹಾಯ ಮಾಡುವುದು ಅಗತ್ಯ ಎಂದು ತಿಳಿದವನು, ಒಂದೊಂದುಸಾರಿ ವೈದ್ಯನೊಂದಿಗೆ ದಾರಿತೋರಲು ಗಾಡಿಯೇರಿ ಬರುತ್ತಿದ್ದ.

ಬಾಡಿಗೆ ಕುದುರೆಗಳು ಹೂಡಿದ ಹಗುರಗಾಡಿಯಲ್ಲಿ ಎರಡು ವಿಶೇಷಣವಿತ್ತು. ಕುದುರೆಗಳು ಗಾಡಿಯನ್ನು ಎಲ್ಲಿಗೋ ಎಳೆದುಕೊಂಡು ಹೋಗುತ್ತಿತ್ತು. ಚಾಲಕನನ್ನು ಒದ್ದು ಬೀಳಿಸಿ, ಗಾಡಿಯಿಂದವನನ್ನು ಬೀಳಿಸಿ ಓಡಿಬಿಡುತ್ತಿತ್ತು. ಇದಕ್ಕೆ ಸಾಮಾನ್ಯವಾಗಿ ನಾಯಿಗಳ ಅತಿ ಬೊಗಳಿಕೆಯೇ ಕಾರಣವಾಗಿತ್ತು. ಅನೇಕ ಹೊಲಮನೆಯ ಲಾಯಗಳಲ್ಲಿ ಕುದುರೆಗಳನ್ನು ಕಾಯಲು ಎರಡುಮೂರು ನಾಯಿಗಳಿರುತ್ತಿದ್ದವು. ನಡುರಾತ್ರಿಯಲ್ಲಿ ಹಗುರಗಾಡಿಯ ಕುದುರೆಯನ್ನು ನೋಡಿದ ಈ ನಾಯಿಗಳು ಅಟ್ಟಿಸಿಕೊಂಡು ಬರುತ್ತಿದ್ದವು. ಅಟ್ಟಿಸಿಕೊಂಡು ಬರುವುದು ನಾಯಿ

ಗಳಿಗೆ ಹುಚ್ಚಾಟವಾಗಿತ್ತು. ಹೀಗಾಗುವಾಗ, ನಿದ್ರೆಯಿಂದ ಎಚ್ಚೆತ್ತು ನೋಡಿದಾಗ, ಕುದುರೆ ಸರಿಯಾದ ರಸ್ತೆಬಿಟ್ಟು ಏರಿಳಿತದ ಹುಲ್ಲುಗಾವಲಲ್ಲಿ ಸಿಕ್ಕಾಪಟ್ಟೆ ಓಡಿಯಾಡುತ್ತಿದ್ದುದನ್ನು ಕಾಣುತ್ತಿದ್ದೆ. ಬೊಗಳುತ್ತಿದ್ದ ನಾಯಿಗಳನ್ನು ಲಕ್ಷ್ಯ ಮಾಡದೆ ಸರಿಯಾದ ದಾರಿಯಲ್ಲಿ ಗಾಡಿ ಹೋಗುತ್ತಿದ್ದಲ್ಲಿ ಯಾವ ತೊಂದರೆಯೂ ಇರುತ್ತಿರಲಿಲ್ಲ. ಮುಂದಾಗಿ ಹೋಗುತ್ತಿದ್ದ ಕುದುರೆಯ ಮೂಗಿನ ಮೇಲೆ ನಾಯಿ ಹಾರಿ ಹಾದಿಗಡ್ಡವಾದಾಗ, ಕುದುರೆ ಎಡತಪ್ಪಿ, ಗಾಡಿಯನ್ನು ರಸ್ತೆಯಪಕ್ಕದಲ್ಲಿದ್ದ ಹೊಲದಕಡೆಗೆ ಎಳೆಯುತ್ತಾ, ಕೃಷಿಯಂತ್ರವಿದ್ದ ಕಡೆಗೋ ಅಥವಾ ಆಳವಾಗಿದ್ದ ಹಳ್ಳದ ಕಡೆಗೋ ಎಳೆದುಕೊಂಡು ಹೋಗಿ ಅನಾಹುತಕ್ಕೆ ಈಡುಮಾಡುತ್ತಿತ್ತು. ನಾಯಿಗೆ ಶಿಕ್ಷಣ ಕೊಡಬೇಕಾದುದು ಯೋಗ್ಯವೆ. ಬಂದೂಕನ್ನು ತೋರಿಸಿದಾಗ ಅವು ದೂರ ಓಡಿಬಿಡುತ್ತಿದ್ದವು. ಮುಂದಕ್ಕೆ ಬಿಡುವುದಿಲ್ಲ ಎಂದು ಹಟತೊಟ್ಟು ಬೆನ್ನು ಬೀಳುತ್ತಿದ್ದ ನಾಯಿಗಳನ್ನು ಕಠಿಣವಾಗಿಯೇ ಕಾಣಬೇಕಾಗುತ್ತಿತ್ತು. ನನ್ನ ಸಹಾಯಕ ಆಳು ಒಮ್ಮೆ ಹಗುರಗಾಡಿ ನಡೆಸುತ್ತಿದ್ದ. ಆಗ ಬೇರೆಬೇರೆ ಜಾತಿಯ ಮೂರು ನಾಯಿಗಳು ಗಾಡಿಯನ್ನು ಅಟ್ಟಿಸಿಕೊಂಡು ಬಂದವು. ಮುಂದಿನ ದಿನ ಇನ್ನೊಂದು ನಾಯಿ, ಗಾಡಿಯನ್ನು ಅನುಸರಿಸಿ ಅಟ್ಟಿಸಿಕೊಂಡು ಬಂತು. ಕೆಲವು ನಾಯಿಗಳಿಗೆ ಕಟ್ಟು ನಿಯಮಾವಳಿಯಿರುತ್ತದೆ. ಉದಾಹರಣೆಗೆ—ಒಮ್ಮೆ ದೊಡ್ಡ ನ್ಯೂ ಫೌಂಡ್ ಲೆಂಡ್ ನಾಯಿಯೊಂದು ಅಟ್ಟಿಸಿಕೊಂಡು ಬಂತು. ಎಷ್ಟೋ ಎಚ್ಚರಿಕೆಯಿಂದ ಅದನ್ನು ಹೆದರಿಸಿ ಬೆದರಿಸಿ, ಬಂದೂಕು ಹಾರಿಸಿದೆ. ನಾಯಿ ಬಿಡಲಿಲ್ಲ. ಹೆಚ್ಚು ವಯಸ್ಸಾಗಿದ್ದ ಆ ನಾಯಿ ದಣಿವಿನಿಂದ ಪ್ರಾಣಬಿಟ್ಟಿತು.

ಒಂದುದಿನ ನನಗೆ ವಿಚಿತ್ರ ಅನುಭವವಾಯಿತು. ಗಾಡಿಯಲ್ಲಿ ಮಲಗಿದ್ದ ನಾನು ವಿಚಿತ್ರ ಎಳೆತದಿಂದ ಎಚ್ಚೆತ್ತು ಕಣ್ಣುಬಿಟ್ಟು ನೋಡಿದೆ. ಎದ್ದು ನೋಡಿದಾಗ, ಗಾಡಿಗೆ ಕಟ್ಟಿದ್ದ ಕುದುರೆಗಳು ಮಾಯವಾಗಿದ್ದವು. ಮಂಜು ತುಂಬಿದ್ದ ಹುಲ್ಲುಗಾವಲಿನಲ್ಲಿ ಗಾಡಿಯಲ್ಲಿ ನಾನು ಉಳಿದು ಕುಳಿತಿದ್ದೆ. ಮಂಜು ತುಂಬಿದ್ದ ಹಳ್ಳದಲ್ಲಿ ಕುದುರೆಗಳು ಹೂತುಹೋಗಿದ್ದವು. ಹಳ್ಳದಲ್ಲಿ ಮಂಜು ತುಂಬಿಹೋದುದು ನಿದ್ದೆಕಣ್ಣಿನ ಕುದುರೆಗಳಿಗೆ ಗೊತ್ತಾಗಲಿಲ್ಲ. ಕುದುರೆಗಳು ಎಚ್ಚರತಪ್ಪಿ ಗಾಡಿಯನ್ನು ಮಂಜಿನಮೇಲೆ ಎಳೆದುಕೊಂಡು ಹೋಯಿತು. ಮುಚ್ಚಿಹೋಗಿದ್ದ ಕುದುರೆಗಳನ್ನು ಬಿಡಿಸಲು, ಸನಿಕೆಯಿಂದ

ಮುಂಜುಗಡ್ಡೆಯನ್ನು ಎತ್ತಿಹಾಕಿ, ಹಳ್ಳದಿಂದ ಕುದುರೆಗಳನ್ನು ಹೊರಗೆಳೆದು, ಪುನಃ ಗಾಡಿಹೂಡಿ ಜೀರೆದಿಕ್ಕಿನ ಕಡೆಗೆ ಗಾಡಿ ನಡೆಸಿದೆ. ಆಗ ಯಾವ ದಿಕ್ಕನ್ನು ಅನುಸರಿಸಿ ಹೋಗುವುದು ಎಂದು ತಿಳಿಯಲೇ ಇಲ್ಲ. ಅನುಭವಿಕ ಚಾಲಕನಿಗೆ ಮಾತ್ರ ಸರಿಯಾದ ದಾರಿ ಗೊತ್ತಿರುವುದು. ಅವನು ಬಂದ ದಾರಿಯನ್ನು ಅನುಸರಿಸಿ ಹೋಗುತ್ತಾನೆ. ಕಗ್ಗತ್ತಲೆಯ ರಾತ್ರಿಯಲ್ಲಿ ನಾನು ಎಲ್ಲಿಂದಬಂದೆ? ಎಲ್ಲಿಗೆ ಹೋಗುತ್ತಿದ್ದೇನೆ? ಎಂಬುದೇ ತಿಳಿಯುತ್ತಿರಲಿಲ್ಲ. ಇಂತಹ ಸಮಯ ದಲ್ಲಿ ಒಬ್ಬ ಕಾರ್ಟೀಸಿಯನ್ ಫ್ರೆಂಚ್ ತತ್ವಜ್ಞನ ಮಾತನ್ನು ನೆನೆಸಿಕೊಳ್ಳ ಬೇಕಾಗುವುದು. "ನಾನೆಲ್ಲಿದ್ದೇನೆ? ನಾನಿಲ್ಲಿದ್ದೇನೆ. ಎಂದು ಮಾತ್ರ ತಿಳಿಯುತ್ತೇನೆ" ಎಂದುಕೊಳ್ಳಬೇಕು. ಅಂದರೆ, ಎಲ್ಲಿರುವೆ? ಎಷ್ಟುಹೊತ್ತು ಇಲ್ಲಿರಬೇಕು ಎಂದು ತಿಳಿಯಲಿಲ್ಲವಷ್ಟೆ? ಅಧರ್ಮಿಯೊಬ್ಬ ಓದುಮನೆಯಲ್ಲಿ ಬರೆಯುತ್ತಿದ್ದನಂತೆ: ಹುಲ್ಲುಗಾವಲಿನಲ್ಲಿ ಹಾದಿ ತಪ್ಪಿದಲ್ಲಿ, "ಎಲ್ಲಿರುವೆ? ಎಂಬುದನ್ನು ತಿಳಿಯಲಾರೆ ಮತ್ತು ಯೋಚಿಸಲಾರೆ" ಎಂದು. ಬಹುಶಃ ಅವನು ನನ್ನ ಅನುಭವವನ್ನು ಬರೆಯುತ್ತಿದ್ದನೆಂದು ಭಾವಿಸುವೆ.

ನನ್ನ ಹಗುರ ಕುದುರೆಗಾಡಿ; ಇವನ್ನು ಅಪಕಂಟಕವೆಂದು ಕರೆಯುವೆ. ಈ ಅಪಕಂಟಕವನ್ನು, ನನ್ನ ದಣಿವನ್ನು, ರೋಗಿಗಳನ್ನು ಮತ್ತು ಕೆಲಸ ದಾಳನ್ನು ಎಲ್ಲರೂ ಪ್ರೀತಿಯಿಂದಲೇ ಕಾಣುತ್ತಿದ್ದರು. ನನ್ನ ದಣಿವಿಗೆ ತಕ್ಕ ಪ್ರತಿಫಲ ಸಿಗುತ್ತಿತ್ತು. ಹಿಂದಿನ ದಿನಗಳನ್ನು ನೆನೆದ ನಾನು ಅವು ಕಹಿದಿನಗ ಳೆಂದು ಭಾವಿಸುವುದಿಲ್ಲ. ನಾನು ಎಷ್ಟೋ ದಣಿದು ದುಡಿದಿದ್ದರೂ, ಕೆಲಸ ಮಾಡಿ ದುದು ಅಲ್ಪವೇ ಎಂದು ತಿಳಿಯುವೆ. ನಾನು ರೋಗಿಗಳ ನೋವು ಬೇನೆ ಯನ್ನು ಕಡಿಮೆ ಮಾಡಿದ್ದೇನೆ. ಅಲ್ಲದೆ, ಅವರ ಸಂಸಾರದ ಕಷ್ಟಗಳ ಚಿಂತೆ ಯನ್ನು ಪರಿಹರಿಸಿದ್ದೇನೆ. ಇದಕ್ಕೆ ಸಿಗಬೇಕಾಗಿದ್ದ ತಕ್ಕ ಪ್ರತಿಫಲವನ್ನು ನಾನು ಪಡೆದಿರುವೆ.

ನನ್ನ ಹಳೆಯ ದಿನಚರಿ ಪುಸ್ತಕಗಳನ್ನು ನೋಡಿದಾಗ, ನಾನು ಎಷ್ಟು ಒಳ್ಳೆಯದನ್ನು ಮಾಡಿರುವೆ ಎಂದು ತಿಳಿಯುವೆ. ರೋಗಿಗಳಿಗೆ ನಾನು ಕೊಟ್ಟ ಔಷಧಿ ಎಷ್ಟು ಗುಣಕಾರಿಯಾಗಿದ್ದವು ಎಂಬುದನ್ನು ತಿಳಿಯುವೆ. ರೋಗಿಗಳ ಬಂಧುವರ್ಗ ನನ್ನನ್ನು ಗೌರವಿಸುತ್ತಿದ್ದರು. ಮರಮರನೆ ಗೊಣಗು ತ್ತಿದ್ದ ರೋಗಿಗಳು ನನ್ನನ್ನು ಲೆಕ್ಕಿಸುತ್ತಿರಲಿಲ್ಲ. ರೋಗಿ ಸ್ಮೃತಿ ತಿಳಿಯಲಿ

ಎಂದು ಅವನ ಬೆನ್ನಿನ ಮೇಲೆ ಶೀತದ ಸ್ಪಂಜಿನಿಂದ ಉಜ್ಜುವುದು ಶ್ರಮವಾದ ಕೆಲಸವಾಗಿತ್ತು. ಈ ಕೆಲಸ ಶ್ರಮವೆನಿಸಿದರೂ ಇದು ಅವನ ಸ್ನೇಹಿತರಿಗೆ ಪ್ರಿಯ ವಾಗುತ್ತಿತ್ತು. ರೋಗಿಯ ಜ್ವರಪ್ರಮಾಣ ಕಡಿಮೆ ಅಥವಾ ಹೆಚ್ಚೋ ಎಂದು ತಿಳಿಯುವುದಕ್ಕಾಗುತ್ತಿರಲಿಲ್ಲ. ಸ್ಮರಣೆ ತಪ್ಪಿದ ರೋಗಿಯ ಬೆನ್ನನ್ನು ಉಜ್ಜಿ ಪುನಃ ಅವನು ಸ್ಮರಣೆ ತಿಳಿಯುವಂತೆ ಮಾಡುತ್ತಿದ್ದುದು ಕಠಿಣ ಪರೀಕ್ಷೆಯೇ ಆಗಿತ್ತು. ಕೆಲವು ಸಂದರ್ಭಗಳಲ್ಲಿ ಹಲವುದಿನ ವಿಶ್ರಾಂತಿ ಸಿಗದೆ ವೈದ್ಯ ಪಾಡು ಪಡಬೇಕಾಗಿತ್ತು.

ಆಗಿನಕಾಲದಲ್ಲಿ ಟೆಲಿಫೋನ್ ನೌಕರ್ಯವಿರಲಿಲ್ಲ. ವೈದ್ಯ ಬರುತ್ತಾನೆ ಅಥವಾ ಅವನಿಗೆ ಕರೆ ಕಳುಹಿಸಿದೆ ಎಂದಲ್ಲಿ, ಕಣ್ಣರಿಕೆಯಾಗುವ ವಸ್ತುವಿ ಗೊಂದು ಪಟ್ಟಿ ನೇತುಹಾಕುತ್ತಿದ್ದರು. ರಾತ್ರಿಕಾಲವಾಗಿದ್ದರೆ ಒಂದು ಲಾಂದ್ರ ವನ್ನು ತಂದು ಬಾಗಿಲಲ್ಲಿ ತೂಗುಹಾಕುತ್ತಿದ್ದರು. ಈ ಸಂಜ್ಞಾರ್ಥವನ್ನು ತಿಳಿದು ವೈದ್ಯ ರೋಗಿಯನ್ನು ಕಾಣಲು ಹೊರಡುತ್ತಿದ್ದನು. ಒಂದುಸಾರಿ, ಒಬ್ಬ ರೋಗಿಯನ್ನು ನೋಡಿಬರಲು ಹೊರಟ ನಾನು, ದಾರಿಯಲ್ಲಿ ಏಳುಜನ ರೋಗಿಗಳನ್ನು ನೋಡಿ ಬರಬೇಕಾಯಿತು.

ಈ ನೆನಪು, ನೆರೆಹೊರೆಯವರ ಆದರ ಆನಂದಾನುಭವವನ್ನು ಸ್ಮರಿಸುತ್ತ ಲಿರುವೆ. ಅನೇಕಸಾರಿ "ರೋಗಿಗಳನ್ನು ನೋಡಿ ಬನ್ನಿ" ಎಂದು ನೆರೆಹೊರೆಯವರು ಕರೆಯುತ್ತಿದ್ದರು. ನೋಡಲು ಹೋದಾಗ, ಕರೆ ಅಂತಹ ಮಹತ್ವದ್ದಲ್ಲವೆಂದು ಕಾಣಬರುತ್ತಿತ್ತು. ಮನುಷ್ಯನಿಗೆ ಯಾವ ರೋಗವೇ ಅಂಟಿರಲಿ, ಅದು ಸಾಂಕ್ರಾಮಿಕವೆಂದು ನೆರೆಹೊರೆಯವರು ತಿಳಿಯುತ್ತಿದ್ದರು. ಹೆದರಿಕೆಯಿಂದ ತಮಗೆಲ್ಲಿ ತೊಂದರೆ ಕೊಡುವುದೋ ಎಂದು ಸಲಹೆ ಕೇಳಲು ವೈದ್ಯರ ಬಳಿಗೆ ಓಡುತ್ತಿದ್ದರು. ದಡಾರ ಸಾಂಕ್ರಾಮಿಕವಾಗಿ ಮೊದಲು ಕಾಣಿಸಿಕೊಳ್ಳುತ್ತಿದ್ದುದು ಶಾಲೆಗಳಲ್ಲಿಯೇ. ಕ್ರಮೇಣ ಅದು ನೆರೆಹೊರೆಯಲ್ಲಿಯೂ ಕಾಣಿಸಿಕೊಳ್ಳುತ್ತಿತ್ತು.

ಸಾಧಾರಣ ಉಪದ್ರವಕ್ಕೆ ಯಾರೂ ವೈದ್ಯರ ಸಹಾಯವನ್ನು ಅಪೇಕ್ಷಿಸು ತ್ತಿರಲಿಲ್ಲ. ತೊಡಕಾದಲ್ಲಿ ಅಥವಾ ಕೈಮೀರಿದಲ್ಲಿ ಮಾತ್ರ ವೈದ್ಯನನ್ನು ಬೇಡು ತ್ತಿದ್ದರು. ರೋಗಿಯನ್ನು ಮಲಗಿಸಿ ಪೂರಾ ಬಟ್ಟೆಯನ್ನು ಹೊದ್ದಿಸಿಬಿಡು ತ್ತಿದ್ದರು. ದಡಾರ ಚಿಹ್ನೆ ಇಳಿದು ಕಡಿಮೆಯಾಗುತ್ತಿದ್ದಾಗ, ಇನ್ನೂ ಚಿಕ್ಕ ವಯಸ್ಸಿನ ರೋಗಿಗಳಲ್ಲಿ ಚಿಹ್ನೆ ಎದ್ದು ಕಾಣಿಸಿಕೊಳ್ಳುತ್ತಿದ್ದಾಗ ಎಚ್ಚರಿಕೆ ವಹಿ

ಸದೆ ಹಾಸಿದ ಬಟ್ಟೆಗಳನ್ನು ಕಂಡಾಬಟ್ಟೆ ಚೆಲ್ಲಾಡಿಬಿಡುತ್ತಿದ್ದರು. ಇದರಿಂದ ಶ್ವಾಸರೋಗ ಅಥವಾ ನ್ಯುಮೋನಿಯಾರೋಗ ಹರಡಲು ಕಾರಣವಾಗುತ್ತಿತ್ತು.

ಹಳ್ಳಿಗಾಡಿನಲ್ಲಿ ಹಗುರಗಾಡಿಯೊಂದಿಗೆ ನಾನು ಹೋಗುತ್ತಿದ್ದ ಬಗೆಯು ನ್ನೀಗ ತಿಳಿಸುವೆ.— ದಾರಿ ಗುರುತುಹಚ್ಚಿ, ಗಾಡಿ ನಡೆಸಿಕೊಂಡುಹೋಗಿ, ರೋಗಿಯನ್ನು ಪರೀಕ್ಷಿಸಿ ಪುನಃ ಅದೇ ನೀರಸ ಹಾದಿಯನ್ನು ಹಿಡಿದು ಹಿಂದಿರುಗಿ ಬರುವುದು ನನ್ನ ಪದ್ಧತಿಯಾಗಿತ್ತು. ಮಣ್ಣಿನಲ್ಲಿ ಅಥವಾ ಮಂಜಿನಲ್ಲಿ ಗಾಡಿ ಹೂತುಹೋದಲ್ಲಿ, ಮಂಜನ್ನು ಕೆದಕಿ, ಸರಿರಸ್ತೆ ಹಿಡಿದು ಸುತ್ತಿ ಬಳಸಿ ಬರಬೇಕಾಗಿತ್ತು. ಇಂತಹ ಕಷ್ಟ ಪರಿಸ್ಥಿತಿಗೆ ಸಿಕ್ಕಿದ ವೈದ್ಯನ ಸಹಾಯಕ್ಕಾಗಿ ನೆರೆಹೊರೆಯವರು ಮನಃಪೂರ್ವಕವಾಗಿ ಸಹಾಯಮಾಡಲು ಮುಂದೆ ಬರುತ್ತಿದ್ದರು. ಅವರ ಗದ್ದೆ, ಬೇಲಿಯ ತಡಿಕೆ ಸರಿದು ಕಿತ್ತುಹೋದುದನ್ನು ಗಮನಿಸಿ, ಗೊಣಗದೆ ಸರಿಪಡಿಸಿಕೊಳ್ಳುತ್ತಿದ್ದರು. ವೈದ್ಯನ ಕುದುರೆಗಳು ಒಂದೊಂದು ವೇಳೆ ದಣಿದುಹೋಗಿದ್ದಲ್ಲಿ, ಅನುಮಾನಿಸದೆ ತಮ್ಮ ಕುದುರೆಗಳನ್ನು ಎರವಲು ಕೊಡುತ್ತಿದ್ದರು. ಹಿಂದೆ ದೊರೆಯುತ್ತಿದ್ದ ಸಹಾಯ ಸಹೋದರತ್ವಕ್ಕೆ ಈ ಮೇರೆಯಿಲ್ಲದ ನಡೆವಳಿಕೆ ಮಾದರಿಯಾಗಿತ್ತು. ಹಿಂದಿನಕಾಲದಲ್ಲಿ ವೈದ್ಯ ಸಹಾಯ ಈಗಿನಷ್ಟು ಮುಂದುವರಿಯದಿದ್ದರೂ ಪರಸ್ಪರ ಸಹಾಯ ಸಹಾನುಭೂತಿಗೆ ಆಗ ಕೊರತೆಯಿರಲಿಲ್ಲ. ಹಿಂದಿನಕಾಲಕ್ಕೂ ಈಗಿನಕಾಲಕ್ಕೂ ಇರುವ ವ್ಯತ್ಯಾಸವೇ ಇಷ್ಟು. "ಮೌನದಿಂದಿರುವವನಿಗೆ ನೋವಿಲ್ಲ," ಎಂಬುದನ್ನು ಅರ್ಥಮಾಡಿಕೊಂಡು ತಿಳಿಯುವವರೆಗೆ ಮಾತ್ರಾ ಎಂದು ಎಲ್ಲರೂ ಬಲ್ಲರು. ಹಳ್ಳಿಗಾಡಿನ ಹಿಂದಿನ ಚರಿತ್ರೆ ಇವರಿಗೆ ಅರ್ಥವಾಗುವುದು.

ಮೋಟಾರು ಉಪಯೋಗಕ್ಕೆ ಬಂದಮೇಲೆ ಹಳ್ಳಿಯ ವೈದ್ಯನು ಹೆಚ್ಚಿನ ಹೊಸ ಸಮಸ್ಯೆಯನ್ನು ಎದುರಿಸಬೇಕಾಯಿತು. ಮೋಟಾರನ್ನು ನಂಬಿ ಪ್ರಯಾಣಮಾಡಲು ವೈದ್ಯ ಸಿದ್ಧನಿರಲಿಲ್ಲ. ಮೋಟಾರು ವೈದ್ಯನ ಉಪಯೋಗಕ್ಕೆ ಯೋಗ್ಯವಾಗಿರಲಿಲ್ಲ. ಮೊದಲನೆಯದಾಗಿ ಅದರ ಖರ್ಚು ಮಿತಿಮೀರಿತ್ತು. ಹಳ್ಳಿಯ ರಸ್ತೆಗಳಲ್ಲಿ ಮೋಟಾರು ನಡೆಸಿಕೊಂಡು ಎಂದಿನಂತೆ ಸುಲಭವಾಗಿ ವೈದ್ಯ ಹೋಗಿಬರಲಾಗುತ್ತಿರಲಿಲ್ಲ. ವರ್ಷದಲ್ಲಿ ಕೆಲವು ತಿಂಗಳು ಮಾತ್ರವೇ ಹಳ್ಳಿ ರಸ್ತೆಯಲ್ಲಿ ವಾಹನಗಳು ಸಂಚರಿಸಬಹುದಾಗಿತ್ತು. ಹೊಸ ನಮೂನೆಯ ಮೋಟಾರನ್ನು ಕೆಲವರು ಮಾತ್ರ ಉಪಯೋಗಿಸುತ್ತಿದ್ದರು.

ನನ್ನಂತರ ಸಹ ವೈದ್ಯರನೇಕರು ಮೋಟಾರನ್ನು ಕೊಂಡಿದ್ದರು. ಇದರಿಂದ ಹೆಚ್ಚು ಹಣವನ್ನು ಸಂಪಾದಿಸುತ್ತಿದ್ದರು ನಿಜ. ಹೀಗೆ ಮೋಟಾರು ಹೆಚ್ಚು ಬಳಕೆಗೆ ಬಂದಿದ್ದರೂ ನನಗೆ ಮಾತ್ರ ಅದನ್ನು ಕೊಳ್ಳಲಿಷ್ಟವಾಗಲಿಲ್ಲ.

ಮೋಟಾರು ನಡೆಸಲು ಬಾರದಿದ್ದವರು ಅನವಶ್ಯಕವಾದ ಕೆಲವು ತೊಂದರೆಗಳಿಗೆ ಮತ್ತು ಅಪಘಾತಕ್ಕೆ ಗುರಿಯಾಗುತ್ತಿದ್ದರು. ಸ್ವಲ್ಪಕಾಲಕ್ಕೆ ಮುಂಚೆ ಹಗುರಗಾಡಿಯ ಕುದುರೆಯನ್ನು ಅಟ್ಟಿಸಿಕೊಂಡು ಬರುತ್ತಿದ್ದ ನಾಯಿಗಳನ್ನು ನಾವು ಹೆದರಿಸಿ, ಬೆದರಿಸಿ, ಬಂದೂಕು ಹಾರಿಸಿ ಗಾಡಿ ನಡೆಸಿಕೊಂಡು ಬರುತ್ತಿದ್ದೆವು. ಸರ್ವಸಾಮಾನ್ಯವಾಗಿದ್ದ ನಾಯಿಗಳ ಬೆದರಿಕೆಗೆ ಕುದುರೆ ಬೆದರದೆ ನಿಧಾನವಾಗಿ ಗಾಡಿಯನ್ನು ಎಳೆದುಕೊಂಡು ಹೋಗುತ್ತಿತ್ತು. ಮೋಟಾರು ಹೆಚ್ಚಾಗಿಬಳಕೆಗೆ ಬಂದಮೇಲೆ, ಅದರರೀತಿಯೇ ಬೇರೆಯಾಯಿತು. ಮೋಟಾರು, ರಸ್ತೆಯಲ್ಲಿ ಕಾಣಿಸಿಕೊಂಡ ಕೂಡಲೇ ಹಗುರಗಾಡಿಯ ಕುದುರೆಗಳು ಹೆದರಿ ಹಿಡಿತ ತಪ್ಪಿಹೋಗುತ್ತಿದ್ದುವಲ್ಲದೆ, ಬೆನ್ನುತೋರಿ ಹಿಂದಿರುಗಿಬಿಡುತ್ತಿತ್ತು. ಕೆಲವು ಸಾರಿ ಗಾಡಿಯನ್ನು ಉರುಳಿಸಿ, ಗದ್ದೆಯ ಬೇಲಿ ತಡಿಕೆಯನ್ನು ಲಕ್ಷಿಸದೆ ತುಳಿದು ಸಿಕ್ಕಾಪಟ್ಟೆ ನೆಗೆಯುತ್ತಾ, ಗಾಡಿಯನ್ನು ಬಿಟ್ಟು ಕಳಚಿಕೊಂಡು ಹೋಗಲು ಪ್ರಯತ್ನಿಸುತ್ತಿದ್ದವು. ರಾತ್ರಿಯಲ್ಲಿ ಮೋಟಾರು ಕಾರುಗಳ ಮಿಣು ಕಾಡುತ್ತಿದ್ದ ಅಸೆಟಲೀನ್ ದೀಪವನ್ನು ಕಂಡು, ಕುದುರೆಗಳು ಮತ್ತಷ್ಟು ಹೆದರಿ ಹಿಂದೆ ಬೀಳುತ್ತಿದ್ದವು. ಈ ಬೆಳಕನ್ನು ದೂರದಿಂದಲೇ ಕಾಣಬಹುದಾಗಿತ್ತು. ಬೆಳಕು ಕಂಡಕೂಡಲೇ ಕುದುರೆಗಳನ್ನು ಗದ್ದೆ ಬಯಲು ಅಥವಾ ರಸ್ತೆಯ ಕಡೆಗೆ ಹೊಡೆಯಬೇಕಾಗಿತ್ತು. ಬೆಳಕು ಮರೆಯಾಗುವವರೆಗೂ ಕುದುರೆಗಳನ್ನು ಹತೋಟಿಯಲ್ಲಿಟ್ಟುಕೊಂಡಿರುವುದೇ ತುಂಬಾ ಕಷ್ಟವಾಗುತ್ತಿತ್ತು. ಎದುರಾಗಿ ಬರುತ್ತಿದ್ದ ಮೋಟಾರುಗಾಡಿ ಹಾದುಹೋಗುವವರೆಗೆ ಬೆದರುತ್ತಿದ್ದ ಕುದುರೆಗಳನ್ನು ಜಗ್ಗಿಸಿ ಹಿಡಿದು ನಿಲ್ಲಿಸಿಕೊಳ್ಳಬೇಕಾಗಿತ್ತು. ಮೋಟಾರುಗಳು ರಸ್ತೆಯಲ್ಲಿ ರಿಪೇರಿಗೋ ಅಥವಾ ಯಾವ ಕಾರಣಕ್ಕೋ ನಿಂತಿದ್ದಲ್ಲಿ, ಆ ಹತ್ತಿರದ ಹಾದಿಯನ್ನು ಬಿಟ್ಟು ಬೇರೆ ಸುತ್ತು ದಾರಿಯಲ್ಲಿ ಗಾಡಿಯನ್ನು ನಡೆಸಿಕೊಂಡು ಹೋಗಬೇಕಾಗಿತ್ತು. ಮೋಟಾರು ಹೆಚ್ಚು ಪರಿಚಯವಾದಮೇಲೆ, ಕುದುರೆಗಳು ಹಗಲುಹೊತ್ತು ಹೆಚ್ಚು ಬೆದರುತ್ತಿರಲಿಲ್ಲ. ರಾತ್ರಿಹೊತ್ತು ಮೋಟಾರನ್ನು ಕಂಡ ಕೂಡಲೇ ಬೆದರಿ ಅಸ್ತವ್ಯಸ್ತತೆಗೆ ಕಾರಣವಾಗುತ್ತಿತ್ತು. ಈ ಬೆದ

ರಿಕೆ ಸರ್ವಸಾಮಾನ್ಯವಾಗಿ ಹೋಗಿದ್ದಾಗ ಹತ್ತಿರ ಹಾದಿಯಲ್ಲಿ ಗಾಡಿಯನ್ನು ನಡೆಸುವಾಗ ನಾನು ನಿದ್ರೆ ಮಾಡುತ್ತಿರಲಿಲ್ಲ. ನಿದ್ರಿಸುತ್ತಾ ಹಾದಿ ಸವೆಸು ತ್ತಿದ್ದಾಗ, ರಸ್ತೆಯಲ್ಲಿ ಮೋಟಾರು ಕಾಣಿಸಿಕೊಂಡಿತೆಂದರೆ ಕುದುರೆಗಳು ನನ್ನನ್ನು ಉರುಳಿಸಿ ಎಲ್ಲಿ ಓಡಿಹೋಗುವವೋ ಎಂಬ ಅಂಜಿಕೆ ಮನಸ್ಸಿನಲ್ಲಿ ಇದ್ದೇ ಇತ್ತು. ರಸ್ತೆ ಹೆಚ್ಚು ಕೆಸರಿನಿಂದ ಕೂಡಿ, ಗಾಡಿ ನಿಧಾನವಾಗಿ ಹೋಗು ತ್ತಿದ್ದಾಗ ಈ ಮೋಟಾರುಗಳ ಭಯವಿರಲಿಲ್ಲ.

ಮೋಟಾರು ಹೆಚ್ಚು ಉಪಯೋಗಕ್ಕೆ ಬಂದಮೇಲೆ, ನಾನು ಸಹಾಯಕ ನೊಂದಿಗೆ ಗ್ರಾಮಾಂತರ ಪ್ರದೇಶಗಳಿಗೆ ಆಗಾಗ ಹೋಗಿಬರುತ್ತಿದ್ದೆ. ನನ್ನ ಸಂಚಾರ ಕ್ರಮ ಹೆಚ್ಚಾದಾಗ ರೈಲು ಹತ್ತಿ ಹೋಗುತ್ತಿದ್ದೆ. ರೈಲಿಲ್ಲದ ಕಡೆಗೆ ಮೋಟಾರು ಹತ್ತಿ ಹೋಗುತ್ತಿದ್ದೆ. ಮೋಟಾರು ಉಪಯೋಗಕ್ಕೆ ಬಂದಿತೆಂದು ಹಗುರಗಾಡಿಯನ್ನು ಬಿಟ್ಟುಬಿಡಲಿಲ್ಲ. ಮೋಟಾರನ್ನು ಬಳಕೆಗೆ ತಂದುಕೊಳ್ಳು ತ್ತಿದ್ದೆ. ಹಗುರಗಾಡಿಯನ್ನು ಪೂರಾ ಬಿಟ್ಟುಬಿಡಲು ಸಾಧ್ಯವಿರಲಿಲ್ಲ. ಶಸ್ತ್ರ ಕ್ರಿಯೆಯನ್ನು ಬೆಳಕಿನಲ್ಲಿಯೇ ನಡೆಸಬೇಕು ಎಂದು, ಅವಸರ ಪ್ರಯಾಣಮಾಡ ಬೇಕೆಂದಿದ್ದಾಗ ಹಗುರಗಾಡಿಯನ್ನೇ ನೆಚ್ಚಿಕೊಳ್ಳಬೇಕಾಗುತ್ತಿತ್ತು. ದೂರ ಪ್ರಯಾಣಕ್ಕೆ ಮೋಟಾರು ಒಗ್ಗುತ್ತಿರಲಿಲ್ಲ. ಒಂದುಸಾರಿ ರೋಗಿಯೊಬ್ಬನ ಪಿತ್ತ ಕೋಶವನ್ನು ಬಸಿಯಬೇಕಾದ ಸಂಧರ್ಬಬಂತು. ಮೋಟಾರೇರಿ ರೋಗಿಯನ್ನು ಸೇರಲು ಹೊರಟೆ. ಅರವತ್ತು ಮೈಲಿದೂರ ಪ್ರಯಾಣ ಮಾಡಬೇಕಾಗಿತ್ತು. ಅರವತ್ತು ಮೈಲಿ ಸಾಗುವಾಗ ನಡುವೆ ಆರುಸಾರಿ ನನ್ನ ಮೋಟಾರು ಟೈರು ಹೂತುಹೋಯಿತು. ಸರಿಮಾಡಿಕೊಂಡು ಮುಂದೆ ಪ್ರಯಾಣಮಾಡಿ ಗುರಿ ಸೇರುವ ಹೊತ್ತಿಗೆ ಕತ್ತಲಾಗಿತ್ತು. ಆಗ ಕಲ್ಲಿದ್ದಲು ದೀಪದ ಬೆಳಕಿನಲ್ಲಿ ಶಸ್ತ್ರ ಕ್ರಿಯೆ ನಡೆಸಬೇಕಾಯಿತು.

ಇನ್ನೊಂದುಸಾರಿ ನಡೆದ ಮತ್ತೊಂದು ಪ್ರಕರಣವನ್ನು ಇಲ್ಲಿ ತಿಳಿಸುವೆ.– ಒಮ್ಮೆ ರೋಗಿಯೊಬ್ಬನು ಉಗ್ರ ಕರುಳುಬಾಲದರೋಗ ಪರಿಹಾರಕ್ಕಾಗಿ ಶಸ್ತ್ರ ಕ್ರಿಯೆಮಾಡಿ ಎಂದ. ಬೆಳಕಿರುವಾಗಲೆ ಶಸ್ತ್ರಕ್ರಿಯೆ ಮಾಡಬೇಕೆಂದು ಮೋಟಾರು ಏರಿ ಹೊರಟೆ. ಹಾದಿಯು ಚೆನ್ನಾಗಿರಲಿಲ್ಲ. ಹಾದಿಯ ಎಡಭಾಗದಲ್ಲಿ ಗಾಡಿ ನಡೆಸಲು ಜಾಗ ಬಿಟ್ಟಿದ್ದರು. ಈ ಹಾದಿಯಲ್ಲಿ ಮರದ ಸಾಮಾನು ತುಂಬಿದ್ದ ದೊಡ್ಡ ಲಾರಿಯೊಂದು ಆಕ್ರಮಿಸಿಕೊಂಡಿತ್ತು. "ಹಾಂಕ್" ಎಂದು

ಕೂಗಿ ಶಬ್ದಮಾಡುವ ರಬ್ಬರ್ ಒತ್ತಿ ಎಷ್ಟೋಸಾರಿ ಶಬ್ದಮಾಡಿದೆ. ಉದ್ಧತನಾದ ಲಾರಿಯವನು ತನ್ನ ಲಾರಿಯನ್ನು ಸರಿಸಿ, ನನ್ನ ಮೋಟಾರು ಹಾಯುವಿಕೆಗೆ ದಾರಿಮಾಡಿ ಕೊಡಲೇ ಇಲ್ಲ. ಗಾಡಿಯ ಎಡಭಾಗದಲ್ಲಿ ಹಾಯ್ದು ಮುಂದಾಗಿಹೋಗಿ ಗಾಡಿಯವನನ್ನು ಎಚ್ಚರಿಸಲು ಬಂದೂಕು ಹಾರಿಸಿದೆ. ಆಗ ಅವನು ಬಲಭಾಗದಲ್ಲಿ ವಾಹನ ನಿಲ್ಲಿಸಿದ. ಮೋಟಾರು ನಿಲ್ಲಿಸಿ ವಿವರಿಸುತ್ತಾ ಅವನಿಗೆ ನಾನು ಹೋಗುವ ಸ್ಥಳವನ್ನು ತಿಳಿಸಿ, "ನಿನಗೆ ವೇಳೆಯಿದ್ದರೆ ಬಾ ಮಾತನಾಡೋಣ. ಈಗ ನಾನು ಸರಿಯಾದಹೊತ್ತಿಗೆ ನಿರ್ದಿಷ್ಟ ಜಾಗವನ್ನು ಸೇರಬೇಕಾಗಿರುವುದರಿಂದ ಮಾತನಾಡಲು ಅವಕಾಶವಿಲ್ಲ" ಎಂದು ಹೇಳಿ ಹೊರಟೆ. ಆ ಮೋಟಾರು ಗಾಡಿಯವ ನನ್ನನ್ನು ಪುನಃ ಭೇಟಿಯಾಗಲಿಲ್ಲ. ನಾನು ಬೆಳಕಿನಲ್ಲೇ ಶಸ್ತ್ರಕ್ರಿಯೆ ಮುಗಿಸಿ ಮನೆಗೆಬಂದೆ.

ಆಗ ಹಳೆಯ T ಮಾದರಿಯ ಮೋಟಾರುಗಳು ನನ್ನ ಮೆಚ್ಚಿಗೆಯನ್ನು ಗಳಿಸಿದ್ದವು. ಈ ಮಾದರಿಯ ಗಾಡಿಯನ್ನು ನಾನು ಹೆಚ್ಚು ಉಪಯೋಗಿಸುತ್ತಿದ್ದೆ. ಪ್ರಯಾಣ ಎಷ್ಟೇ ಕಷ್ಟಸಾಧ್ಯವಾಗಿದ್ದರೂ ಕೆಲಸ ಪೂರೈಸಿ ಹಿಂದಿರುಗಿ ಬರಲು ಇದು ಯೋಗ್ಯವಾಗಿತ್ತು. ಮೋಟಾರಿನ ಟೈರ್ ಕೆಟ್ಟುಹೋದಲ್ಲಿ ಅದನ್ನು ಕಳಚಿಬಿಡುತ್ತಿದ್ದೆ. ಚಕ್ರದ ಅಂಚಿನಿಂದಲೇ ಗಾಡಿಯನ್ನು ನಡೆಸಿಕೊಂಡು ಬರುತ್ತಿದ್ದೆ. ಇನ್ನೂರು ಮುನ್ನೂರು ಮೈಲಿ ಒರಟು ದಾರಿಯಲ್ಲಿ ಪ್ರಯಾಣ ಮಾಡಿ ಹಿಂದಿರುಗಿಬರಲು T ಮಾದರಿಯ ಮೋಟಾರು ಯೋಗ್ಯವಾಗಿತ್ತು. ದಣಿವು ಬೇಸರಿಕೆ ಮಾತ್ರ ಆಗುತ್ತಿತ್ತು. ಆದರೆ ಕೆಲಸಕ್ಕೆ ಮಾತ್ರ ಉತ್ತಮವಾಗಿತ್ತು.

ಹಿಂದೆ ತಯಾರಾಗುತ್ತಿದ್ದ ಮೋಟಾರುಗಾಡಿಗೆ ಸುತ್ತಿನಾವರಣವಾಗಲೀ ಮೇಲು ಹೊದ್ದಿಕೆಯಾಗಲೀ ಇರುತ್ತಿರಲಿಲ್ಲ. ಗಾಳಿಯ ಹೊಡೆತವನ್ನು ಅಡ್ಡ ಕಟ್ಟಲು ಬಾಗಿಲುಗಳಿರಲಿಲ್ಲ. ಒಮ್ಮೆ ನಾನು ಕಷ್ಟಪಟ್ಟ ಬಗೆಯನ್ನು ವಿವರಿಸುತ್ತೇನೆ.–ಹುಲ್ಲುಗಾವಲಿನಲ್ಲಿ ಹಿಮದಿಂದ ಕುಕ್ಕುವ ಚಳಿಗಾಳಿ ಹೆಚ್ಚಾಗಿ ಎದ್ದಿತ್ತು. ಹಿಮ ಮತ್ತು ಹಿಮದ ಮಳೆಯಿಂದ ಹಾದಿ ತುಂಬಿಹೋಗಿತ್ತು. ಗಾಳಿ ಉತ್ತರ–ಪಶ್ಚಿಮವಾಗಿ (ವಾಯವ್ಯ ಮೂಲೆಯಿಂದ) ಬೀಸುತ್ತಿತ್ತು. ಈ ದಿಕ್ಕನ್ನು ಹಿಡಿದು ಪ್ರಯಾಣಮಾಡುತ್ತಿದ್ದೆ. ಪ್ರಯಾಣಮಾಡಬೇಕಾಗಿದ್ದುದು ಎಪ್ಪತ್ತು ಮೈಲಿ. ಗಾಡಿಯಲ್ಲಿ ಗಾಳಿ ಮತ್ತು ಬಿಸಲನ್ನು ಮರೆಮಾಡಿಕೊಳ್ಳಲಾಗುತ್ತಿರ

ಲಿಲ್ಲ. ಮರೆಮಾಡಿಕೊಳ್ಳಲು ಗಾಡಿಗೆ ಮುಚ್ಚುಬಾಗಿಲಾಗಲೀ ತೆರೆಬಾಗಿಲಾ ಗಲೀ ಇರಲಿಲ್ಲ. ಆಗ ಹವಾಗುಣವು ಸೊನ್ನೆ ಡಿಗ್ರಿಗಿಂತ ಕಡಿಮೆಯಾಗಿತ್ತು. ಆ ಚಳಿಗಾಳಿಯಲ್ಲಿ ಸಾಧ್ಯವಾದಷ್ಟು ಜಮಖಾನೆ ಅಥವಾ ಕಂಬಳಿಯಿಂದ ಮೈ ಮುಚ್ಚಿಕೊಂಡು ಹೋಗುತ್ತಿದ್ದೆ. ನನ್ನೊಂದಿಗೆ ಹಳ್ಳಿಯ ವಾಸಸ್ಥನೊಬ್ಬ ಬಂದಿದ್ದ. ಅವನು ಹಿಂದೆ ನನ್ನ ನಗರದ ಮನೆಯಲ್ಲಿ ವಾಸವಾಗಿದ್ದ. "ಏನಾ ದರೂ ಆಗಲಿ, ಪ್ರಯಾಣಕ್ಕೆ ಅಡ್ಡಿಬರಲಿ, ಪ್ರಯಾಣ ನಿಲ್ಲಿಸುವುದು ಬೇಡ ವೆಂದು" ಅವನು ಒತ್ತಾಯಪಡಿಸಿದ. "ರಾತ್ರಿ, ಕತ್ತಲು ಕಳೆಯುವುದ ರೊಳಗಾಗಿ ನಾವಲ್ಲಿರಬಹುದು" ಎಂದು ಹೇಳುತ್ತಾ ಹೊರಟೆ. ಹಾದಿಯಲ್ಲಿ ದನಕರುಗಳ ಹಟ್ಟಿಯೊಂದು ನಮಗೆ ಕಾಣಿಸಿತು. ಕೆಲವು ಮಲಗಿದ್ದವು, ಕೆಲವು ಕೊಂಬುಗಳನ್ನೆತ್ತಿಕೊಂಡು ತಲೆಯನ್ನು ಬಗ್ಗಿಸಿ ಮಳೆಗಾಳಿಯನ್ನು ಎದುರಿ ಸುವ ರೀತಿಯಲ್ಲಿ ನಿಂತುಕೊಂಡಿದ್ದವು. ಈ ದನಗಳ ಮಂದೆಯನ್ನು ದಾಟಿ ಮುಂದೆ ಮೋಟಾರು ಹಾಯುತ್ತಲೇ ಚಾಲಕನನ್ನು ಎಚ್ಚರಿಸಿ, "ನಿಧಾನವಾಗಿ ಬಿಡು" ಎಂದೆ. ಅವನ (ಚಾಲಕನ) ಕಾಲಿಗೆ ತುಂಡುಗೋಣಿ ಬಟ್ಟೆಯೊಂದು ಗಾಳಿಯ ರಭಸಕ್ಕೆ ಹಾರಿಬಂದು ಸುತ್ತಿಕೊಂಡಿತ್ತು. ಇದರಿಂದ ಅವನಿಗೆ ಕಾಲನ್ನು ಮೆಟ್ಟಿ ಒತ್ತುವಂತಾಗುತ್ತಿರಲಿಲ್ಲ. ಆಗ ಅವನು, "ಹಬೆ ಮುಚ್ಚಿಕೊಳ್ಳದು, ತಡೆಯುವ ಯಂತ್ರ ಕೆಲಸಮಾಡದು" ಎಂದ. ಆಗಾಗಲೇ ನಾವು ಮೂರು ವರೆ ಗಂಟೆ ಪ್ರಯಾಣಮಾಡಿ ಎಪ್ಪತ್ತೈದು ಮೈಲಿ ಬಂದಿದ್ದೆವು. ಸೇರಬೇಕೆಂ ದಿದ್ದ ಗ್ರಾಮವನ್ನು ಸೇರಿ ಅಲ್ಲಿಯ ಸ್ಥಳವೈದ್ಯನನ್ನು ಕಂಡು, ಮುಂದೆ ಇನ್ನೂ ಹದಿನಾರು ಮೈಲಿ ದೂರವಿದ್ದ ಪಟ್ಟಣ ಸೇರಬೇಕಾಗಿತ್ತು. ಅಲ್ಲಿ ರೋಗಿ ಯೊಬ್ಬನ ಮೆದುಳು ವ್ರಣವನ್ನು ಯಶಸ್ವೀ ರೀತಿಯಲ್ಲಿ ಬಸಿದುಬಂದೆ. ಪ್ರಯಾಣ ಹೇಗಿತ್ತು ಎನ್ನುವಿರೋ? ಮನೆಯಿಂದ ಹೊರಟಾಗ ನೆನೆಸಿದ ಕೆಲಸ ಪ್ರಯಾಣಾಂತ್ಯದಲ್ಲಿ ಮರೆತುಹೋಗಿತ್ತು.

ಹಗುರಗಾಡಿಯ ಪ್ರಯಾಣವೇ ಪ್ರಯಾಸಕರವಾಗಿದ್ದ ಕಾಲ ಅದು. ಒಂದು ಸ್ಥಳ ಸೇರಲು ಸ್ವಲ್ಪ ದೂರ ರೈಲಿನಲ್ಲಿ ಹೊರಟು ಮುಂದೆ ಮೋಟಾರು ಹತ್ತಿ ಹೋಗಬೇಕಾಗಿತ್ತು. ಹಗುರಗಾಡಿ ಪ್ರಯಾಣ ಮೋಟಾರು ಪ್ರಯಾಣ ಒಂದು ದಿನದಲ್ಲಿ ಮುಗಿಯುತ್ತಿತ್ತು. ರೈಲು ಪ್ರಯಾಣ ದಿನಗಳಾದರೂ ಮುಗಿಯುತ್ತಿರಲಿಲ್ಲ. ನನ್ನ ವೈದ್ಯ ಬಳಗದ ಪರಿಚಯ ಹೆಚ್ಚಾದಷ್ಟೂ

ನನ್ನ ವೈದ್ಯವೃತ್ತಿಯ ಪ್ರಯಾಣವೂ ಹೆಚ್ಚಾಯಿತು. ಹಲವು ವೇಳೆ ನಾನು ರೈಲಿನಲ್ಲಿ ರಾತ್ರಿಯೆಲ್ಲಾ ಕಳೆಯಬೇಕಾಗುತ್ತಿತ್ತು. ಜನವರಿ ೧೯೧೬ರಲ್ಲಿ ನಾನು ಇಪ್ಪತ್ತಾರು ರಾತ್ರಿಯನ್ನು ರೈಲಿನಲ್ಲಿ ಕಳೆಯಬೇಕಾಯಿತು.

ಪ್ರಯಾಣದ ಮಿತಿ ಮೀರಿತ್ತು. ನನಗೆ ಹೆಚ್ಚು ಕರೆ ಬರುತ್ತಿದ್ದುದು ಗ್ರಾಮಾಂತರ ಪ್ರದೇಶದಿಂದಾದುದರಿಂದ, ಒಳಹಾದಿ ಸುತ್ತುಹಾದಿ ಬಳಸಿ ಕೊಂಡು ಪ್ರಯಾಣಮಾಡಲು ರೈಲು ಏರುತ್ತಿದ್ದೆ. ಆಗಿನ ಕಾಲದ ರೈಲು ಗಾಡಿಗಳು ಮೇಜಿನ ಪೆಟ್ಟಿಗೆಯ ಮಾದರಿಯಂತಿದ್ದವು. ಇವುಗಳಲ್ಲಿ "ನೆಲ ಗಡಲೆಕಾಯಿ ಹೊರುವ ವಿಶೇಷಗಾಡಿ" ಎಂದು ಹೆಸರು ಹೊತ್ತ ವಿಶೇಷ ಬಂಡಿ ಯೊಂದಿತ್ತು. ಈ ಗಾಡಿಯನ್ನು ಮಿಸ್ಸೋರಿಯನ್ನರು ಗುರಿತಿಸಬಹು ದಾಗಿದೆ. ಈ ರೈಲು ಪ್ರಯಾಣಿಕರನ್ನು ನಾನು ಬಲ್ಲೆ. ನಾನು ವಾಸವಿದ್ದ ಗ್ರಾಮದ ಬಳಿ ಹಾದು ಹೋಗುತ್ತಿದ್ದ ರೈಲು ಅಲ್ಲಿ ಸಿಲ್ಲುತ್ತಿರಲಿಲ್ಲ. ಅಲ್ಲಿ ಕೆಲವುವೇಳೆ ಪ್ರಯಾಣಿಕರು ಇಳಿಯುವುದಕ್ಕಾಗಿ ವೇಗದ ಮಿತಿಯನ್ನು ಕಡಿಮೆಮಾಡಿ ನಡೆಸುತ್ತಿದ್ದರು. ಗಂಟೆಗೆ ನಾಲ್ಕು ಅಥವಾ ಐದು ಮೈಲಿ ವೇಗ ದಲ್ಲಿ ಹೋಗುತ್ತಿದ್ದ ಈ ಬಂಡಿಯೊಳಗೆ ನಾನು ನೆಗೆದು ಕುಳಿತು ಮುಂದೆ ಹೋಗುತ್ತಿದ್ದೆ. ಒಂದೊಂದು ಸಾರಿ ವೇಗದ ಮಿತಿ ಹೆಚ್ಚಾಗಿದ್ದುದನ್ನು ತಿಳಿ ಯದೆ ಹಾರಲು ಯತ್ನಿಸಿ ಬಿದ್ದು ನೋವನ್ನು ಅನುಭವಿಸಿದುದುಂಟು. ಒಂದು ಸಾರಿ ಬಂಡಿಯೊಳಗೆ ಹಾರಿಕೊಂಡಾಗ ನನ್ನ ಕೈ ಗೀರಿಹೋಯಿತು. ಇದರಿಂದ ಶಸ್ತ್ರಕ್ರಿಯೆ ನಡೆಸಲು ಅಡಚಣೆಯಾಯಿತು. ಹಾರಿಕೊಳ್ಳುವಾಗ ಜಾಗ್ರತೆ ಯಿಂದಲೇ ಹಾರಿಕೊಂಡು ಅಪಾಯಕ್ಕೀಡಾಗದೆ ಪಾರಾಗುತ್ತಿದ್ದೆ. ಓಡಿ ಕುದುರೆಯನ್ನು ಏರಿಕೊಳ್ಳುವಾಗ ಹಾರಿ ಉರುಳಿ ಏರಬೇಕೇ ವಿನಾ ಅದರ ಬೆನ್ನು ಹಿಡಿದು ಕೂಡಲು ಯತ್ನಿಸಬಾರದು ಎಂದು ಕಿರಿಯವನಾಗಿದ್ದಾಗ ತಿಳಿದಿದ್ದೆ. ನೋವಾಗದಂತೆ ಏಟು ಬೀಳದಂತೆ ಹೊರಳಿ ಬೀಳುವುದೂ ಒಂದು ಕಲೆಯೆ. ರೈಲಿನವರು ನನ್ನನ್ನು ದಯಾದೃಷ್ಟಿಯಿಂದ ನೋಡುತ್ತಿದ್ದರು. ನನಗೆ ಅವರ ಮೇಲೆ ಅಭಿಮಾನವಿತ್ತು. ಈ ಜನರು ನನ್ನ ಮೆಚ್ಚಿನ ಗೆಳೆಯರೇ ಆಗಿದ್ದರು.

ಸುಖವಾಗಿ ಮಲಗುವುದಕ್ಕೆ ಅಳವಡಿಸಿರುವ ರೈಲುಗಾಡಿ ರೂಢಿಗೆ ಬಂದ ಮೇಲೆ ಪ್ರಯಾಣ ಅಷ್ಟು ಕಷ್ಟವೆನಿಸುತ್ತಿರಲಿಲ್ಲ. ಮನೆಯಂತೆ ಮೋಟಾರು

ಹೊಂದಾಣಿಕೆಯ ವಾಹನವಾಗಿಬಿಟ್ಟಿತು. ರೈಲ್ವೇ ಸೇವಕರು ಕಿರುಕುಳ ಕೊಡುವ ಜನರೇ ಸರಿ. ನಾನು ಯಾವ ಬಗೆಯ ಕಿರುಕುಳಕ್ಕೂ ಸಿಗಲಿಲ್ಲ. ಒಂದು ರಾತ್ರಿ ಜರ್ಮನ್ ದೇಶದ ವೃದ್ಧ ದಂಪತಿಗಳು, ನನ್ನ ಗಾಡಿಯ ಪಕ್ಕದ ಗಾಡಿಯನ್ನು ಹಿಡಿದು ಪ್ರಯಾಣಮಾಡುತ್ತಿದ್ದರು. ಸದಾ ಮಾತನಾಡುತ್ತಿರುವುದೇ ಅವರ ಸಹಜ ಪ್ರಕೃತಿಯಾಗಿತ್ತು. "ಪಕ್ಕದ ಗಾಡಿಯಲ್ಲಿರುವ ಜನರು ಮಲಗಿದ್ದಾರೆ, ಗಟ್ಟಿಯಾಗಿ ಮಾತನಾಡಬೇಡಿ" ಎಂದು ರೈಲ್ವೆ ಸೇವಕ ಅವರನ್ನು ಎಚ್ಚರಿಸಿದ. ಆ ವೃದ್ಧ ದಂಪತಿಗಳು ಅವನ ಮಾತಿಗೆ ಗಮನ ಕೊಡದೆ, ಗಟ್ಟಿಯಾಗಿ ಮಾತನಾಡುತ್ತಾ, "ಪಕ್ಕದ ಗಾಡಿಯಲ್ಲಿ ವೈದ್ಯ ಹೊರಟಿದ್ದಾನೆ, ಎಲ್ಲಿಗೆ ಹೊರಟಿದ್ದಾನೆಯೋ ತಿಳಿಯದು" ಎಂದು ಆಸಕ್ತಿಯಿಂದ ಮಾತನಾಡುತ್ತಿದ್ದರು. ಇನ್ನಿಬ್ಬರು ವೃದ್ಧರು, ಮುಂಜಾನೆ ಮೂರು ಗಂಟೆಗೆ ರೈಲನ್ನು ಬಿಟ್ಟು ಇಳಿಯಬೇಕಾಗಿತ್ತು. ತಮ್ಮನ್ನು ರೈಲ್ವೇ ಸೇವಕ ಹೊತ್ತಿಗೆ ಸರಿಯಾಗಿ ಇಳಿಯಬೇಕೆಂದಿರುವ ನಿಲ್ದಾಣದಲ್ಲಿ ಇಳಿಸುತ್ತಾನೆಯೋ ಇಲ್ಲವೋ ಎಂಬ ಸಂದೇಹದಿಂದವರು "ಆಲಾರ್ಮ್" ಗಡಿಯಾರವನ್ನು ತಮ್ಮ ಜೊತೆಯಲ್ಲಿ ತಂದಿದ್ದರು. ಎರಡು ಗಂಟೆಗೆ "ಆಲಾರ್ಮ್" ತಿರುಗಿಸಿ, ಎಚ್ಚರವಾದಮೇಲೆ ನಿಶ್ಚಿತ ನಿಲ್ದಾಣದಲ್ಲಿಳಿಯಲು ಬೇಕಾದಷ್ಟು ಸಮಯವಿರುವುವೆಂದುಕೊಂಡರು.

ನನ್ನ ಪ್ರಯಾಣ ಚರಿತ್ರೆ ಇಲ್ಲಿಗೆ ಮುಗಿಯಿತು. ಇನ್ನು ಹಳೆಯಕಾಲದ ಆಗಿನ ಗ್ರಾಮಾಂತರಗಳ "ಹೊಟೆಲ್"ಗಳ ಸ್ಥಿತಿಗತಿಯನ್ನು ವಿವರಿಸುವೆ. ಇದನ್ನು ವಿವರಿಸಿದಲ್ಲಿ ಪ್ರಯಾಣ ಚರಿತ್ರೆ ಪೂರ್ಣ ಮುಗಿದಂತಾಗುವುದು. ಸಂಕ್ಷಿಪ್ತವಾಗಿ ವಿವರಣೆಯನ್ನು ಮುಗಿಸಿಬಿಡುವೆ.—ಹೊಟೆಲಿನಲ್ಲಿ ಮರದ ಅಟ್ಟಳಿಗೆಯ ಕೊರತೆಯಿರಲಿಲ್ಲ. ಹೊಟೆಲಿನಲ್ಲಿ ಒಂದನೇ ಮತ್ತು ಎರಡನೆಯ ತರಗತಿ ಎಂದು ಪ್ರತ್ಯೇಕವಾಗಿ ಎರಡು ದರ್ಜೆಯಿತ್ತು. ಮರನುಟ್ಟಿನಲ್ಲಿ ರಕ್ತಹೀರುವ ತಿಗಣೆಗಳು ಸಾಕಷ್ಟು ಸ್ಥಳ ಮಾಡಿಕೊಂಡಿದ್ದವು.

ಹೊಟೆಲಿನ ನಡುವೆ (ಮುಖ್ಯಭಾಗದಲ್ಲಿ) ದೊಡ್ಡದೊಂದು ಕೆಂಪು ಅಗ್ನಿಷ್ಟಿಕೆ (ಸ್ಟೌವ್) ಮತ್ತು ಮೇಜುಯಿತ್ತು. ಪ್ರಯಾಣಿಕರು ಬೆಂಕಿ ಕಾಯಿಸಿಕೊಳ್ಳುವುದಕ್ಕೆ ಮತ್ತು ಇಸ್ಪೀಟು ಆಡುವುದಕ್ಕಾಗಿ ಈ ಮೇಜಿನ ಸಿದ್ಧತೆ ಇದ್ದುದು. ರಾತ್ರಿ ಹೊಟೆಲಿನ ಆಡಳಿತ ಮುಗಿದಮೇಲೆ, ಯಜಮಾನ ಆ ಮೇಜಿನಮೇಲೆ ಲಾಂದ್ರ

ವನ್ನಿಟ್ಟು ಮಲಗಲು ಹೋಗುತ್ತಿದ್ದ. ಇದರಿಂದ ಹೊತ್ತಾಗಿಬಂದ ಅತಿಥಿಯು ಆ ಲಾಂದ್ರವನ್ನು ಹಿಡಿದುಕೊಂಡು ಹೊಟೆಲಿನಲ್ಲಿ ಜಾಗವಿಲ್ಲ, ಕೋಣೆ ಖಾಲಿ ಯಿದೆಯೇ ಎಂದು ಹುಡುಕಬೇಕಾಗಿತ್ತು. ನಾನು ಹೊತ್ತಾಗಿ ಬಂದ ದಿನ ಆ ಲಾಂದ್ರದ ಬೆಳಕಿನ ಸಹಾಯದಿಂದ ಮಹಡಿ ಮೆಟ್ಟಲು ಹತ್ತಿ, ಬಾಗಿಲು ತೆರೆದ ಕೋಣೆ ಯಾವುದಾದರೂ ಇದೆಯೇ ಎಂದು ನೋಡಲು ಹೋಗುತ್ತಿದ್ದೆ. ಬಾಗಿಲು ತೆರೆದ ಕೋಣೆಯಿದ್ದಲ್ಲಿ, ಆದು ಉಳಿದುಕೊಳ್ಳುವ ಜಾಗ, ಅಲ್ಲಿ ಅತಿಥಿ ಮಲಗಬಹುದು ಎಂದು ಸುಲಭವಾಗಿ ತಿಳಿಯಬಹುದಾಗಿತ್ತು. ಚಳಿಗಾಲದಲ್ಲಿ ಮಾತ್ರ ಖಾಲಿ ಕೋಣೆಯನ್ನು ಸುಲಭವಾಗಿ ಕಂಡುಕೊಳ್ಳಬಹುದಾಗಿತ್ತು. ಏಕೆಂದರೆ ಕೋಣೆಯನ್ನು ಆಕ್ರಮಿಸಿಕೊಂಡವರು ಬಾಗಿಲನ್ನು ಮುಚ್ಚಿಕೊಂಡು ಮಲಗುತ್ತಿದ್ದರು. ಬೇಸಿಗೆಯಲ್ಲಿ ಗಾಳಿ ಬೀಸಲೆಂದು ಕೋಣೆಯಲ್ಲಿ ಮಲಗಿದ್ದ ವರು ಬಾಗಿಲುಗಳನ್ನು ತೆರೆದು ಮಲಗುತ್ತಿದ್ದರು. ಆಗ ಬಾಗಿಲು ತೆರೆದ ಕೋಣೆ ಯನ್ನು ನೋಡಿ, ಪ್ರವೇಶಿಸಿ ಯಾರಾದರೂ ಮಲಗಿದ್ದಾರೆಯೋ ಇಲ್ಲವೋ ಎಂದು ಕಂಡುಕೊಳ್ಳಬೇಕಾಗಿತ್ತು. ಖಾಲಿ ಕೋಣೆಯನ್ನು ಹಿಡಿಯಲು ಹೊರಟು ಒಬ್ಬನು ಹೀಗೆ ಹುಡುಕುತ್ತಾ ಆ ಹೊಟೆಲಿನ ಎಲ್ಲಾ ಕೋಣೆಗಳನ್ನೂ ನೋಡಿ ಬರಬೇಕಾಗಿತ್ತು. ಸಭ್ಯ ಮನುಷ್ಯನು ಹೀಗೆ ಮಲಗಿರುವ ಅತಿಥಿಯ ಹಾಸಿಗೆಯ ಕಡೆಗೆ ನೋಡದೆ, ಕುರ್ಚಿಯಮೇಲೆ ತೂಗುಹಾಕಿರುವ ಬಟ್ಟೆಗಳನ್ನು ನೋಡಿ ಕೋಣೆಯಲ್ಲಿ ಯಾರೋ ಮಲಗಿದ್ದಾರೆ ಎಂದು ತಿಳಿದು ಮುಂದೆ ಹೋಗಬೇಕಾಗಿತ್ತು.

ಹೊಟೆಲಿನಲ್ಲಿ ಹೀಗೆ ಪ್ರಯಾಸಪಟ್ಟು ಕೋಣೆಯನ್ನು ಹಿಡಿದ ಮಾತ್ರಕ್ಕೇ ಕೆಲಸ ಮುಗಿಯುತ್ತಿರಲಿಲ್ಲ. ಬೇಸಿಗೆಯಲ್ಲಿ ತಿಗಣೆಗಳಿವೆಯೋ ಇಲ್ಲವೋ ಎಂದು ಪರೀಕ್ಷಿಸಿ ತಿಳಿಯಬೇಕಾಗಿತ್ತು. ಚಳಿಗಾಲದಲ್ಲಿ ಹೊದ್ದಿಕೆಯನ್ನು ನೋಡಿ ಕೊಳ್ಳಬೇಕಾಗಿತ್ತು. ಕೋಣೆಗಳಲ್ಲಿ ಈಗಿನಂತೆ ಉಷ್ಣತೆಯನ್ನು ಹರಡುವ ಸಾಧನಸಂಪತ್ತಿರಲಿಲ್ಲ. ಚಳಿಯಲ್ಲಿ ಸುತ್ತಾಡಿಬಂದ ಪ್ರಯಾಣಿಕರಿಗೆ ಹೊದ್ದಿ ಕೆಯ ಸೌಕರ್ಯವಿರಲಿಲ್ಲ. ಆಗ ವೈದ್ಯ ಮೇಲುಕೋಟನ್ನು ತೆಗೆದು ಮೇಲೆ ಹಾಕಿ ಕೊಂಡು, ಹಾಸಿಗೆಯ ಮೇಲಿದ್ದ ದುಬುಟಿಯಡಿಯಲ್ಲಿ ಮುದುರಿಕೊಳ್ಳಬೇಕಾ ಗಿತ್ತು. ಮಲಗುವಾಗ ಪಾದರಕ್ಷೆಗಳ (ಷೂಸ್)ನ್ನು ತೆಗೆದಿಡುವುದು ಅಥವಾ ಹಾಕಿಕೊಂಡೇ ಮಲಗುವುದು ಪ್ರಯಾಣಿಕನ ಇಚ್ಛೆಗೆ ಬಿಡಲಾಗಿತ್ತು. ಮಂಜಿನ

ಗಾಳಿಯಿದ್ದಲ್ಲಿ ಅವನು ಇವುಗಳನ್ನು ತೆಗೆಯುತ್ತಿರಲಿಲ್ಲ. ಹೊಟೆಲಿನ ಯಜಮಾನ ಏಳುವುದಕ್ಕೆ ಮುಂಚಿತವಾಗಿಯೇ ಪ್ರಯಾಣಿಕ ಹೊಟೆಲನ್ನು ಬಿಟ್ಟು ಹೊರಡಬೇಕಾಗಿದ್ದಲ್ಲಿ, ಲಾಂದ್ರವನ್ನು ಹಿಡಿದು ಮಹಡಿಯಿಂದ ಕೆಳಗಿಳಿದು, ಅರ್ಧ ಅಥವಾ ಕಾಲ ಡಾಲರ್ ನಾಣ್ಯವನ್ನು ಲಾಂದ್ರದ ಕೆಳಗಿಟ್ಟು ಹೊರಟುಬರಬೇಕಾಗಿತ್ತು. ಇದು ಅವನ ವೆಚ್ಚಕ್ಕೆಂದು ಅರ್ಥವಾಗಿ ವ್ಯವಹಾರ ಮುಗಿದಿತ್ತು. ನಡುರಾತ್ರಿಯಲ್ಲಿ ಅತಿಥಿಯೊಬ್ಬ ಬಂದು, ಪಾದರಕ್ಷೆಯನ್ನು ಸಹಾ ತೆಗೆಯದೆ ಮಲಗಿದ್ದು ಮುಂಜಾನೆ ಬೇಗ ಎದ್ದು ಹೋದ ಎಂದು ಸುಲಭವಾಗಿ ಯಜಮಾನ ತಿಳಿಯುತ್ತಿದ್ದ.

ಆಗ ಹೊಟೆಲಿನಲ್ಲಿ ಕೆಲವುವೇಳೆ ಜಾಗಸಿಕ್ಕುವುದು ಕಷ್ಟವಾಗಿತ್ತು. ನಾನು ಆಗ (ಅಂಚೆ) ತಂತಿ ಸಮಾಚಾರದ ವ್ಯವಸ್ಥೆ ನೋಡಿಕೊಳ್ಳುತ್ತಿದ್ದ ಅಧಿಕಾರಿಯ ಕೋಣೆಯಲ್ಲಿ ಆಶ್ರಯ ಪಡೆಯುತ್ತಿದ್ದೆ. ಆ ಅಧಿಕಾರಿಯ ಒಳಕೋಣೆಯಲ್ಲಿ ಬೇರೆ ಯಾರಿಗೂ ಪ್ರವೇಶ ಸಿಗುತ್ತಿರಲಿಲ್ಲ. ನನಗೆ ಮಾತ್ರ ಎಲ್ಲಕಡೆಗೂ ಪ್ರವೇಶ ಸಿಗುತ್ತಿತ್ತು. ವೈದ್ಯನಿಗೆ ಕರೆ ಬರಬೇಕಾದುದೆಲ್ಲಾ ಈ ತಂತೀ ಕಾರ್ಯಾಲಯದ ಮೂಲಕವಾಗಿಯೇ ಬರುತ್ತಿದ್ದುದರಿಂದ ತಂತೀ ಕಛೇರಿಯ ಅಧಿಕಾರಿಯು ವೈದ್ಯನ ಬರುವಿಕೆಯನ್ನೇ ನಿರೀಕ್ಷಿಸುತ್ತಿದ್ದ. ಈ ತಂತೀ ಕಛೇರಿಯ ಕೋಣೆಯು ಯಾವಾಗಲೂ ಶಾಖದಿಂದ ಕೂಡಿ ಬೆಚ್ಚಗಿರುತ್ತಿತ್ತು. ಅಂಚೆ ಚೀಟಿ ಮಾರುವ ಮತ್ತು ತಂತೀ ಚೀಟಿಯನ್ನಿಟ್ಟಿರುವ ಮೇಜಿನಮೇಲೆ, ನನ್ನ ಉಪಕರಣದ ಚೀಲವನ್ನು ತಲೆದಿಂಬಾಗಿಟ್ಟುಕೊಂಡು ಮಲಗುತ್ತಿದ್ದೆ. ಹೀಗೆ ಎಷ್ಟೋಸಾರಿ ಈ ಕಛೇರಿಗಳಲ್ಲಿ ರಾತ್ರಿ ಕಳೆದಿದ್ದೇನೆ.

ಈ ಅದ್ಭುತ ಅನುಭವದ ಪ್ರಯಾಣದ ನಡುವೆ, ಅನೇಕ ರೋಗಿಗಳ ಜೀವ ಉಳಿಸಲು ಪ್ರಯತ್ನಿಸಿದ್ದೇನೆ. ಮರಣಾವಸ್ಥೆಯಲ್ಲಿದ್ದವರನ್ನು ಕಂಡು ಬಂದಿದ್ದೇನೆ. ಈ ವಿಚಿತ್ರಾನುಭವ ನನಗೆ ಬೇರೆ ಎಲ್ಲಿಯೂ ದೊರೆಯದು. ಈ ಸಂದರ್ಭದಲ್ಲಿ ಬೇರೆಬೇರೆ ವೈದ್ಯರು ಮತ್ತು ಅನೇಕ.ತರಹ ರೋಗಿಗಳು ನನ್ನ ಗೆಳೆಯರಾದರು. ಈ ಅನುಭವ ನಿಜವಾಗಿ ನನಗೆ ಆನಂದ ತರುವುದಾಗಿದೆ. ಹಿಂದಿನ ಅವ್ಯವಸ್ಥೆಯ ಕಷ್ಟದಿನಗಳು ಕಳೆದವೆಂದು ತಿಳಿಯುತ್ತೇನೆ. ಈಗ ಆ ಕಷ್ಟದಿನಗಳು ನನಗೂ, ವೈದ್ಯವೃತ್ತಿ ಅನುಸರಿಸಿಬಂದ ಇತರ ತರುಣ ವೈದ್ಯರಿಗೂ ಮುಗಿಯಿತು. ಗತಕಾಲದ, ಕಷ್ಟತಮವಾದ, ನಿರ್ದಯ, ಕಠಿನ ಅನುಭವವನ್ನು

ಈಗಲೂ ನೆನೆಸಿದರೆ ಆಗಾಗ ಬಹಳ ಯಾತನಾತೀತವಾದುದೆಂದು ಕಂಡುಬರು ವುದು.

ಈಗ ವೈದ್ಯ ರೋಗಿಯನ್ನು ನೋಡಲು ಮತ್ತು ದೂರ ಪ್ರಯಾಣ ಮಾಡಲು ಹೆಚ್ಚು ಶ್ರಮಿಸಬೇಕಾಗಿಲ್ಲ. ಗಂಟೆಗಟ್ಟಲೆ ನಾನು ರೋಗಿಯ ಬಳಿ ಕುಳಿತು ರೋಗಲಕ್ಷಣವನ್ನು ತಿಳಿಯುತ್ತಿದ್ದೆ. ರೋಗದ ಬಗ್ಗೆ ಹೆಚ್ಚು ಅನುಭವ ಪಡೆಯುತ್ತಿದ್ದೆ. ಹಿಂದಿನ ಕೆಲವು ವೈದ್ಯರು ಹೃದ್ರೋಗದಿಂದ ಮರಣಕ್ಕೀಡಾಗು ತ್ತಿದ್ದರು. ಕಾರಣ ತಿಳಿಯದೆ ಈ ರೋಗಕ್ಕೆ ಬಲಿಯಾಗುತ್ತಿದ್ದರು. ಹಿಂದೆ ವೈದ್ಯ, ಹಿಮಗಾಳಿ ಮಳೆಚಳಿಯೆನ್ನದೆ ರೋಗಿಗಳಿದ್ದ ಸ್ಥಳಗಳಿಗೆ ಅಲೆಯುತ್ತಾ ಸಾಧಾರಣವಾಗಿ ಬಹುಬೇಗ ನ್ಯುಮೋನಿಯಾ ಜ್ವರಕ್ಕೆ ಗುರಿಯಾಗಿ ನಾಲ್ಕ ನೆಯ ದಿನವೇ ಚಿತ್ತವಿಭ್ರಮೆಯಲ್ಲಿ "ಜಾಕ್ ಮುಂದೋಡು! ಹೆಜ್ಜೆ ಹಾಕು!" ಎಂದು ಹಗುರಗಾಡಿ ಕುದುರೆಗೆ ಕೂಗಿ ಹೇಳುತ್ತಿದ್ದ.

೫

ಹಿಂದಿನ ಅಧ್ಯಾಯದಲ್ಲಿ ಗ್ರಾಮಾಂತರ ವರ್ಣನೆ, ಹಗಲುಹೊತ್ತಿ ನಲ್ಲಿ ಹಳ್ಳಿವೈದ್ಯರು ಪ್ರಯಾಣಮಾಡುತ್ತಿದ್ದ ಚಿತ್ರ ಮತ್ತು ಕುದುರೆಯು ದಣಿದು ಗಾಡಿಯೆಳೆದುಕೊಂಡು ಹೋಗುತ್ತಿದ್ದ ಚಿತ್ರವನ್ನು ವಿವರಿಸಿರುವೆ. ಆ ಕಾಲದ ರಾತ್ರಿ ಪ್ರಯಾಣ ಹೇಗಿತ್ತು ? ಬದಲಾವಣೆಯಾಗಿತ್ತೇ ಎಂಬುದನ್ನು ಈಗ ತಿಳಿ ಸುವೆ.

ರಸ್ತೆಗಳಲ್ಲಿ ಒದಗುತ್ತಿದ್ದ ಘಟನೆಗಳು ತೆರೆದ ಪುಸ್ತಕವಿರುವಂತೆಯೂ ರೋಗಿ ಮಲಗಿದ್ದ ಕೋಣೆಯು ತೆರೆದ ಹಾಗೆಯೂ ಇರುತ್ತಿತ್ತು. ಪ್ರತಿ ಮನೆ ಯವರಿಗೂ ಈ ಚಿತ್ರ ವಿವರಣೆ ನೆನಪಿದೆ. ಆದರೆ ಗ್ರಾಮಾಂತರದ ವೈದ್ಯರಿಗೆ ವ್ಯಸನಭರಿತ ಸಂದರ್ಭಗಳು, ರಸ್ತೆಪಾಡಿನ ಕಷ್ಟನಷ್ಟಗಳು ಚೆನ್ನಾಗಿ ನೆನಪಿ ನಲ್ಲಿದೆ. ಯಾವ ಹಳೆಯ ವೈದ್ಯನೂ ಈ ಅನುಭವದ ಚಿತ್ರ ವಿವರಣೆಯನ್ನು ಇಷ್ಟು ಚೆನ್ನಾಗಿ ನೆನಪಿನಲ್ಲಿಟ್ಟುಕೊಂಡಿರಲಾರ. ಚಿತ್ರಗಾರನು ಈ ಸಂದರ್ಭಗಳ ವಿವರಣೆಯ ಚಿತ್ರವನ್ನು ಚಿತ್ರಿಸಲು ಆ ಕಾಲದಲ್ಲಿ ಪ್ರಯತ್ನಿಸಲಿಲ್ಲ. ರೋಗಿಯ ಅತ್ಯುಗ್ರವೇದನೆ, ಅನುಕಂಪವನ್ನು ದೃಶ್ಯದಲ್ಲಿ ತೋರಗೊಡಲು ಅವನು ಸಾಹಸ ಪಡಲಿಲ್ಲ. ಮನೋವಿಕಾರದ ಬಗೆಯನ್ನು ಚಿತ್ರದಲ್ಲಿ ರೂಪಿಸಲು ಸಾಧ್ಯವಿಲ್ಲ

ವಷ್ಟೆ! "ವೈದ್ಯ" ಎಂದು ಬರೆದ ಚಿತ್ರಪಟ ಮಾತ್ರ ಅನೇಕ ಮನೆಗೋಡೆಗಳನ್ನು ಅಲಂಕರಿಸಿತ್ತು. ಈ ಚಿತ್ರ, ಅಂತ್ಯಸ್ಥಿತಿಯಲ್ಲಿದ್ದ ಚಿಕ್ಕರೋಗಿಯ ಪಕ್ಕದಲ್ಲಿ ಕೈಕಟ್ಟಿ ಮೌನರುಜುವಾತು ಕೊಡುವಂತೆ ಕುಳಿತಿದ್ದ ಪ್ರಸಿದ್ಧ ವೈದ್ಯನ ದೃಶ್ಯ ಚಿತ್ರಿತವಾಗಿತ್ತು. ದಿಕ್ಕು ತೋರದೆ ಕಸಿವಿಸಿಪಡುತ್ತಿದ್ದ ರೋಗಿಯ ಮಾತಾಪಿತೃಗಳು ಚಿತ್ರದ ಹಿನ್ನೆಲೆಯಲ್ಲಿ ಚಿತ್ರಿತರಾಗಿದ್ದರು. ವೈದ್ಯನ ಮುಖದಲ್ಲಿ ಪರಿಪೂರ್ಣ ಶಾಂತತೆಯಿತ್ತು. ಯಾವ ಬಗೆಯ ಶಾಂತತೆ ಅವನ ಮನಸ್ಸಿನಲ್ಲಿತ್ತು ? ಇದನ್ನು ಹೇಳುವಂತಿರಲಿಲ್ಲ. ವೈದ್ಯನೂ ಸಹಾಯಹೀನನೆ. ರೋಗಿ ಮತ್ತು ರೋಗಿಯ ಮಾತಾಪಿತೃಗಳಿಗೆ ಅಂತ್ಯಕಾಲದಲ್ಲಿ ಸಹಾಯ ಮಾಡುವುದಕ್ಕಾಗಿ ಮತ್ತು ತನ್ನ ಕರ್ತವ್ಯಪಾಲನೆಗಾಗಿ ಅವನು ನಿಲ್ಲುತ್ತಿದ್ದ. ಈ ವಿಶ್ವಾಸಪಾತ್ರತೆಗಾಗಿ ಸಂಸಾರವರ್ಗದವರು ವೈದ್ಯನನ್ನು ವಿಶ್ವಾಸದಿಂದ ಕಾಣುತ್ತಿದ್ದರು. ಹಳೆಯ ಹಳ್ಳಿಯ ವೈದ್ಯ ಹೆಚ್ಚು ಮಾತಿನವನಲ್ಲ. ಮಾತೂ ಆಗ ಅಷ್ಟಿರಲಿಲ್ಲ.

ಈಗ ಸಿಕ್ಕುವ ಔಷಧೋಪಚಾರ ಸೌಕರ್ಯವನ್ನು ಹಿಂದಿನ ದಿನದೊಂದಿಗೆ ಹೋಲಿಸಿದಲ್ಲಿ ಆಗ ಸಿಗುತ್ತಿದ್ದ ಸೌಲಭ್ಯವೆಲ್ಲಾ ಕನಿಕರಪಡುವಂತಹದೇ ಆಗಿತ್ತು ಎಂದು ತಿಳಿಯುವುದು. ದೊರೆಯುತ್ತಿದ್ದ ಸೌಲಭ್ಯದಿಂದ ಒಬ್ಬನು ಸಾಹಸಪಡುತ್ತಿದ್ದುದನ್ನು ಗಣನೆಗೆ ತಂದುಕೊಳ್ಳಬೇಕು.

ಹಿಂದಿನ ವೈದ್ಯ, ಚಿಕಿತ್ಸಾತಂತ್ರವನ್ನು ಎಷ್ಟು ಸಾಧಿಸಿದ ಎಂಬ ವಿಚಾರ ಹಾಗಿರಲಿ, ವೈದ್ಯ ಮನೆಗೆ ಬಂದ ಎಂದು ತಿಳಿದಕೂಡಲೇ ಒಂದು ಬಗೆಯ ನೆಮ್ಮದಿಯ ವಾತಾವರಣವು ಮನೆಯಲ್ಲಿ ತಲೆದೋರುತ್ತಿತ್ತು. ರೋಗಿಯ ಹಿಂದಿನ ಅನುಭವಕ್ಕಿಂತಲೂ ಪರಿಹರಿಸಲು ಮನೆಗೆ ಬಂದ ವೈದ್ಯನ ಮೈತ್ರೀಭಾವ ಹೆಚ್ಚಾಗಿತ್ತು. ಒಂದುಸಾರಿ ವೃದ್ಧೆಯೊಬ್ಬಳ ಎದೆ ಬಡಿತವನ್ನು ತಿಳಿಯಲು "ಸ್ಟೆತೋಸ್ಕೋಪ್" ಹಿಡಿದು ನೋಡಿದೆ. ಬಡಿತವನ್ನು ತಿಳಿಯಲು ನೋಡುತ್ತಿದ್ದೇನೆಂದು ತಿಳಿಯದೆ ವೃದ್ಧೆ, ಉತ್ಸಾಹಭರಿತಳಾಗಿ "ನನಗೀಗ ಎಷ್ಟೋ ಮೇಲಾಗಿದೆ" ಎಂದಳು. ವೈದ್ಯ ತನ್ನ ಸಹಾಯವನ್ನು ಎರಡು ಬಗೆಯಲ್ಲಿ ಸ್ಪಷ್ಟಪಡಿಸಿದ. ಮೊದಲನೆಯದಾಗಿ ತಿಳಿದ ಚಿಕಿತ್ಸೆಯಿಂದ ರೋಗಿಯ ನೋವು ಪರಿಹಾರವಾಗುವಂತೆ ಮಾಡುತ್ತಿದ್ದ. ಎರಡನೆಯದಾಗಿ ರೋಗವನ್ನು ಪೂರಾ ಗುಣಪಡಿಸುವುದಕ್ಕೆ ಮತ್ತು ತಡೆಗಟ್ಟುವುದಕ್ಕೆ ಪ್ರಯತ್ನಿಸುತ್ತಿದ್ದ.

ರೋಗಿ ವೈದ್ಯನಲ್ಲೆಷ್ಟು ವಿಶ್ವಾಸವಿಟ್ಟಿರುತ್ತಿದ್ದನೋ ಅಷ್ಟೇ ಸಾಮರ್ಥ್ಯತೆಯಿಂದ ವೈದ್ಯ ಪರಿಹಾರಮಾರ್ಗ ಕಂಡು ಅವನನ್ನು ಬದುಕಿಸಲು ಪ್ರಯತ್ನಿಸುತ್ತಿದ್ದ.

ನಾನಿನ್ನೂ ನನ್ನ ಹಳೆಯ ಟಿಪ್ಪಣಿ ಮತ್ತು ವರದಿ ಪುಸ್ತಕಗಳನ್ನಿಟ್ಟು ಕೊಂಡಿದ್ದೇನೆ. ಬೇರೆಬೇರೆ ಕಡೆ, ಹಲವಾರು ಸಂದರ್ಭಗಳಲ್ಲಿ ರೋಗಿಗಳನ್ನು ಪರೀಕ್ಷಿಸಿ ಪರಿಹಾರಕ್ಕಾಗಿ ಕೊಟ್ಟ ಔಷಧಗಳನ್ನು ಗುರಿತಿಸಿಟ್ಟಿದ್ದೇನೆ. ಕೆಲವು ಸಾರಿ ಚಿಕಿತ್ಸಾರಂಭದಲ್ಲಿಯೇ ಚಿಕಿತ್ಸೆಯು ವ್ಯರ್ಥ, ಇದರಿಂದ ಬರುವ ಆದಾ ಯವೂ ಪ್ರಯೋಜನಕ್ಕೆ ಬಾರದು ಎಂದು ಕಂಡುಕೊಂಡಿದ್ದೇನೆ. ಮೋಟಾರಿನ ಹಾರ್ನ್ ಮುಟ್ಟಿದಾಗಲೇ ಕೈಕೊಳ್ಳುವ ಪ್ರಯಾಣ ವ್ಯರ್ಥವೆಂದು ತೋರಿ ಬಂದುದುಂಟು. ಇಂತಹ ಸಮಯದಲ್ಲಿ ರೋಗಿಗೆ ಯಾವ ಭಯವಾಗಲೀ ಅಪಾಯವಾಗಲೀ ಇರುತ್ತಿರಲಿಲ್ಲ. ವೈದ್ಯ ಬಂದು ನೋಡುವುದರೊಳಗಾಗಿಯೇ ಅವನು ಚೇತರಿಸಿಕೊಂಡಿರುತ್ತಿದ್ದ. ಮೇಲಿಂದ ಬಿದ್ದ ಮಗುವಿಗೆ ಎಲ್ಲಿ ಮೂಳೆ ಮುರಿದುಹೋಗಿದೆಯೋ ಎಂದು ತಾಯಿಯು ಭಯಪಡುತ್ತಿದ್ದುದು ಮಗುವಿನ ನೋವಿಗಿಂತಲೂ ಹೆಚ್ಚಾಗಿತ್ತು. ಕೆಲವುವೇಳೆ ಮಾತಾಪಿತೃಗಳ ಬರೀ ವ್ಯಾಕುಲತೆಯನ್ನು ಕಡಿಮೆಮಾಡುವ ಸಲುವಾಗಿ ವೈದ್ಯ ಅವರ ಮನೆಗೆ ಬರ ಬೇಕಾಗಿತ್ತು. ಹೊಗೆಸೊಪ್ಪನ್ನು ಉಪಯೋಗಿಸಿ ವಾಕರಿಕೆ ಅಥವಾ ಉಬ್ಬಳಿ ಕೆಗೆ ಕಾರಣವಾದಾಗಲೂ ಅಷ್ಟೆ, ವೈದ್ಯ ಬರುವದರೊಳಗಾಗಿಯೇ ಅದು ಉಪ ಶಮನವಾಗುತ್ತಿತ್ತು. ಉಳುಕು, ಚಳುಕು ಅಥವಾ ಮೂತ್ರ ಪಿಂಡದಲ್ಲಿ ಸೇರಿ ಕೊಳ್ಳುವ ಕಲ್ಲು, ಹಸುರುಸೇಬು ತಿನ್ನುವುದರಿಂದ ಕಾಣಿಸಿಕೊಳ್ಳುತ್ತಿದ್ದ ಸೆಡೆತ, ಒಡನೆ ತಲೆದೋರುವ ಶೂಲೆ, ಇವೆಲ್ಲ ಉಪದ್ರವಗಳಿಗಾಗಿ ಅಲ್ಪಸ್ವಲ್ಪ ಔಷಧಿ ಮನೆಯಲ್ಲಿಯೇ ಇರುತ್ತಿತ್ತು. ಇರುತ್ತಿದ್ದುದೆಲ್ಲಾ ಬರೀ ಪೊಳ್ಳು ಔಷಧಿಯಾ ಗಿತ್ತು. ಆಗ ಯಂತ್ರಕ್ಕೆ ಬಳಿಯುವ ಚರಬಿಯನ್ನು ಕೊಳ್ಳಬೇಕಾಗಿತ್ತು. "ಚರಬಿ ಬಳಿದುಕೋ" ಎಂದು ವೈದ್ಯ ಹೇಳಿದಲ್ಲಿ ಅವನಿಗೆ ಸಂಪಾದನೆಯಾಗುತ್ತಿರಲಿಲ್ಲ. ಆಗ ಅವನು ಮಾತ್ರೆಗಳನ್ನು ಕೊಟ್ಟು, ಪರಿಹಾರಮಾರ್ಗ ಸೂಚಿಸಿ ಹಣ ಪಡೆಯು ತ್ತಿದ್ದ. ಪ್ರಾರ್ಥನೆ ಮುಗಿದಮೇಲೆ ಪಾದ್ರಿ "ತಥಾಸ್ತು" ಎನ್ನುವ ಮಾದರಿ, ಎಲ್ಲಾ ಶೂಲೆಬೇನೆಗೆ ಮಾತ್ರೆಯೇ ಪರಮೌಷಧಿಯಾಗಿತ್ತು. ಅದು ಅಷ್ಟು ಪರಿಹಾರ ವಲ್ಲದಿದ್ದರೂ ಹೆಚ್ಚಿನ ನಂಬಿಕೆಗೆ ಕಾರಣವಾಗಿತ್ತು. ಮಾತ್ರೆ ಕೊಟ್ಟು ಶಮನ

ಗೊಳಿಸುವ ವಿಧಾನಕ್ಕೆ ಜನರು ಮೋಸಗೊಳ್ಳುತ್ತಿರಲಿಲ್ಲ. ಮುಖ್ಯವಾಗಿ ಮಾತ್ರೆಯೇ ಮಾನವ ಬಾಂಧವ್ಯತೆಗೆ ಕಾರಣವಾಗಿತ್ತು ಎಂದು ಹೇಳಬಹುದು.

ಮನೆಯಲ್ಲಿನ ಅಜ್ಜಿಗೆ ವೈದ್ಯರನ್ನು ಕಂಡರೆ ಹೆಚ್ಚು ಭಯವಿದ್ದಿತು. ಅವಳು ಅನುಭವದಿಂದ ಮತ್ತು ಶುಶ್ರೂಷೆಯಿಂದ ಅನೇಕ ಪರಿಹಾರಮಾರ್ಗವನ್ನು ಕಂಡುಕೊಂಡಿದ್ದಳಲ್ಲದೆ, ವೈದ್ಯಕೀಯ ಸಹಾಯ ದೊರೆಯದಿದ್ದಾಗ ತಾನೇ ಶುಶ್ರೂಷೆ ನಡೆಸಿ, ಸ್ಥಿತಿ ಉತ್ತಮಗೊಳಿಸುತ್ತಿದ್ದಳು. ಇದರಿಂದ ಅವಳಿಗೆ ತರುಣ ವೈದ್ಯರ ಮತ್ತು ಅನುಭವಿಕ ವೈದ್ಯರ ಪರಿಚಯವಾಗಿತ್ತು. ಹಳೆಯ ಅನುಭವಿಕ ವೈದ್ಯರೇ ಶ್ರೇಷ್ಠ. ಅವರನ್ನೇ ಬರಮಾಡಿಕೊಳ್ಳಬೇಕು ಎಂದು, ಅಜ್ಜಿ ತನ್ನ ಅಭಿಪ್ರಾಯವನ್ನು ಸೂಚಿಸುತ್ತಿದ್ದಳು. ಕೆನ್ನೆಗೂದಲಿನ ವೈದ್ಯನೆಂದರೆ ಅನುಭವಿಕ ವೈದ್ಯನೆಂದು ಆಗ ಭಾವಿಸುತ್ತಿದ್ದರು. ವೃತ್ತಿಗೆ ಹೊಸದಾಗಿ ಬಂದು, ಅನುಭವಿಕ ವೈದ್ಯರನ್ನು ಅನುಸರಿಸುತ್ತಿದ್ದ ತರುಣ ವೈದ್ಯರು, ತಮ್ಮ ಒರಟು ಕೆನ್ನೆಗೂದಲನ್ನು ನಯಮಾಡಿಕೊಳ್ಳುತ್ತಿದ್ದರು. ಇದರಿಂದ ಹಾಸ್ಯಾ ಸ್ಪದಕ್ಕೆ ಗುರಿಯಾಗಿ ಗೌರವ ಕಳೆದುಕೊಳ್ಳುತ್ತಿದ್ದರು. ಮನೆಯಲ್ಲಿ ಅಜ್ಜಿ ಆಕ್ರಮಣಸಾಧ್ಯಳೇ ಆಗಿದ್ದಳು. ವೈದ್ಯ ಹೆಚ್ಚು ಮೆದುಸೋಪು ಉಪಯೋಗಿಸಿ ದಲ್ಲಿ ಅಜ್ಜಿ ಅಷ್ಟು ಹೆಚ್ಚಾಗಿ ವೈದ್ಯನನ್ನು ನಂಬುತ್ತಿದ್ದಳು. ತರುಣ ವೈದ್ಯರು ಅಜ್ಜಿಯ ನಂಬಿಕೆಗೆ ಪಾತ್ರರಾಗುತ್ತಿದ್ದರು. ಆಗ ಅಜ್ಜಿ ತರುಣ ವೈದ್ಯರ ಸ್ನೇಹಿತೆ ಯಾಗುತ್ತಿದ್ದಳು.

ನಿಜವಾಗಿ ಅಜ್ಜಿಗೆ ಸಾಮರ್ಥ್ಯವಿತ್ತು. ಕಾಣಿಸಿಕೊಳ್ಳುತ್ತಿದ್ದ ಉದ್ಭೇದ ಕಾಹಿಲೆಗಳನ್ನು ಸುಲಭವಾಗಿ ಕಂಡುಕೊಳ್ಳುಲಾಗುತ್ತಿರಲಿಲ್ಲ. ಒಮ್ಮೆ ಉದ್ಭೇದ ವನ್ನು ನೋಡಿದೆ. ಅದು ಯಾವ ಮಾದರಿಯದೆಂದು ತಿಳಿಯಲಿಲ್ಲ. ಇಂತಹ ಸಂಬಂಧಕ್ಕೆ ಸೇರಿದುದು ಎಂದು ಸ್ಪಷ್ಟವಾಗಿ ಹೇಳುವಂತಿರಲಿಲ್ಲ. ಆಗ ಅಜ್ಜಿ ಯೊಬ್ಬಳು, ಒಂದೆರಡುಬಾರಿ ಉಸಿರೆಳೆದು ನೋಡಿ, "ಇದು ದಡಾರ" ಎಂದು ಹೇಳಿಬಿಟ್ಟಳು. ಅಜ್ಜಿಯ ಹೇಳಿಕೆಯನ್ನು ನಾನು ಒಪ್ಪಿಕೊಳ್ಳಲೇಬೇಕಾ ಯಿತು. ಉಸಿರೆಳೆದು ನೋಡಿ ದಡಾರ ಹೌದೋ ಅಲ್ಲವೋ ಎಂದು ತಿಳಿಯ ಬಹುದೇ ಎಂದುಕೊಂಡೆ. ಅಜ್ಜಿಯೂ ನನ್ನ ವೈದ್ಯಶಿಕ್ಷಣಕ್ಕೆ ಸಹಾಯಕಳಾ ದಳು ಎಂದು ತಿಳಿದೆ. ಹಳೆಯ ವೈದ್ಯರಿಬ್ಬರು ಎಂದಿನಂತೆ ಶಾಲಾ ಶಿಕ್ಷಣ ಪಡೆ ದಿರಲಿಲ್ಲ. ಅವರು ಅನುಭವದಿಂದಲೇ ಹೆಚ್ಚು ತಿಳಿದುಕೊಂಡಿದ್ದರು. ಒಂದು

ಸಾರಿ ಈ ಅನುಭವಸ್ಥರಿಂದ ನಾನು ಪಾಠ ಕಲಿತೆ. ಒಮ್ಮೆ ಕಾರಣ ತಿಳಿಯದ ಯಾವುದೋ ಒಂದು ಸಾಂಕ್ರಾಮಿಕ ರೋಗಕ್ಕೆ ತುತ್ತಾಗಿ ಪ್ರಾಯಕ್ಕೆ ಬಂದ ಅನೇಕರು ತೀರಿಕೊಂಡರು. ಈ ಉದ್ಭೇದ ದಡಾರದಂತೆ ಕಾಣಿಸಿಕೊಂಡಿತ್ತು. ಆದರೆ, ಕಲೆಗಳು ಬೇರೆ ರೀತಿಯಲ್ಲಿ ಕಾಣಿಸಿಕೊಂಡಿತ್ತು. ಸಿಡುಬಿನಂತೆ ಕಾಣುವ ಗಂಟು ಗಂತಿ ಬೇರೆ ಎದ್ದಿತ್ತು. ಇದು ದಡಾರವೇ ಎಂದು ಅನುಭವಿಕ ವೈದ್ಯ ಉದ್ಭೇದ ಲಕ್ಷಣವನ್ನು ತಿಳಿದು ನುಡಿದುಬಿಟ್ಟ. ಈ ದಡಾರದ ವಿಶೇಷ ಗುಣವನ್ನು ನಾನು ಕೇಳಿಯೇ ಇರಲಿಲ್ಲ. ರಕ್ತ ಪ್ರವಹಿಸುವ ಸಿಡಿಬು ಎಂದು ತಿಳಿದಿದ್ದೆ. ಇದು ದಡಾರಕ್ಕೆ ಹತ್ತಿರ ಹತ್ತಿರವಾದ ರೋಗಲಕ್ಷಣವಾದರೂ ರಕ್ತಕಲೆಗಳ ಗಂತಿ ಕಾಣಿಸಿಕೊಳ್ಳುವುದೆಂದು ನಾನು ತಿಳಿದಿರಲಿಲ್ಲ. ಏನೇ ಆಗಲಿ, ಯಾವಕಾರಣವೇ ಇರಲಿ ರಕ್ತಪ್ರವಹಿಸುವಿಕೆಯಿಂದ ರೋಗಿ ಸಾಯುತ್ತಾನೆ ನಿಜ ಎಂದಮೇಲೆ ನನ್ನ ತಾರುಣ್ಯದ ದೊಷ್ಟಸ್ತಿಕೆಗೆ ಧಕ್ಕೆಯೇ ಆಯಿತು.

ಹಳ್ಳಿಯಲ್ಲಿ ಪ್ರಾಯೋಗಿಕ ಪದ್ಧತಿ ಹೇಗೆ ನಡೆದಿತ್ತು ? ಸ್ಥಿರಪದ್ಧತಿ ಹೇಗೆ ನಡೆದಿತ್ತು ಎಂಬುದನ್ನು ತಿಳಿಯೋಣ.

ಕುದುರೆಯಾಳು ನಮ್ಮನ್ನು ಕರೆಯಲು ಬರುತ್ತಿದ್ದ. ಲೋಳೆ ಸುರಿ ಸುತ್ತಾ ದಣಿಪಿಸಿಂದ ಕೂಡಿದ ಕುದುರೆಯೇರಿ, ಕರೆ ಬಂದ ಕಡೆಗೆ ನಾನು ಓಡಿ ಬಿಡುತ್ತಿದ್ದೆ. ಇಂತಹ ಅತ್ಯಾವಸ್ಥೆಯ ಚಿತ್ರವನ್ನು ಚಲನಚಿತ್ರದವರು ತೆಗೆದೇ ಇಲ್ಲ. ನನ್ನನ್ನು ಕರೆಯಲು ಬಂದವನು, ಕರೆಗೆ ಕಾರಣವಾಗಲೀ ರೋಗಿಯ ಸ್ಥಿತಿಯನ್ನಾಗಲೀ ಹೇಳುತ್ತಿರಲಿಲ್ಲ. ಕರೆಬಂದಾಗ ಕುದುರೆಯೇರಿ ದೌಡಾ ಯಿಸುವುದೇ ಆಗ ನನ್ನ ಕೆಲಸವಾಗಿತ್ತು.

ಕರೆ ಬಂದ ಕಾರಣ ತಿಳಿಯುತ್ತಿರಲಿಲ್ಲವಾದ್ದರಿಂದ ವೈದ್ಯ ಯಾವ ಉಪ ಕರಣವನ್ನು ಅತ್ಯಾವಶ್ಯಕವಾಗಿ ತೆಗೆದುಕೊಂಡು ಹೋಗಬೇಕು, ರೋಗಿ ಒಬ್ಬನೋ ಅಥವಾ ಇಬ್ಬರೋ ಎಂದು ಸುಲಭವಾಗಿ ತಿಳಿಯದೆ ಪೇಚಾಟಕ್ಕೆ ಸಿಕ್ಕಿಬೀಳುತ್ತಿದ್ದ. ಹೇಗಾದರೂ ಇರಲಿ, ಕರೆಬಂದಾಗ ಮೊದಲು ಮಕ್ಕಳು, ತರುವಾಯ ಮಹಿಳೆಯರು ಆನಂತರ ವೃದ್ಧರನ್ನು ಬಳಿಕ ವಯಸ್ಸಾದವರನ್ನು ನೋಡಲು ಹೋಗುತ್ತಿದ್ದೆ. ಹಿಂದೆಯೇ ಪರಿಚಯವಾಗಿದ್ದ ಚಿತ್ತೋದ್ರೇಕ ರೋಗಿಗಳನ್ನು ನಾನು ಕಟ್ಟಕಡೆಗೆ ನೋಡುತ್ತಿದ್ದೆ. ಎಲ್ಲರಿಗೂ ಮೊದಲಾಗಿ

ಮಕ್ಕಳನ್ನು ಏಕೆ ನೋಡುತ್ತಿದ್ದನೆಂದರೆ, ಇದಕ್ಕಿದ್ದ ಹಾಗೆಯೇ ಅವುಗಳ ಜ್ವರ ತಾಪ ಮಿತಿಮೀರಿ ಹೋಗುತ್ತಿದ್ದ ಪ್ರಸಂಗಗಳೇ ಹೆಚ್ಚಾಗಿದ್ದವು. ಬೇಗನೆ ಅವುಗಳಿಗೆ ಚಿಕಿತ್ಸೆ ದೊರೆಯದಿದ್ದಲ್ಲಿ ಪ್ರಾಣಾಪಾಯಕ್ಕೆ ಅವು ಕಾರಣವಾಗು ತ್ತಿದ್ದುವು. ಈ ಭಯಕ್ಕಾಗಿ ಮೊದಲು ಮಕ್ಕಳನ್ನು ನೋಡಲು ಹೋಗುತ್ತಿದ್ದೆ. ಮಗು ಜ್ವರದಿಂದ ನರಳುತ್ತಿದ್ದಾಗ, ವೈದ್ಯನಿಗೆ ಹೇಳಿಕಳುಹಿಸಬೇಕು, ಬೇಗ ಬರುವಂತೆ ಹೇಳಿಕಳುಹಿಸಬೇಕು, ಎಂದು ಮಾತಾಪಿತೃಗಳು ಕಸಿವಿಸಿಪಡು ತ್ತಿದ್ದರು. ವೈದ್ಯ ಬರುವವರೆಗೆ ಏನುಮಾಡುವುದು, ಏನುಮಾಡೋಣ ಎಂದು, ದಿಕ್ಕು ತೋರದವರಂತೆ ವೈದ್ಯನ ಬರುವಿಕೆಯನ್ನೇ ಎದುರುನೋಡುತ್ತಿದ್ದರು.

ಅನುಭವಿಕ ವೈದ್ಯನಿಗಿಂತಲೂ ಹೆಚ್ಚಾಗಿ ತರುಣ ವೈದ್ಯನು ಗಡಿಬಿಡಿಗೆ ಕಾರಣ ನಾಗುತ್ತಿದ್ದ. ವೃತ್ತಿಹಿಡಿದು ಜೀವಿಸಲು ಚಿಕಿತ್ಸೆ ಮಾಡಬೇಕು, ಇದು ಅತ್ಯಾ ವಶ್ಯಕ ಎಂದವನು ತಿಳಿಯಬೇಕಾಗಿತ್ತು. ಯುವಕ ವೈದ್ಯ ತಿಳಿಗೇಡಿತನದಿಂದ ರೋಗಿಯನ್ನು ನೋಡುತ್ತಿದ್ದ. ಅನುಭವಿಕನಿಗೆ ಯುವಕ ವೈದ್ಯನ ತಿಳಿಗೇಡಿ ತನವೂ ರೋಗಿಯ ಆರ್ಥಿಕ ಸ್ಥಿತಿಯೂ ಅರ್ಥವಾಗುತ್ತಿತ್ತು. ರೋಗಿಯ ಬೇನೆ ಸಹಜವಾದುದಲ್ಲ, ಬೇನೆಗೆ ಅರ್ಥವಿಲ್ಲ ಎಂದು ಕಂಡುಕೊಂಡ ಅನುಭವಿಕ ವೈದ್ಯ, ಅತ್ಯವಸರದ ಬೇರೆ ಕೆಲಸಕ್ಕೆ ಹೋಗಿಬಿಡುತ್ತಿದ್ದ. ಹೀಗೇಕೆ ಹೋಗು ತ್ತಿದ್ದ ಎಂಬುದರ ಕಾರಣವನ್ನೀಗ ವಿವರಿಸುವೆ.— ಒಮ್ಮೆ ಹುಡುಗನೊಬ್ಬ ಕುದುರೆಯೇರಿ ದೂರದಿಂದ ಧಾವಿಸಿ ಕರೆಯಲು ಬಂದ. ಅವನು ಏರಿದ ಕುದುರೆ ದಣಿವಿನಿಂದ ನೊರೆ ಸುರಿಸುತ್ತಾ ನಿಂತಲ್ಲಿಯೇ ಬೀಳುವ ಸ್ಥಿತಿಯಲ್ಲಿತ್ತು. ಹುಡುಗ ಯಾವುದನ್ನೂ ಗಮನಿಸದೆ "ವೈದ್ಯರೆ ಬನ್ನಿ! ಬೇಗ ಬನ್ನಿ! ತಾಯಿ ಭಯಂಕರ ಕಾಹಿಲೆಗೆ ಈಡಾಗಿದ್ದಾಳೆ" ಎಂದ. ಭಯಂಕರ ಕಾಹಿಲೆಯೇ ಇರಬೇಕು ಎಂದು ವೈದ್ಯ, ಒಡನೆಯೇ ಕುದುರೆಯೇರಿ, ಏಳು ಮೈಲಿ ಪ್ರಯಾಣ ವನ್ನು ಒಂದೇ ಗಂಟೆಯಲ್ಲಿ ಮುಗಿಸಿದ. ಆತುರದಿಂದ ಮನೆಯೊಳಗೆ ನುಗ್ಗಿ ಹೋದಾಗ, ಆ ಮಹಿಳೆ ಒಲೆಯ ಮುಂದೆ ಕುಳಿತು ಸಾವಧಾನದಿಂದ ಮಾತ ನಾಡುತ್ತಿದ್ದುದನ್ನು ನೋಡಿದ. ಆಕೆಗೆ ಏನೂ ಆಗಿರಲಿಲ್ಲವೆಂದು ಕಂಡು "ಇಲ್ಲಿ, ಯಾರಿಗೆ ಮೈ ಸ್ವಸ್ಥವಿಲ್ಲ?" ಎಂದು ಕೇಳಿದ. ಆಗ ಆಕೆ "ನನಗೇ. ನಿಜವಾಗಿ ನನಗೆ ಏನೂ ಕಾಹಿಲೆಯಿಲ್ಲ; ಕ್ರಿಸ್‌ಮಸ್ ಹಬ್ಬ ಅದಂದಿನಿಂದ

ನಾನು ಆಯಾಸಗೊಳ್ಳುತ್ತಲೇ ಇದ್ದೇನೆ. ತಂದೆ ವೈದ್ಯರನ್ನು ನೋಡು, ಎಂದು ಹೇಳಿದಾಗ ನಿಮ್ಮನ್ನು ಕರೆತರುವಂತೆ ಹೇಳಿದೆ" ಎಂದಳು.

ಅನವಶ್ಯಕ ಅವಸರದ ಇಂತಹ ಪ್ರಸಂಗಗಳು ಬೇಕಾದಷ್ಟು ಬರುತ್ತಿದ್ದುವು. ರಾತ್ರಿ ಹನ್ನೊಂದು ಗಂಟೆಯಾದರೂ ವೈದ್ಯರಿಗೆ ಕರೆ ಬರುತ್ತಲೇಯಿತ್ತು. ಶತಮಾನಾಂತ್ಯದಲ್ಲಿ, ಟೆಲಿಫೋನ್ ಬಂದಮೇಲೆ ಮತ್ತಷ್ಟು ಹೆಚ್ಚು ಕರೆ ಬರಲಾರಂಭವಾಯಿತು. ಈ ಕರೆಗೆ, ಅವಸರದ ಕರೆಗೆ, ಕಾರಣ ಅಥವಾ ಹಿನ್ನೆಲೆಯನ್ನು ತಿಳಿಯೋಣ. ಮಗುವಿನ ದೇಹಸ್ಥಿತಿ ಚೆನ್ನಾಗಿಲ್ಲವೆಂದು ಕಂಡುಕೊಂಡ ತಾಯಿ, ಮೊದಲಾಗಿ ಉಪಾಯಗಾಣದೆ ಪತಿಯ ಆಗಮನಕ್ಕೆ ಕಾಯುತ್ತಿದ್ದಳು. ಹಸಿದು ಮನೆಗೆ ಬಂದ ಯಜಮಾನ, ಮಗುವಿನ ಕಾಹಿಲೆಯನ್ನು ಅಷ್ಟಾಗಿ ಹಚ್ಚಿಕೊಳ್ಳುತ್ತಿರಲಿಲ್ಲ. ಕೆಲವು ಗಂಟೆಗಳಾದಮೇಲೆ, ಮಗುವು ಜ್ವರತಾಪಕ್ಕೋ ಬೇನೆಗೋ ಅಳುತ್ತಾ ಕೂಡಿದಾಗ, ನಿದ್ದೆ ತಿಳಿದೆದ್ದ ಯಾಜಮಾನ ವೈದ್ಯನನ್ನು ಕರೆತರಲು ಹುಡುಗನನ್ನು ಅಟ್ಟುತ್ತಿದ್ದ. ಒಬ್ಬ ಗೃಹಸ್ಥ "ನಾನು ಯಾವಾಗಲೂ ವೈದ್ಯರನ್ನು ಬರಮಾಡಿಕೊಳ್ಳುವುದು ನಡುರಾತ್ರಿಯಲ್ಲಿಯೇ. ಈ ಮುಂಚೆ ಅವರಿಗೆ ನಾನು ಕರೆ ಕಳುಹಿಸುವುದೂ ಇಲ್ಲ. ಹಣ ಕೊಡಲು ಒಪ್ಪುವುದೂ ಇಲ್ಲ" ಎಂದು ಕೊಚ್ಚಿಕೊಳ್ಳುತ್ತಿದ್ದ. ಈ ಗೃಹಸ್ಥ ಎಂದೂ ವೈದ್ಯನಿಗೆ ಕಾಸು ಬಿಚ್ಚಿದವನಲ್ಲ. "ವೈದ್ಯನಿಗೆ ಹಣ ಕೊಡಲು ಒಪ್ಪುವುದೂ ಇಲ್ಲ" ಎಂಬ ಅವನ ಮಾತು ನಿಜವಾಗಿಯೂ ಅತ್ಯುಕ್ತಿಯಾಗಿತ್ತು.

ಕರೆ ಬಂದಾಗ ವೈದ್ಯ ಅಷ್ಟು ಚಕಿತನಾಗಬೇಕಿರಲಿಲ್ಲ. ಕರೆ ಎಲ್ಲಿಂದ ಬಂತು ? ಮನೆಯವರು ಯಾರು ? ಎಂದವನಿಗೆ ಚೆನ್ನಾಗಿ ನೆನಪಿಗೆ ಬರುತ್ತಿತ್ತು. "ಇರಲಿ ! " ಎಂದೆನ್ನುವಾಗಲೇ ಅವನು ಈ ಹೊತ್ತಿನ ಪ್ರಯಾಣ ಮತ್ತು ಸಂಪಾದನೆಯು ಶೂನ್ಯ, ನಿರರ್ಥಕ ಎಂದು ತಿಳಿಯುತ್ತಿದ್ದ. ವೈದ್ಯ ಬುದ್ಧಿ ವೆಚ್ಚಮಾಡಿ, ಹೋಗಲೇಬೇಕಾದೆಡೆಗೆ ಹೋಗಿಬಂದು, ಕರೆಬಂದ ಕಡೆಗೆ ಹೋದಾಗ, ತಾನು ಹೀಗೆ ತಡಮಾಡಿ ಬಂದುದು ಒಳ್ಳೆಯದೇ ಆಯಿತು ಎಂದು ತಿಳಿಯುತ್ತಿದ್ದ.

ನನ್ನ ದಿನಚರಿ ಪುಸ್ತಕದಲ್ಲಿ ರೋಗಿಯ ಹಾಸಿಗೆಬಳಿಗೆ ಬಂದು ಪರೀಕ್ಷಿಸಿ, ಏನೇನು ಚಿಕಿತ್ಸೆ ನಡೆಸಿದೆ ಎಂಬುದನ್ನು ಗುರಿತಿಸಿಟ್ಟಿದ್ದೇನೆ.

ವೈದ್ಯ ಮನೆಯೊಳಗೆ ಕಾಲಿಡುತ್ತಲೇ ವೃದ್ಧೆ (ಅಜ್ಜಿ) ಮತ್ತು ಚಿಕ್ಕ ತಾಯಿಯರನ್ನು ವಂದಿಸಿ, ಚಿಕ್ಕ ಹುಡುಗರನ್ನು ಮುದ್ದಿಸಿ ತಟ್ಟದ ಮೇಲೆ ರೋಗಿಯ ಬಳಿಗೆ ಬರುತ್ತಿದ್ದ. ರೋಗಿಯನ್ನು ದೀರ್ಘದೃಷ್ಟಿಯಿಂದ ನೋಡುತ್ತಾ ಮಧುರಹಾಸ್ಯದಿಂದ ಮಾತನಾಡಿಸುತ್ತಿದ್ದ. ನಾಡಿ ನೋಡಿ, ನಾಲಿಗೆ ಪರೀಕ್ಷಿಸಿ, ನೋವೆಲ್ಲಿದೆ ಎಂದು ಕೇಳಿ ತಿಳಿಯುತ್ತಿದ್ದ. ಇದೆಲ್ಲಾ ಮುಗಿದಮೇಲೆ, ತಾನು ಸೂಚಿಸುವುದನ್ನು ಸೂಚಿಸಿ ತನಗೆ ಮೆಚ್ಚುಗೆಯಾದ ಔಷಧವನ್ನು ಕೊಡುತ್ತಿದ್ದ.

ಪ್ರತಿಯೊಬ್ಬ ಅನುಭವಿಕ ವೈದ್ಯರೂ ಒಂದೇ ವೃತ್ತಿಪದ್ಧತಿಯನ್ನು ಅನುಸರಿಸುತ್ತಿದ್ದರು. ನನ್ನ ಪದ್ಧತಿಯು ನನ್ನದೇ ಆದ ಸ್ವತಂತ್ರರೀತಿಯದಾಗಿತ್ತು. ವಯಸ್ಸು ಮೀರಿದ ವೃದ್ಧೆಯರನ್ನು ಕಾಣಬೇಕಾದಾಗ ನಾನು ನೇರವಾಗಿ ನೋಡಲು ಹೊರಟುಬಿಡುತ್ತಿದ್ದೆ. ಇದು ನನ್ನ ವಿಷಯದಲ್ಲಿ ಅಜ್ಞಾನದಿಂದಲೇ ಹೊರತು ಧೈರ್ಯದಿಂದಲ್ಲ. ಇದರಿಂದ ನನಗೆ ಪ್ರತಿಫಲ ದೊರೆಯುತ್ತಿತ್ತು. ಸೂಕ್ತ ತೋರಿದಂತೆ ನಾನು ರೋಗಿಗಳನ್ನು ಪರೀಕ್ಷಿಸುತ್ತಿದ್ದೆ. ವಯಸ್ಕನಿಗೆ ಯೋಗ್ಯವಲ್ಲದ ನನ್ನ ಹುಡುಗಾಟಿಕೆಯ ಪರೀಕ್ಷೆಯಿಂದ ರೋಗಿಗಳು ತೃಪ್ತಿಗೊಳ್ಳುತ್ತಿದ್ದರು. "ತರುಣವೈದ್ಯರು ಆದ್ಯಂತ ಎಲ್ಲವನ್ನೂ ತಿಳಿದವರೆ. ಆದರೆ, ಸಭ್ಯತನದಿಂದ ವರ್ತಿಸುವುದಿಲ್ಲ" ಎಂದು ರೋಗಿಗಳು ನುಡಿಯುತ್ತಿದ್ದರು. ಅಂದು ದಿನ ನನ್ನ ಹಳೆಯ ರೋಗಿಯೊಬ್ಬಳ ಮಗನನ್ನು ಪರೀಕ್ಷಿಸಲು ಹೋದೆ. ಆ ಹುಡುಗನ ಬಟ್ಟೆಯನ್ನೆಲ್ಲಾ ಕಳಚಿ ಪೂರಾ ಪರೀಕ್ಷಿಸಿದೆ. ಈ ಸಂಸಾರದವರು ನನಗೆ ನಲವತ್ತು ವರ್ಷದ ಸ್ನೇಹಿತರು. ನನ್ನ ಪರೀಕ್ಷೆಯ ವಿಧಾನ ಅವರ ಮನಸ್ಸಿಗೆ ನಾಟಿತು. ಬರೀ ನಾಡಿ, ನಾಲಿಗೆ ಇವನ್ನು ನೋಡಿಯೇ ರೋಗಲಕ್ಷಣ ತಿಳಿಯುತ್ತಿದ್ದ ನನಗೆ, ಹುಡುಗ ಶ್ವಾಸಕೋಶಾವರಣದ ಉರಿಯೂತಕ್ಕೆ ಕಾರಣನಾಗಿದ್ದನೆಂದು ತಿಳಿದುಬಂತು.

ಹಳ್ಳಿಯ ವೈದ್ಯರಿಗೆ ಕರೆ ಬರುತ್ತಿದ್ದುದು ಸಾಧಾರಣ ಕಾಹಿಲೆಗಳಿಗೆ ಮಾತ್ರ. ರೋಗಿಗಳನ್ನು ನೋಡುತ್ತಲೇ ಇದು ಸ್ಪಷ್ಟವಾಗಿ ಕಾಣುತ್ತಿತ್ತು. ಅಜ್ಜಿ ಪಕ್ಕೆಗಳ ಬಡಿತ ಅಥವಾ ಗಸೆರೋಗಕ್ಕೆ ಕಾರಣಳಾಗಿರುತ್ತಿದ್ದಳು. ಮನೆಯ ಯಜಮಾನ ಕೈಕಾಲು ಸೆಳತಕ್ಕೆ ಕಾರಣನಾಗಿದ್ದಾನೆಂದು ಕಂಡುಬರುತ್ತಿತ್ತು. ಈ ಬೇನೆಗಳಿಗೆ ಸಾಧಾರಣ ಔಷಧಿಯೇ ಸಾಕಾಗುತ್ತಿತ್ತು. ರೋಗಿ ಹೇಗೆ

ಚೇತರಿಸಿಕೊಳ್ಳುತ್ತಿದ್ದಾನೆ ಎಂದು ನೋಡಲು ನಾನು ಎರಡು ದಿನಕೊಮ್ಮೆ ಹೋಗಿಬರುತ್ತಿದ್ದೆ.

ಗಾಯವಾಗಿದೆ, ಚರ್ಮಕ್ಕೆ ಹಾನಿ ಎಂದು ಕಂಡುಬಂದಾಗ, ತಡಮಾಡದೆ ಗಾಯವನ್ನು ಹೊಲಿದುಬಿಡುತ್ತಿದ್ದೆ. ರೋಗಿ ನೋವಿನಿಂದ ಚೀರದೆ ಎಲ್ಲವನ್ನೂ ಸಹಿಸಿಕೊಳ್ಳಬೇಕಾಗುತ್ತಿತ್ತು. ಮೂಳೆ ಮುರಿದಿದೆಯೆಂದು ಕಂಡುಬಂದಾಗ, ವೈದ್ಯ ಹಲಗೆ ತುಂಡೊಂದನ್ನು ಆರಿಸಿಕೊಳ್ಳಲು ಮನೆಯ ಬಯಲಕಡೆಗೆ ಓಡುತ್ತಿದ್ದ. ಅಲ್ಲಿ ಸಿಕ್ಕಿದ ಯಾವುದೋ ಹಲಿಗೆಯನ್ನು ಎಳೆದು ಸೀಳಿ, ಪಟ್ಟಿಮಾಡಿ, ಹಾಸಿಗೆಯ ಮೇಲುಬಟ್ಟೆಯನ್ನು ಹರಿದು ಸುತ್ತಿ, ರೋಗಿಯ ಮೂಳೆ ಮುರಿದ ಜಾಗಕ್ಕೆ ಬಿಗಿದುಬಿಡುತ್ತಿದ್ದ.

"X"ರೇ ಯಂತ್ರದ ಮೂಲಕ ಮೂಳೆ ಮುರಿದ ಭಾಗವನ್ನು ತಿಳಿಯುವ ಸೌಲಭ್ಯ ಆ ಕಾಲದಲ್ಲಿ ಇರಲಿಲ್ಲ. ವೈದ್ಯ, ಅನುಭವ–ಜ್ಞಾನದ ಮೂಲಕವಾಗಿಯೇ ಮೂಳೆಮುರುಕನ್ನು ಸರಿಪಡಿಸಿಬಿಡುತ್ತಿದ್ದ. ಕಾಲುಗಳಿಂದ ನಡೆಯುವುದಕ್ಕಾದರೆ ಸಾಕು; ಅಂದವಾದ ತೋರಿಕೆಗಾಗಿ ಅಲ್ಲ ಅದು ಎಂಬ ಮನೋಭಾವವನ್ನು ಜನ ತಳೆದಿದ್ದರು. ಇದರಿಂದ ಮೂಳೆಮುರುಕಿನಿಂದ ಕಾಲು ಸೊಟ್ಟವಾಗಿ ಕುಂಟುಕೊಂಡು ನಡೆಯುವುದನ್ನು ಯಾರೂ ಲಕ್ಷ್ಯಮಾಡುತ್ತಿರಲಿಲ್ಲ. ಕುಂಟಾದರೆ ಏನು ನಡೆಯುವುದಕ್ಕಾಗುವುದೋ ಇಲ್ಲವೋ ಇದರಲ್ಲಿ ಅಂದವೇನು ? ಎಂದು ತೃಪ್ತಿಪಟ್ಟುಕೊಳ್ಳುತ್ತಿದ್ದರು.

ಆ ಕಾಲದಲ್ಲಿ ಕರೆ ಬರುತ್ತಿದ್ದುದು ಕ್ಷುಲ್ಲಕ ಮತ್ತು ಕ್ಷಣಭಂಗುರವಾದ ಕಾಹಿಲೆಗಳಿಗೆ ಆಗಿದ್ದರೂ ಅನುಭವಿಕ ವೈದ್ಯರು ಉಗ್ರತರವಾದ ಮತ್ತು ಶ್ರಮಸಾಧ್ಯವಾದ ರೋಗಗಳ ಸಮಸ್ಯೆಗಳನ್ನು ಎದುರಿಸಿ ರೋಗಿಗಳನ್ನು ತೃಪ್ತಿಪಡಿಸಬೇಕಾಗಿತ್ತು. ಇಂತಹ ರೋಗಗಳಲ್ಲಿ ಮುಖ್ಯವಾಗಿದ್ದ ವಿಷಮಶೀತಜ್ವರದೊಂದಿಗೆ ವಿಶೇಷವಾಗಿ ಹೊಡೆದಾಡಬೇಕಾಗಿತ್ತು. ಈ ರೋಗದಿಂದ ನರಳುವ ರೋಗಿಯನ್ನು ಪಾರುಮಾಡಲು ವೈದ್ಯನು ತಾನು ಕಲಿತಿದ್ದ ವೈದ್ಯವಿದ್ಯೆಯ ನೈಪುಣ್ಯವನ್ನೆಲ್ಲಾ ಉಪಯೋಗಿಸಿ ಪ್ರಯತ್ನಿಸಬೇಕಾಗಿತ್ತು. ಬೇರೆ ಯಾವ ರೋಗಕ್ಕೂ ಸಮರ್ಥನಾದ ವೈದ್ಯ, ಆಗ ಹೆಚ್ಚು ಶ್ರಮ ತೆಗೆದುಕೊಳ್ಳಬೇಕಾಗಿರಲಿಲ್ಲ. ಗುಪ್ತಾಚರಣೆಯ ಜ್ವರ, ವ್ಯತ್ಯಾಸ ಹೊಂದುತ್ತಿರುವ ಜ್ವರಗಳ ಪರಿಹಾರಕ್ಕಾಗಿ ವೈದ್ಯ ತನ್ನ ಅನುಭವವನ್ನೆಲ್ಲಾ ತೋರಿ, ಸಾಮರ್ಥ್ಯದಿಂದ ಹೋರಾಡ

ಬೇಕಾಗಿತ್ತು. ಗುಪ್ತರೋಗವನ್ನು ಕಂಡುಕೊಳ್ಳಲು ನನಗೂ ನನ್ನ ಸಹ ವೈದ್ಯರಿಗೂ ದೊಡ್ಡ ಕಷ್ಟವೇ ಆಗಿತ್ತು. ರೋಗವನ್ನು ಗ್ರಹಿಸಿದ ಕೂಡಲೇ ಪರಿಹಾರಮಾರ್ಗ ಸೂಚಿಸಿದಲ್ಲಿ, ವೈದ್ಯನನ್ನುಮತ್ತು ಅವನ ಸಾಮರ್ಥ್ಯವನ್ನು ಜನರು ಹೊಗಳುತ್ತಿದ್ದರು. ರೋಗಲಕ್ಷಣ ತಿಳಿಯದೆ, ಚಿಕಿತ್ಸೆ ನಡೆಸಿದವನನ್ನು 'ರೋಗ ಹೆಚ್ಚಿಸಿಬಿಟ್ಟ' ಎಂದು ಅವನನ್ನು ದೂರುತ್ತಿದ್ದರು. ನನ್ನ ನೆಚ್ಚಿನ ದಾರಿ ಹಿಡಿದು ನಾನು ಅನುಸರಿಸುತ್ತಿದ್ದೆ. "ಪ್ರಾಮಾಣಿಕ" ವೈದ್ಯ ಎಂದು ಹೆಸರು ಗಳಿಸಿದೆ.

ವಿಷಮಶೀತಜ್ವರದ ಕೆಲವು ಸ್ಥಿತಿಗಳಲ್ಲಿ ವೈದ್ಯನ ನೆರವು ಹೆಚ್ಚಾಗಿ ಬೇಕಾಗುತ್ತಿತ್ತು. ರೋಗಿಯ ಜ್ವರ ಮಾರ್ಪಟ್ಟು, ಸನ್ನಿಪಾತ ಸ್ಥಿತಿಗಿಳಿದಾಗ (ತುಂಬಾ ಜ್ವರವೇಗವಿದ್ದಾಗ) ಸ್ಪಂಜಿನಿಂದ ತಣ್ಣೀರಿನ ಒತ್ತಡಕೊಡುವ ಕೆಲಸ ವೈದ್ಯನಿಂದಾಗಬೇಕಾಗಿತ್ತು. ಈ ರೋಗದ ಸ್ಥಿತಿಯಲ್ಲಿ ಎಲ್ಲಾ ವೈದ್ಯರು ಅನುಸರಿಸುತ್ತಿದ್ದುದು ಹೀಗೆಯೇ. ಆಗ ನುರಿತ ಉಪಚಾರಿಕೆಯರಿರಲಿಲ್ಲ. (ನರ್ಸಸ್) ವೈದ್ಯರೇ ರೋಗಿಗಳನ್ನು ಉಪಚರಿಸಬೇಕಾಗಿತ್ತು. ೧೦೩° ಜ್ವರಪ್ರಮಾಣವನ್ನಿಳಿಸಲು ವೈದ್ಯ ಸುಮಾರು ಒಂದು ಅಥವಾ ಎರಡು ಗಂಟೆಯಕಾಲ ಸ್ಪಂಜಿನಿಂದ ತಣ್ಣೀರು ಒತ್ತಡವನ್ನು ನಡೆಸಬೇಕಾಗಿತ್ತು. ರೋಗಿ ಚಡಪಡಿಸುವುದನ್ನು ಬಿಟ್ಟು ಸಮಾಧಾನದಿಂದ ಗಂಟೆಗಟ್ಟಲೆ ನಿದ್ದೆಮಾಡುವಂತಾದ ಮೇಲೆಯೇ ವೈದ್ಯನಿಗೆ ತೃಪ್ತಿಯಾಗುತ್ತಿದ್ದುದು. ಆಗಲೇ ಅವನಿಗೆ ಬಿಡುಗಡೆಯಾಗುತ್ತಿದ್ದುದು.

ವ್ಯಾಧಿ ಒಂದೊಂದುಸಾರಿ ವಿಲಕ್ಷಣ ಹಾದಿಯಲ್ಲಿ ತಿರುಗುತ್ತಿತ್ತು, ನನ್ನ ಒಬ್ಬ ರೋಗಿಯ ಜ್ವರಪ್ರಮಾಣ ಇಪ್ಪತ್ತು ವಾರಗಳವರೆಗೂ ಕಡಿಮೆಯಾಗಲಿಲ್ಲ. ಕೆಲವುಸಾರಿ ಜ್ವರಪ್ರಮಾಣ ಸಾಧಾರಣ ರೀತಿಯಲ್ಲಿ ಏರಿಳಿಯುತ್ತಾ ಬರುತ್ತಿದ್ದಿತಲ್ಲದೆ, ಒಂದೊಂದುಸಾರಿ ಬಿಡದೆ ಏರಿಬಿಡುತ್ತಿತ್ತು. ಇಬ್ಬರು ವೃದ್ಧಾಂಗ ರೈತರಿಗೆ ಒಂದೇಸಾರಿ ಜ್ವರಬಂತು. ಕ್ರಮೇಣ ಒಂದೇ ಮಾದರಿಯೆನಿಸಿ ಕಳವಳಕ್ಕೆ ಕಾರಣವಾಯಿತು. ಹತ್ತು ದಿನಗಳನಂತರ ಒಬ್ಬನಿಗೆ ವಿಪರೀತ ತಲೆನೋವು ಕಾಣಿಸಿಕೊಂಡಿತು. ಅವನು ತನ್ನ ಬೆನ್ನು ಹಿಂದೆಳೆಯುತ್ತಿದೆ, ನೋವು ಪೂರಾ ಬಾಧಿಸುತ್ತಿದೆಯೆಂದು ಹೇಳಿಕೊಂಡ. ಅವನೊಂದಿಗೆ ನಾನು ಇಡೀ ರಾತ್ರಿ ಉಳಿದುಕೊಂಡೆ. ನನಗೆ ಅವನ ನೋವನ್ನು ಪರಿಹರಿಸಲು ಆಗಲೇ ಇಲ್ಲ. ಅಂದಿನ ರಾತ್ರಿಯೇ ಅವನು ತೀರಿಕೊಂಡ. ಬೆನ್ನುಮೂಳೆಗೆ ವೆಜ್ಞ

ಗಾಯವಾಗುವ ಸಂಗತಿ ತಿಳಿಯದ ವಿಚಾರವಾಗಿತ್ತು. ಇನ್ನೊಬ್ಬನ ಸ್ಥಿತಿ ಏನಾಗಿದೆಯೋ ಎಂದು ನೋಡಲು ಹೋದೆ. ಅವನ ಜ್ವರವಿಳಿದಿತ್ತು. ತಡೆ ಯಿಲ್ಲದೆ ಅವನು ಬೆಳಗಿನ ಊಟವನ್ನು ಮಾಡುತ್ತಿದ್ದ.

ಕೊನೆಗೆ ವಿಷಮಶೀತಜ್ವರದಿಂದ ನರಳುತ್ತಿದ್ದ ರೋಗಿಗಳನ್ನು ಸುಧಾ ರಿಸಲು ಅಲೆದಲೆದು ಬೇಸಿಗೆಯ ತಾಪದಿಂದ ನಾನೇ ಒಂದುಸಲ ಈ ಜ್ವರಕ್ಕೆ ಗುರಿಯಾದೆ.

ಬೇಸಿಗೆಯಲ್ಲಿ ಸಾಮಾನ್ಯವಾಗಿ ಅಜೀರ್ಣ ರೋಗಗಳು ಕಾಣಿಸಿಕೊಳ್ಳು ವುದು ಹೆಚ್ಚು. ಈ ರೋಗ ಚಿಕ್ಕಮಕ್ಕಳಲ್ಲಿ ಮತ್ತಷ್ಟು ಹೆಚ್ಚು. ವಿಷಮಶೀತ ಜ್ವರದಿಂದ ನರಳುತ್ತಿದ್ದ ರೋಗಿಗಳಿಗೆ ನಾನು ಸ್ಪಂಜಿನಿಂದ ತಣ್ಣೀರಿನ ಒತ್ತಡವನ್ನು ಕೊಡುತ್ತಿರಲಿಲ್ಲ. ಬದಲಾಗಿ ಎನೀಮಾ ಕೊಡುತ್ತಿದ್ದೆ. ಇದರಿಂದ ಅನೇಕ ಮಕ್ಕಳ ರಕ್ಷಣೆಯಾಗುತ್ತಿತ್ತು. ಆಗಿನಕಾಲದಲ್ಲಿ ಮಂಜಿನಗಡ್ಡೆ ಸಿಕ್ಕುತ್ತಿರಲಿಲ್ಲ. ಆರೋಗ್ಯರಕ್ಷಣೆಗೆ ಸೂಕ್ತದಾರಿಯಿರಲಿಲ್ಲ.:'ಕ್ಷ' ಕಿರಣದ ಜಲ್ಲಡಿಯಿಂದ ದೋಷ ವನ್ನು ತಿಳಿಯುವ ಬಗೆಯನ್ನು ಜನ ಕಂಡಿರಲಿಲ್ಲ. ಹುಟ್ಟಿದ ಮಕ್ಕಳು ಎರಡ ನೆಯ ಬೇಸಿಗೆ ಕಳೆಯುವುದರೊಳಗಾಗಿ ಸಾಯುತ್ತಿದ್ದುವು.

ಮಗು ಸನ್ನಿಪಾತ ರೋಗಕ್ಕೆ ಕಾರಣವಾಗಿದೆಯೆಂದು ಕರೆಬಂದ ಕೂಡಲೇ ಎಲ್ಲವನ್ನೂ ನಿಲ್ಲಿಸಿಬಿಟ್ಟು ಮಗುವಿನ ರಕ್ಷಣೆಗಾಗಿ ಓಡಿಬಿಡುತ್ತಿದ್ದೆ. ಜ್ವರ ೧೦೫° ಪ್ರಮಾಣವೇರಿ ಮಗು ಸನ್ನಿಪಾತಕ್ಕೆ ಕಾರಣವಾಗಿರುತ್ತಿತ್ತು. ಅವಸರದಿಂದ ಹರಳೆಣ್ಣೆಯನ್ನು ಮಗುವಿಗೆ ಕುಡಿಸಿ, ಎರಡುಸಾರಿ ಮಗುವಿಗೆ ಎನೀಮಾ ಕೊಡುತ್ತಿದ್ದೆ. ಸನ್ನಿಪಾತವಿಳಿಯಿತೆಂದು ಕಂಡಮೇಲೆ ಸೆಲಾಲ್ ಮತ್ತು ಬಿಸ್‌ಮತ್ ಔಷಧಿ ಕೊಡುತ್ತಿದ್ದೆ.

ನಲವತ್ತುವರ್ಷ ಕಳೆದರೂ ವೈದ್ಯಶಾಸ್ತ್ರವು ಮಕ್ಕಳಿಗೆ ಆಹಾರವನ್ನು ಕೊಡುವ ಬಗೆಯಲ್ಲಿ ಹೆಚ್ಚು ಮುಂದುವರಿದಿಲ್ಲವೆಂದು ಧೈರ್ಯದಿಂದ ಹೇಳಬಲ್ಲೆ. ಮಕ್ಕಳ ಬೇನೆಯ ಬಗ್ಗೆ ಹೆಚ್ಚು ಪರಿಶ್ರಮ ಪಡೆದ ತರುಣ ವೈದ್ಯ, ಆಧುನಿಕ ವೈದ್ಯಜ್ಞಾನವನ್ನು ಹೆಚ್ಚು ಪಡೆದಿರುವನು. ಈ ವೈದ್ಯನಿಗೆ ನಮ್ಮ ಹಿಂದಿನ ಕಷ್ಟ ಖಂಡಿತವಾಗಿಯೂ ತಿಳಿದಿರುವುದಿಲ್ಲ. ಆಹಾರ ನೀಡುವಿಕೆಯಲ್ಲಿ ಈಗ ಶಾಸ್ತ್ರೀಯ ಪದ್ಧತಿಯನ್ನೀಗ ಅನುಸರಿಸುತ್ತಿದ್ದಾರೆ. ಆದುದರಿಂದ ಹಿಂದಿನಂತೆ ಸನ್ನಿಪಾತಕ್ಕೀಗ ಕಾರಣವಿಲ್ಲ.

ನಾನು ಚಿತ್ರಕಲಾವಿದನಾಗಿದ್ದಲ್ಲಿ ಸನ್ನಿಪಾತಕ್ಕೆ ಕಾರಣವಾಗಿದ್ದ ಮಗುವಿನ ಚಿತ್ರ, ತೊಟ್ಟಿಲಬಳಿ ಕಳವಳದಿಂದ ಕೂಡುತ್ತಿದ್ದ ಅದರ ತಾಯಿಯ ಮುಖಚಿತ್ರ, ಮತ್ತು ಸುತ್ತಲಿರುವ ಇತರರ ಮನೋಭಾವಗಳನ್ನು ಚಿತ್ರಿಸುತ್ತಿದ್ದೆ. ಇವರೆಲ್ಲಾ ಧೈರ್ಯವಿಲ್ಲದವರೆಂದು ನಾನು ಹೇಳುವುದಿಲ್ಲ.

ಜೀವವನ್ನು ಉಳಿಸಲು ನಾನು ಎಷ್ಟೋ ಭಯಂಕರವಾದ ಶಸ್ತ್ರಕ್ರಿಯೆ ನಡೆಸಿದ್ದೇನೆ. ಆದರೆ, ಸನ್ನಿಪಾತಕ್ಕೆ ಒಳಗಾದ ಮಕ್ಕಳನ್ನು ಉಳಿಸಲು ಪಾಡುಪಟ್ಟುದನ್ನು ನಾನು ನೆನೆಸಿಕೊಂಡರೆ ಈಗಲೂ ನನಗೆ ಆನಂದವೆನಿಸುವುದು. ಬಿಗಿ ಹಿಡಿದುಕೊಂಡ ಕಾಲುಗಳನ್ನು ಸಡಲಿಸಬಹುದು. ಎತ್ತಲಾಗದ ತಲೆಯನ್ನು ದಿಂಬಿನ ಮೇಲಿಂದ ಎತ್ತುವಂತೆ ಮಾಡಬಹುದು. ತಾಯಿಯ ನಗೆಯ ತುಟಿಮಾತು, ಪ್ರಕಾಶವಾಗಿ ನೋಡುವ ಕಣ್ಣಿನ ನೋಟ ಇವು ಜೀವನಾನುಭವದಲ್ಲಿ ಹೆಚ್ಚಿನವು.

ನಾನು ಏನು ಹೇಳುತ್ತಿದ್ದೇನೆ ಎಂಬುದನ್ನು ಬಲ್ಲೆ. ನನ್ನ ಪುಟ್ಟ ಮಗಳು ಒಮ್ಮೆ ಹನ್ನೆರಡು ಗಂಟೆಗಳಕಾಲ ಸನ್ನಿಪಾತಕ್ಕೆ ಒಳಗಾಗಿದ್ದಳು. ಅವಳನ್ನೇ ಕಾಯುತ್ತಾ ನಾನು ಹೆದರಿಕೆಯಿಂದ, ಶಕ್ತಿಗುಂದಿದವನಂತೆ ಕುಳಿತ್ತಿದ್ದೆ. ಸ್ವಲ್ಪಹೊತ್ತು ನಿದ್ರಿಸಿ ಎಚ್ಚೆತ್ತವಳು, "ನನ್ನ ಬೊಂಬೆ ಎಲ್ಲಿ ?" ಎಂದು ಮಧುರಧ್ವನಿಯಿಂದ ಮಾತನಾಡಿದಳು. ಅಂದಿನಿಂದ ನಾನು ಯಾವ ಕಾಹಿಲೆಯ ಮಗುವನ್ನು ನೋಡುವುದಕ್ಕೆ ಹೋಗುತ್ತಿರಲಿಲ್ಲ. ಮೂವತ್ತು ವರ್ಷ ಕಳೆದುಹೋಯಿತು. ಈಗಲೂ ಅದನ್ನು ನೆನೆಸಿಕೊಂಡರೆ ನನ್ನ ಮೂಳೆಯ ಮಜ್ಜೆ ಹೆಪ್ಪುಗಟ್ಟುವುದು.

ಅನೇಕ ತರಹೆ ಕಾಹಿಲೆಗಳು ಒಂದಕ್ಕೊಂದು ಸಂಬಂಧವಿಲ್ಲದವುಗಳೇ ಆಗಿರುತ್ತವೆ. ನನ್ನ ಮೊದಲಿನ ಉದರ ರೋಗಿಗಳಲ್ಲಿ ಒಬ್ಬ ಗಂಡಹೆಂಡಿರಿಬ್ಬರೂ ಒಂದೇ ತರಹೆಯ ಬೇನೆಗೆ ಗುರಿಯಾಗಿದ್ದರು. ಈ ಇಬ್ಬರಿಗೂ ಒಂದೇ ಬಗೆಯ ಚಿಕಿತ್ಸೆಯನ್ನು ನಡೆಸಿ ನನ್ನ ಸಂಪಾದನೆ ಕಡಿಮೆಮಾಡಿಕೊಳ್ಳಲು ನಾನು ಸಿದ್ಧವಾಗಿರಲಿಲ್ಲ. ಆದುದರಿಂದ ಒಬ್ಬರಿಗೆ ಪ್ರತ್ಯಾಮ್ಲವನ್ನೂ ಇನ್ನೊಬ್ಬರಿಗೆ ಜಲಜನಕಾಮ್ಲವನ್ನೂ ಕೊಟ್ಟೆ. ಇದರಿಂದ ಇಬ್ಬರ ಉದರಬೇನೆಯೂ ಉಪಶಮನವಾಯಿತು. ರೋಗಿಗಳಿಗೆ ನಾನು ಕೊಟ್ಟ ಅನುಪಾನ ನೋಡಿ ಆಶ್ಚರ್ಯವಾಯಿತು. ಬೇರೆಬೇರೆ ಔಷಧಕೊಟ್ಟು

ಪರಿಹರಿಸಿದೆನೆಂದು ಅವರು ನನ್ನನ್ನು ಹೊಗಳಿದರು. ನಲವತ್ತು ವರ್ಷಗಳ ನಂತರ ಈ ದಂಪತಿಗಳ ಪೈಕಿ ಉಳಿದಿದ್ದವರೊಬ್ಬರನ್ನು ಭೇಟಿಮಾಡಿದೆ. "ಹಿಂದೆ ನಾನು ಕೊಟ್ಟ ಔಷಧವನ್ನು ಮರೆಯದೆ ನೆನಪಿನಲ್ಲಿಟ್ಟುಕೊಂಡಿರುವೆ" ಎಂದವರು ಹೇಳಿದರು. ಯೋಚಿಸಿ ಕಷ್ಟಪಟ್ಟು ಮಾಡಿದ ಕೆಲಸ ಸದಾ ಒಬ್ಬರ ನೆನಪಿನಲ್ಲಿರುತ್ತದೆಯೆನ್ನುವುದಕ್ಕೆ ಇದೇ ನಿದರ್ಶನವೆಂದು ಹೇಳುವೆ. ಯಾವಾಗಲೂ ಮುಂದಾಲೋಚಿಸಿ ಯೋಜನೆಯ ಗುರಿಯನ್ನು ಹಿಡಿಯುವುದರಿಂದ ಫಲಿತಾಂಶ ಉತ್ತಮವಾಗುವುದು ಎಂದು ತಿಳಿಯುತ್ತೇನೆ.

ರೋಗಿಯ ಬೇನೆ ಕಡಿಮೆಯಾಯಿತು, ಇನ್ನು ಜೀವಕ್ಕೆ ಭಯವಿಲ್ಲ ಎಂದು ಕಂಡುಬಂದಲ್ಲಿ ಚಿಂತೆ ಕಡಿಮೆಯಾಗುವುದು. ಒಮ್ಮೆ ನಾನು ಮಂಜಿನ ಮಳೆಗೆ ಸಿಕ್ಕಿದೆ. ಒಂದು ಬಗೆಯ ಅಪೂರ್ವ ಹುಣ್ಣಿನ ನೋವಿನಿಂದ ಬಾಧೆ ಪಡುತ್ತಿದ್ದ ರೋಗಿಯೊಬ್ಬನನ್ನು ನೋಡಲು ನಾನು ಹೋಗಬೇಕಾಯಿತು. ಹುಣ್ಣನ್ನು ಕತ್ತರಿಸಿ ಅವನ ಬಾಧೆಯನ್ನು ಪರಿಹರಿಸಿದೆ. ಇದರಿಂದ ಅವನಿಗೆ ಎಷ್ಟೋ ಮೇಲೆನಿಸಿತು. ಅವನ ಜೀವವನ್ನು ನಾನು ಉಳಿಸಿದೆನೆಂದು ಪೂರಾ ಹೊಗಳಿದ. ರೋಗಿ ಮತ್ತು ಅವನ ಮುಖಲಕ್ಷಣ ಕಂಡು ವೈದ್ಯ ಗಂಭೀರನಾಗುವುದು ಸಹಜ. ಇದಕ್ಕಾಗಿ ಅವನು ಕ್ಷಮಾಪಣೆ ಕೇಳಬೇಕಾದುದಿಲ್ಲ. ರೋಗ ರಹಸ್ಯ ತಿಳಿಯಲು ವೈದ್ಯ ಗಂಭೀರಭಾವ ತಳೆವುದುಂಟು. ವೈದ್ಯನನ್ನು ಕಾರಣವಿಲ್ಲದೆ ಹೊಗಳುವುದೂ ಉಂಟು. ಚಿಕಿತ್ಸೆಯಲ್ಲಿ ನಿಷ್ಫಲವಾದಾಗ ದೂರುವುದೂ ಉಂಟು. ನಿರ್ವಾಹವಿಲ್ಲ. ಇದು ಸಹಜ ಮತ್ತು ಕಾಲಕ್ಕೆ ಸಂಬಂಧಪಟ್ಟ ವಿಷಯ.

ಪ್ರಸವ ಸಮಯ ಸಂದರ್ಭದಲ್ಲಿ, ಬೇರೆ ಬೇರೆ ಹಾದಿ ಹಿಡಿದು ಕಾಲೆಳೆಯುತ್ತಾ ನಾನು ಹೋಗಬೇಕಾಗಿತ್ತು. ನಲವತ್ತು ವರ್ಷದ ದಪ್ಪನೆಯ ಗಿಡ್ಡ ಹೆಂಗಸು ಪ್ರಸವವೇದನೆಯಿಂದ ನರಳುತ್ತಿದ್ದಾಗ ನಾನು ವೈದ್ಯಕೀಯ ಸಲಹೆ ಕೊಡಲು ಹೋದೆ. ಆಕೆಯನ್ನು ನೋಡುತ್ತಲೇ ಪ್ರಸವ ದುಸ್ಸಹವಾದುದು ಎಂದು ಕಂಡುಬಂತು. ಆಕೆಯ ಸಹಾಯಕ್ಕೆ ಆಕೆಯ ಪತಿಯ ವಿನಾ ಬೇರೆ ಯಾರೂ ಅಲ್ಲಿರಲಿಲ್ಲ. ಬಿರುಗಾಳಿ ಬಡಿತ ಬೇರೆ ಆಗ ಹೆಚ್ಚಾಗಿತ್ತು. ಸಲಹೆ ಕೊಡಲು ನಾನು ಬಂದಾಗ, ಆಕೆಯ ಪತಿ ಎಲ್ಲಿಗೊ ತಿಳಿಯದ ಜಾಗಕ್ಕೆ ಹೊರಟುಹೋದ. ಮನೆಯಲ್ಲಿ ಒಂದು ಸಣ್ಣ ಒಲೆ ಮತ್ತು ಬುಟ್ಟಿಯ ತುಂಬಾ

ಜೋಳದ ದಿಂಡಿತ್ತು. ಹಲವು ಘಂಟೆಗಳು ಸಾವಕಾಶವಾಡಿದ ಬಳಿಕ ಸುಲಭ ಪ್ರಸವವಾಗಲು ಕೆಲವು ಉಪಕರಣಗಳ ಅಗತ್ಯವಿದೆಯೆಂದು ನನಗೆ ಕಂಡು ಬಂತು. ಆದರೆ ನೋವನ್ನು ಕಡಿಮೆಮಾಡುವಂತಹ ಯಾವುದೊಂದು ಸಾವು ಗ್ರಿಯೂ ನನ್ನಲ್ಲಿರಲಿಲ್ಲ. ಹೆಂಗಸು ಬಹಳ ನೋವನ್ನು ಅನುಭವಿಸುತ್ತಿದ್ದಳು. ಗಂಡನ ಬುದ್ಧಿವಂತಿಕೆಗಿಂತಲೂ ಈಕೆಯ ಬುದ್ಧಿವಂತಿಕೆ ಒಂದು ಕೈ ಮೇಲಿ ನದು. ಆಕೆಯನ್ನು ಮಲಗಿಸಿ, ಕಾಲುಗಳನ್ನು ಬಲವಾಗಿ ನನ್ನ ಮುಂಡಿಯಿಂ ದೂರಿ ಇಕ್ಕುಳವನ್ನು ಅವಶ್ಯಕವಾಗಿ ಉಪಯೋಗಿಸಬೇಕಾಗಿ ಕಂಡುಬಂತು. ಹೀಗೆ ಮಾಡಿದುದರಿಂದ ಪ್ರಸವ ಅಡ್ಡಿಯಿಲ್ಲದೆ ಆಯಿತು. ತಂದೆತಾಯಿಗಳಿಗೆ ಹಿರಿಯಾಸ್ತಿಯಾದ ಗಂಡು ಆಗ ಜನಿಸಿತು.

ನೆರವಿಲ್ಲದವರಿಗೆ ಸಹಾಯ ನೀಡುವುದು ತಪ್ಪಲ್ಲ. ಕೆಲವುವೇಳೆ ಗರ್ಭಿ ಣಿಗೆ ತಾಯಿ, ಅತ್ತೆಯರ ಸಹಾಯವಿದ್ದರೂ ಪ್ರಯೋಜನವಾಗುತ್ತಿರಲಿಲ್ಲ. ಕೆಡುಕೇ ಹೆಚ್ಚಾಗುತ್ತಿತ್ತು. ನನಗೂ ನನ್ನ ಸಹಾಯಕನಿಗೂ ಈ ಬಗೆಯ ಅನುಭವವಿದೆ. ಒಮ್ಮೆ ಪ್ರಸವಕಾಲದಲ್ಲಿ ಶಸ್ತ್ರಕ್ರಿಯೆ ನಡೆಸಬೇಕಾಯಿತು. 'ಶಸ್ತ್ರಕ್ರಿಯೆ ಮಾಡಬೇಕಲ್ಲಾ' ಎಂದು ಚಿಂತಿಸುವ ಪ್ರಮೇಯವಿರಲಿಲ್ಲ. ಗರ್ಭಿ ಣಿಯ ಹತ್ತಿರ ಆಕೆಯ ತಾಯಿ ಇರುತ್ತಿದ್ದಳು. ತಾಯಿಯನ್ನು ಈ ಸಂದರ್ಭ ದಲ್ಲಿ ಹೊರಗಟ್ಟುವುದು ಹೇಗೆ ? ಶಸ್ತ್ರಕ್ರಿಯೆ ನಡೆಸುವಾಗ ಆಕೆ ಹತ್ತಿರವಿರಬಾರ ದಲ್ಲ, ಎಂದು ಉಪಾಯುಗಾಣದೆ ಯೋಚಿಸುತ್ತಿದ್ದೆ. ನನ್ನ ಚತುರ ಸಹಾಯಕ ನಿಗೂ ಕೂಡಲೆ ಉಪಾಯ ಹೊಳೆಯಲಿಲ್ಲ. ಕ್ಷಣಹೊತ್ತಿನ ಮೇಲೆ ಅವನು ಒಡ ನೆಯೇ ಆಕೆಯನ್ನು ಉದ್ದೇಶಿಸಿ "ನೀವು ಹೃದಯಬೇನೆಗೆ ಒಳಗಾಗಿದ್ದೀರಾ ? " ಎಂದು ಕೇಳಿದನು. ಗರ್ಭಿಣಿಯ ತಾಯಿ ಹೌದೆಂದು ತಲೆಯಾಡಿಸಿದಳು. ಇದೇ ಉಪಾಯವನ್ನು ಮುಂದುವರಿಸಿ, ಅವಳ ಹೃದಯವನ್ನು ಪರೀಕ್ಷಿಸಿ, "ನೀವು ಈ ಸಮಯದಲ್ಲಿ ದೂರವಿರುವುದೇ ಮೇಲು. ಗರ್ಭಿಣಿಗೆ ವೇದನ ಪ್ರತಿಬಂಧ ಸಾಧಕ ವನ್ನು ಕೊಡಬೇಕು" ಎಂದು ಹೇಳಿ ಆಕೆಯನ್ನು ದೂರ ಕಳುಹಿಸಿದ. ಆಕೆ ದೂರ ಹೊರಟುಹೋದಮೇಲೆ ಶಸ್ತ್ರಕ್ರಿಯೆ ನಡೆಸಿದುದಾಯಿತು. ಅನಂತರ ತಾಯಿ ಯನ್ನು ಬರಮಾಡಿಕೊಳ್ಳಲಾಯಿತು. ನನ್ನ ಈ ಸಹೋದ್ಯೋಗಿ, ಅನೇಕ ವೇಳೆ ಬೇಸರದಿಂದ ನನ್ನ ತಲೆ ಕೆಟ್ಟುಹೋದಾಗ ಸ್ಥಿತಿಯನ್ನು ಹದಕ್ಕೆ ತಂದು ಚತುರತೆಯಿಂದ ಸಮಯ ಸುಧಾರಿಸಿದುದುಂಟು. ಅಂತಹ ಸಂದರ್ಭವೊಂದು

ನನ್ನ ನೆನಪಿಗೆ ಬರುತ್ತದೆ. ವಿವರಿಸುವೆ.— ಒಂದುಸಾರಿ ಉಗ್ರ ಕಾಹಿಲೆಯಲ್ಲಿದ್ದ ಮನುಷ್ಯನನ್ನು ನಾನು ಪರೀಕ್ಷಿಸಿದೆ. ಪಕ್ಕದ ಮನೆಯ ವೃದ್ಧ, ಮದುವೆ ಯಾಗದ ಒಂಟಿಗ, ಅಡುಗೆಯ ಮನೆಯಲ್ಲಿ ಪಕ್ವಮಾಡಿದ ಯಾವುದೊಂದು ಆಹಾರ ಪದಾರ್ಥವೂ ತನಗೆ ತಪ್ಪದೆ ದೊರೆಯಬೇಕು ಎಂಬ ಉದ್ದೇಶದಿಂದ ಅಡುಗೆಯ ಮನೆಯಲ್ಲಿಯೇ ಸ್ಥಳವೂರಿದ. ಈ ಕಂಟಕನನ್ನು ಹೊರಗೆ ಹೋಗು ವಂತೆ ಹೇಳಬಾರದೆ ಎಂದು ಒಬ್ಬರಿಗೆ ಹೇಳಿದೆ. ಆಗ ನನ್ನ ಸಹಚರ ಹೊರ ದೂಡಲು ಉಪಾಯವಿದೆಯೆಂದು ನುಡಿದ. ಆಗ ಅಡುಗೆಮನೆಗೆ ನುಗ್ಗಿ, ಕಂಟಕ ಹೊರಗೆ ಬಾರದಿರುವಂತೆ, ಹತ್ತಿರ ಬಾರದಿರುವಂತೆ ಮಾತನಾಡಿಸಲು ಪ್ರಾರಂಭಿಸಿದ. ಮಾತನಾಡಿಸುತ್ತ, "ರೋಗಿಗೆ ಅಂಟುವ್ಯಾಧಿ ತಗಲಿದೆ ನಿನಗೆ ತಿಳಿಯದೆ ?" ಎಂದ. ಈ ಗಾಬರಿಯ ಮಾತನ್ನು ಕೇಳಿ ಚಕಿತನಾದ ವೃದ್ಧ ಬೇಗನೆ ಅಡುಗೆಮನೆ ಬಿಟ್ಟು, ಹೊರಬಾಗಿಲು ಕಳಚಿ ಬೀಳುವಂತೆ, ಒದ್ದು, ತಳ್ಳಿ ಓಡುತ್ತಾ ಹೊರಟುಹೋದ. ಓಡಿಹೋದವನು ಅಲ್ಲಿ ತಾನು ಕೆಡವಿಕೊಂಡ ಟೋಪಿಯನ್ನೂ ತೆಗೆದುಕೊಳ್ಳದೆ ಪರಾರಿಯಾದ.

ಅತ್ಯಾಶ್ಚರ್ಯಕ್ಕೆ ಕಾರಣವಾದ ಮತ್ತೊಂದು ನಿದರ್ಶನವನ್ನು ವಿವರಿ ಸುವೆ.—

ಒಳಯುದ್ಧದಲ್ಲಿ ಕೈವಾಡ ತೋರಿದ ವೃದ್ಧನೊಬ್ಬನ ಎದೆಯಲ್ಲಿ ದ್ರವ ತುಂಬಿಕೊಂಡಿತ್ತು. ಈ ಕಾರಣದಿಂದ ಅವನಿಗೆ ಉಸಿರೆಳೆಯುವುದು ಕಷ್ಟವಾ ಗಿತ್ತು. ಮನೆಯ ವೈದ್ಯ, ಈ ವೃದ್ಧನನ್ನು ಪರೀಕ್ಷಿಸಿ ವ್ಯಾಧಿಯ ಸುಳಿವನ್ನು ಕಂಡುಕೊಂಡ. ವೃದ್ಧನ ಎದೆಯ ಇರಿತವನ್ನು ಕಡಿಮೆಮಾಡಲು ಉಪಕರಣ ಸಿದ್ಧಮಾಡಿಟ್ಟುಕೊಳ್ಳುವುದರೊಳಗೆ ವೃದ್ಧ, "ನಾನು ಮೊದಲು ನೋಡಿದ್ದ ವೃದ್ಧ ಏಬ್ (Abe Lincoln) ರವರ ನಂತರ ನೋಡಿದ ಅತಿ ಹೆಚ್ಚು ಸರಳನೆಂದರೆ ನೀವೆ" ಎಂದ. ಆಗ ವೃದ್ಧನ ಹೆಂಡತಿ, "ಈಗ ನೀವು ಮಾತನಾಡಬೇಡಿ" ಎಂದು ಗಂಡನನ್ನು ಉದ್ದೇಶಿಸಿ ಅಡುಗೆಮನೆ ಯಿಂದಲೇ ಕೂಗಿಕೊಂಡಳು. ಆ ವೃದ್ಧನು ಹೆಂಡತಿಯ ಸೂಚನೆಯನ್ನು ಲಕ್ಷ್ಯಮಾಡಲಿಲ್ಲ. ಮಾತನಾಡುತ್ತಲೇ ಆತನ ಹೆಂಡತಿ ಆಗ ಪ್ರತಿಯಾಗಿ "ನೀನು ತಲೆಮರೆಸಿಕೊಂಡಿದ್ದಾಗ ನಿನ್ನನ್ನು ರಕ್ಷಿಸಿದ ಆ ವೃದ್ಧ ಏಬ್. ಈ ತರುಣ ವೈದ್ಯ ಆ ವಂಶದವನೇ ಆಗಿರಬಹುದು" ಎಂದು ಹೇಳಿದಳು. ಒಳ

ಯುದ್ಧ ಸಮಯದಲ್ಲಿ ಈ ವೃದ್ಧ ಇನ್ನೂ ಯುವಕನಾಗಿದ್ದ. ಆಗವನಿಗೆ ಪಾಳಿಯದ ಉಸ್ತುವಾರಿ ನೋಡುವ ಕೆಲಸವಿತ್ತು. ಕೆಲಸಮಾಡುವ ಕಾಲದಲ್ಲಿ ಅಜಾಗರೂಕತೆಯಿಂದ ನಿದ್ದೆಮಾಡಿದನೆಂದು ಅವನು ಮರಣದಂಡನೆಗೆ ಗುರಿಯಾಗಿದ್ದ.— ಅಧ್ಯಕ್ಷ ಏಬ್ ಇವನಿಗೆ ಕ್ಷಮೆದೋರಿದ್ದರು. ವೃದ್ಧೆಯ ಮಾತು ನಿಜವಾಯಿತು. ವೃದ್ಧ ಚೇತರಿಸಿಕೊಂಡ. ಈ ಬಗೆಯ ವೈಪರೀತ್ಯದ ಅನುಭವಗಳು ನನಗೆ ಸಾಧಾರಣವಾಗಿದ್ದವು.

ಆಗ ವೈದ್ಯಕೀಯ ಪ್ರಯೋಗಪದ್ಧತಿ ಹೇಗಿತ್ತೆಂದರೆ, ವೈದ್ಯನ ಜಾಯಮಾನ, ವೈಶಿಷ್ಟ್ಯತೆ, ಸಂದರ್ಭಕ್ಕನುಸಾರವಾಗಿ ಮಾರ್ಪಾಡಾಗುತ್ತಿತ್ತು, ಎಂದು ಹೇಳಬಹುದು.

ವೈದ್ಯನ ಮನೋಭಾವಕ್ಕೂ ಮಾನವ ಬಯಕೆಗೂ ವ್ಯತ್ಯಾಸವಿದ್ದೇ ಇರುತ್ತಿತ್ತು. ನಾನು ಅನೇಕ ಧರ್ಮಬೋಧಕರೊಂದಿಗೆ ಈ ಬಗೆಯನ್ನು ಕುರಿತು ವೈಯುಕ್ತಿಕ ಅಭಿಪ್ರಾಯವನ್ನು ಹೇಳಿ, ಅವರ ಪ್ರತಿ ಹೇಳಿಕೆಯನ್ನು ಕೇಳಿ ವಿಮರ್ಶಿಸಿಕೊಂಡಿದ್ದೇನೆ. ನೀತಿನಿಯಮಗಳೆಲ್ಲಾ ಮುರಿದುಬೀಳುತ್ತಿದ್ದ ಆ ಸಮಯದಲ್ಲಿ ಧರ್ಮೋಪದೇಶಕ ಜನರಿಗೆ ಹಿಡಿಸುವಂತಹ ಮಾತನ್ನು ಮುಂದಿಡಲು ನಾನು ಸೂಚಿಸಬೇಕಾಗಿತ್ತು. ನಾನವರಿಗೆ—“ಸಾಧುಗಳು, ಪಾಪಿಗಳು ಸಾವನ್ನಪ್ಪುವುದು ಖಂಡಿತ. ಸಾವನ್ನಪ್ಪುವಾಗ ಹಿಂದಿನದು ಏನೇಯಿರಲಿ ಅವರಿಗೆ ಯಾವ ತರಹೆಯ ನೋವೂ ಇರುವುದಿಲ್ಲ” ಎಂದು ಹೇಳಿದೆ. ಒಬ್ಬ ಮೃತ್ಯುವನ್ನು ಸಮೀಪಿಸುತ್ತಾ ಭಯಂಕರವಾಗಿ ಕಾಣುತ್ತಿದ್ದ. ಕಾರಣ? ಅವನು ಹಳೆಯ ಡಂಭದ ಧಾರ್ಮಿಕನಾಗಿದ್ದ. ಪ್ರಾರ್ಥನಾಲಯದ ಸ್ತಂಭ ಕಣ್ಣಿಗೆ ಬೀಳುತ್ತಲೆ, ಈ ಡಾಂಭಿಕ ಪವಿತ್ರಗ್ರಂಥ ಸ್ಮರಣೆಮಾಡುವ ನೆಪದಿಂದ ತನ್ನ ಕಿಸೆಯ ಹೊತ್ತಗೆಯನ್ನು ಮುಟ್ಟಿ ನೋಡಿಕೊಳ್ಳುತ್ತಿದ್ದ.

ರೋಗಿಯ ಅವಸಾನಕಾಲದಲ್ಲಿ ನಾವು ಹತ್ತಿರವಿರುತ್ತಿದ್ದೆವು. ಆಗ ರೋಗಿ, ನೋವನ್ನು ಅನುಭವಿಸುತ್ತಿಲ್ಲವೆಂದು ತಿಳಿಯುತ್ತಿದ್ದೆವು. ಆಗಿನ ಸ್ಥಿತಿಯಲ್ಲಿ ಸಾಯುವವನ ಚಿಂತೆಗಿಂತಲೂ ಜೀವಿಸುತ್ತಿದ್ದವರ ಕ್ಷೇಮಚಿಂತನೆ ಹೆಚ್ಚಾಗಿತ್ತು. ಅತಿ ದುಃಖ ಸಮಯದಲ್ಲಿ ಅಳುವಿಗೆ ಆಸ್ಪದವಿರುವುದಿಲ್ಲವೆಂದು ಹಳೆಯ ನಾಣ್ಣುಡಿಯಿದೆ. ನಾನು ಅನೇಕಸಾರಿ ಸಾಯುವ ಸ್ಥಿತಿಯಲ್ಲಿದ್ದ ಮಗುವಿನ ತೊಟ್ಟಿಲಬಳಿ ಕುಳಿತಿರುತ್ತಿದ್ದೆ. ಕೊನೆಯ ಹೊಳಪು ಮಿನುಗಿ ಮಾಯವಾಗು

ತ್ತಿದ್ದುದನ್ನು ನೋಡುತ್ತಿದ್ದೆ. ಕೊನೆಯುಸಿರು ಎಳೆಯಿತು, ಜೀವ ಕಳೆಯಿತು ಎಂದು ಮಗುವಿನ ತಾಯಿ ಕಂಡುಕೊಳ್ಳುತ್ತಿದ್ದಳು. ಆಗ ಅಳುವಿಗೆ ಅಸ್ಪದವೇ ಇರುತ್ತಿರಲಿಲ್ಲ.

ಅತ್ಯಂತ ದುಃಖಪ್ರಸಂಗದ ಅನುಭವವೊಂದನ್ನು ಹೇಳುತ್ತೇನೆ. ನ್ಯೂಮೋನಿಯಾ ಜ್ವರಪೀಡಿತರಾದ ವೃದ್ಧದಂಪತಿಗಳೊಬ್ಬರು ಮರಣಾವಸ್ಥೆಯಲ್ಲಿದ್ದರು. ವೃದ್ಧೆ ಗತಪ್ರಾಣಳಾಗುತ್ತಿದ್ದುದನ್ನು ನೋಡುತ್ತಿದ್ದೆ. ಆನಂತರ ವೃದ್ಧನ ಬಳಿಗೆ ಹೋದೆ. ದುಃಖ ಸೂಚನೆಯನ್ನು ನಾನು ತೋರಲಿಲ್ಲ. ಆ ವೃದ್ಧ, "ವೃದ್ಧೆ ತೀರಿಕೊಂಡಳೆ?" ಎಂದು ಕೇಳಿದ. ನಾನು ಪ್ರತಿಯಾಗಿ ಏನೂ ಹೇಳಲಿಲ್ಲ. ಆಗ ವೃದ್ಧ ಕೈಜೋಡಿಸಿಕೊಂಡು ಸ್ವಲ್ಪಹೊತ್ತಿನೊಳಗಾಗಿಯೇ ಕೊನೆಯುಸಿರು ಬಿಟ್ಟ. ಇದಕ್ಕೆ ಅರ್ಥವೇನೆಂದು ಕೇಳಬೇಡಿ. ಮರಣಾವಸ್ಥೆಯ ಸಮಯದಲ್ಲಿ ನಾನು ನೋಡಿದ ಈ ದೃಶ್ಯ ಎಲ್ಲಕ್ಕಿಂತಲೂ ಮೇಲಾಗಿದ್ದಿತು. ಮರಣಾವಸ್ಥೆಯ ಸಮಯಕ್ಕೆ ಸರಿಯಾಗಿ ಹಾಜರಿರಲು ನಾನು ಅನೇಕವೇಳೆ ಪ್ರಯಾಣ ಕೈಕೊಳ್ಳಬೇಕಾಗಿತ್ತು. ಜೀವನದಲ್ಲಿ ಎಷ್ಟೇ ಹೆಚ್ಚಿನ ಧಾರಾಳತ್ವವಿರಬಹುದು. ಸಾವಿನಲ್ಲಿ ಇದಕ್ಕೂ ಮೀರಿದ ಧಾರಾಳತ್ವವಿರುವುದೆಂದು ನಾನು ನಂಬಿದ್ದೇನೆ.

ಮೊದಲಿನಂತೆ ಈಗ ರೋಗಿಯ ಅಂತಿಮಾವಸ್ಥೆಯ ಕಾಲದಲ್ಲಿ ವೈದ್ಯರು ಅವನ ಬಳಿಯಿರುವುದಿಲ್ಲ. ರೋಗಿಯ ಬಳಿಯಿದ್ದು ಅವರೇನು ಮಾಡಿಯಾರು? ತಾಂತ್ರಿಕ ದೃಷ್ಟಿಯಿಂದ ಅವರು ಏನನ್ನು ಮಾಡಲು ಸಾಧ್ಯ? ಮಾನವತೆಯ ದೃಷ್ಟಿಯಿಂದ ಅವರು ಹೆಚ್ಚು ಮಾಡಿಯಾರು. ಹೀಗೇಕೆ ನುಡಿಯುತ್ತೇನೆ ಎಂದು ನನ್ನನ್ನು ಕೇಳಬಹುದು. ನಾನಾಡುತ್ತಿರುವುದು ಏನೆಂಬುದನ್ನು ಎಂದು ತಿಳಿದೇ ಮಾತನಾಡುತ್ತಿದ್ದೇನೆ. ನನ್ನ ಜೀವನದಲ್ಲಿ ಅತ್ಯಂತ ದುಃಖದ ಸಮಯವೆಂದರೆ, ನನ್ನ ಮಗಳು ತೀರಿಕೊಂಡಾಗಲೇ. ಮರಣಶಯ್ಯೆಯಲ್ಲಿ ನನ್ನ ಮಗಳಿದ್ದಾಗ, ನನ್ನ ಅತ್ಯಂತ ನಂಬುಗೆಯ ದಾದಿ ಒಂದು ಪಕ್ಕದಲ್ಲಿ ಕುಳಿತು ನೋಡುತ್ತಿದ್ದಳು. ಇನ್ನೊಂದು ಪಾರ್ಶ್ವದಲ್ಲಿ ವೈದ್ಯ ಕ್ಯಾಂಬೆಲ್ ತಾಳ್ಮೆಯಿಂದ ಮಗಳನ್ನು ಬದುಕಿಸಲು ಸಾಧ್ಯವಿದ್ದ ಎಲ್ಲಾ ಪ್ರಯತ್ನವನ್ನು ನಡೆಸುತ್ತಿದ್ದರು. ಪ್ರಯತ್ನವೆಲ್ಲಾ ನಿಷ್ಫಲವೆಂದು ನನಗೆ ಚೆನ್ನಾಗಿ ತಿಳಿದಿತ್ತು. ನಿಷ್ಪ್ರಯೋಜನವೆಂದು ಕಂಡುಬಂದರೂ ವೈದ್ಯ ಆದಷ್ಟೂ ಸಾಮರ್ಥ್ಯದಿಂದ ಸೆಣಸಬೇಕಲ್ಲ? ಒಂದುಕಡೆ ದಾದಿ, ಇನ್ನೊಂದು

ಕಡೆ ಕ್ಯಾಂಬೆಲರು ಕುಳಿತಿದ್ದರು. ತಾಂತ್ರಿಕ ದೃಷ್ಟಿಯಿಂದ ಚೇತರಿಸಿಗೊಳ್ಳು ವಂತೆ ಮಾಡಲು ಆಗದಿದ್ದರೂ ಮಾನವತೆಯ ದೃಷ್ಟಿಯಿಂದ ರೋಗಿಯನ್ನು ನೋಡುತ್ತಾ ಕಾಯುತ್ತಾ ಕುಳಿತಿದ್ದರು. ಇಂತಹ ಸಮಯ ಸಂದರ್ಭವನ್ನು ನಾನು ನನ್ನ ವೃತ್ತಿಜೀವನದಲ್ಲಿ ಎಲ್ಲಿಯೂ ಕಂಡಿರಲಿಲ್ಲ. ಈ ದೃಷ್ಟಿಗೆ, ತಾಳ್ಮೆಗೆ ಹೆಚ್ಚು ಮೌಲ್ಯವಿದೆಯೆಂದು ನಾನು ಹೇಳುವೆ. ಈ ಸಹಾಯ ಎಲ್ಲಾ ಬಗೆಯ ಸಹಾಯಕ್ಕಿಂತಲೂ ಹೆಚ್ಚಾದುದು. ವೈದ್ಯನ ಇಡೀ ವೃತ್ತಿಯ ಧ್ಯೇಯ ಏನು ? ಮಾನವ ಸಂಕಟವನ್ನು ಪರಿಹಾರ ಮಾಡುವುದೇ ಅವನ ಮುಖ್ಯ ಧ್ಯೇಯ ವಲ್ಲವೆ ? ಈ ಧ್ಯೇಯವೇ ಅವನದಾಗಿರಬೇಕು.

೬

ವೈದ್ಯಶಾಲೆಗೆ ಬರುತ್ತಿದ್ದ ರೋಗಿಗಳು ಸಾಧಾರಣವಾಗಿ ದಿನನಿತ್ಯ ಹೇಳು ವಂತಾ ರೋಗಪರಿಚಯವನ್ನು ಹೇಳಿಕೊಳ್ಳುತ್ತಿದ್ದರು. ಈ ಪರಿಚಯವೆಲಾ ಸಾಧಾರಣವಾಗಿತ್ತಲ್ಲದೆ ಬೇಗನೆ ಗುಣವಾಗುವಂತಹ ಬೇನೆಗಳಾಗಿದ್ದವು. ಈ ಸೂಕ್ಷ್ಮ ತಿಳಿಯಲು ಕಷ್ಟವಾಗಿರಲಿಲ್ಲ. ಬೇಗನೆ ತಿಳಿಯಲಾಗುತ್ತಿದ್ದ ಈ ತರಹೆಯ ರೋಗಿಗಳಿಗೆ ಸಮಾಧಾನ ಹೇಳಿ ಕಳುಹಿಸುವುದೇ ನಮನ್ಯೆಯಾಗಿತ್ತು. ಕೆಲವರು ತಮ್ಮ ಮನೆತನಕ್ಕೆ ಅಂಟಬಂದ ಗುಪ್ತ ಕಾಹಿಲೆಗಳನ್ನು ವೈದ್ಯರಿಗೆ ಸ್ಪಷ್ಟಪಡಿಸುತ್ತಿರಲಿಲ್ಲ. ಕೆಲವು ವಾಸಕ್ಕೆ ಸಂಬಂಧಪಟ್ಟ ಮತ್ತು ಇತರ ಹವ್ಯಾ ಸಕ್ಕೆ ಸಂಬಂಧಿಸಿದ ಕಾಹಿಲೆಗಳನ್ನು ಗೊತ್ತುಹಚ್ಚುವುದು ಕಷ್ಟವಾಗಿತ್ತು. ಸದಾ ಬೇನೆಯ ಬಗೆ ಹೇಳಿಕೊಳ್ಳುತ್ತಿದ್ದರೇ ವಿನಾ ಎಂದಿನಿಂದ ತಾವು ರೋಗ ಅಡಗಿ ಸಿಟ್ಟುಕೊಂಡಿದ್ದರೆಂದು ತಿಳಿಯಪಡಿಸುತ್ತಿರಲಿಲ್ಲ. ಬೇನೆ ಬೆನ್ನಂಟಿದ್ದಲ್ಲಿ ಈ ವಿಚಾರವೆತ್ತಿ ನೆಂಟರೊಂದಿಗೆ ಮತ್ತು ಸ್ನೇಹಿತರೊಂದಿಗೆ ಹೇಳಿಕೊಂಡು ತೃಪ್ತ ರಾಗುತ್ತಿದ್ದರು. ತಾತನ ವಾತಗ್ರಸ್ತ ಕಾಹಿಲೆಯನ್ನು ತಿಳಿದು, ನುಳಿ ಯಾವಾಗ ಬಂದಿತು ಎಂದು ಅಕ್ಕಪಕ್ಕದವರಿಗೆ ಭವಿಷ್ಯ ಹೇಳಬಹುದಲ್ಲಾ ಎಂದು ನೆನೆಯು ತ್ತಿದ್ದರು.

ವೈದ್ಯಶಾಲೆಯನ್ನಿಟ್ಟು ವೃತ್ತಿ ನಡೆಸುತ್ತಿದ್ದವನ ಹಿಂದಿನ ಜೀವನ, ಕಳೆದ ಐವತ್ತು ವರ್ಷಗಳಿಂದೀಚೆಗೆ ಬದಲಾವಣೆ ಕಂಡಿವೆ. ಬದಲಾವಣೆ ಕಂಡಿದೆ ಯೆಂದರೆ ಸುಧಾರಣೆ ಕಂಡಿದೆಯೆಂದಲ್ಲ. ಈ ಮೊದಲು ಹಳ್ಳಿಯ ವೈದ್ಯಶಾಲೆ

ಹೇಗಿತ್ತು ಎಂಬುದನ್ನು ತಿಳಿಯಬೇಕಲ್ಲವೆ? ವೈದ್ಯಶಾಲೆಯಲ್ಲಿ ಎರಡು ಕೋಣೆ ಗಳು ಇರುತ್ತಿದ್ದುವು. ಒಂದು ಕೋಣೆಯಲ್ಲಿ ರೋಗಿ ವೈದ್ಯನಿಗಾಗಿ ಕಾಯುತ್ತಿದ್ದ, ಇನ್ನೊಂದು ಕೋಣೆಯಲ್ಲಿ ವೈದ್ಯ ರೋಗಿಯು ಪ್ರವೇಶಿಸುವುದನ್ನೇ ನೋಡು ತ್ತಿದ್ದ. ನನ್ನ ಮೊದಲ ವರ್ಷದ ಉದ್ಯೋಗದಿಂದ ಇನ್ನೂರು ಹದಿನಾರು ಡಾಲರು ಸಂಪಾದನೆಯಾಯಿತು. ಆದರೆ ರೋಗಿಗಳು ಬಂದು ಉಳಿದುಕೊಳ್ಳುತ್ತಿದ್ದ ಕೋಣೆಯಲ್ಲಿ ಗಲಿಬಿಲಿಯಾದುದನ್ನು ನಾನು ಕಾಣಲಿಲ್ಲ. ನಾನಿರುತ್ತಿದ್ದ ಕೋಣೆ ಮಧುರ ವಾತಾವರಣದ ಕೋಣೆಯಾಗಿಯೇ ಇತ್ತು. ರೋಗಿಗಳನ್ನು ಇಲ್ಲಿಯೇ ಪರೀಕ್ಷಿಸುತ್ತಿದ್ದೆ. ಕಾಲನ್ನು ನೀಡಿಕೊಳ್ಳಲು ಒಂದು ಮೂಲೆ ಬಿಟ್ಟುಕೊಂಡು ಸಣ್ಣ ಪೆಟ್ಟಿಗೆಯನ್ನಿಟ್ಟುಕೊಂಡಿದ್ದೆ. ವೈದ್ಯನು ತನ್ನ ಪಾದರಕ್ಷೆಗಳಿಗೆ ಏರುಮೊಳೆಯನ್ನು ತೊಟ್ಟುಕೊಳ್ಳುತ್ತಿರಲಿಲ್ಲ. ಆದುದರಿಂದ ಅವನು ಕಾಲನ್ನು ಊರಿಕೊಳ್ಳಲು ಸಣ್ಣ ಪೆಟ್ಟಿಗೆ ಇಟ್ಟುಕೊಳ್ಳುತ್ತಿದ್ದ. ಮೇಜಿನ ಬಳಿ ಒಂದು ಕುರ್ಚಿ ಬೇರೆ ಇರುತ್ತಿತ್ತು. ರೋಗಿಗಳಿಗಾಗಿ ಬೇರೆ ಕುರ್ಚಿಗಳಿರು ತ್ತಿದ್ದವು. ರೋಗ ಪರೀಕ್ಷಾರ್ಥಕ್ಕಾಗಿ ದೊಡ್ಡ ಮೇಜೊಂದಿತ್ತು. ಈ ಮೇಜು ತಯಾರಿಕೆಗೆ ಹತ್ತು ಡಾಲರ್ ಬೆಲೆಯಾಗಿದ್ದರೂ ವೈದ್ಯ ಎಪ್ಪತ್ತಾರು ಡಾಲರ್ ತೆರಬೇಕಾಗಿತ್ತು. ನನ್ನ ವೈದ್ಯಶಾಲೆಯ ಉಪಯೋಗಕ್ಕಾಗಿ ಮನೆ ಮರೆಗೆಲಸ ದವನಿಗೆ ಹೇಳಿ ನಾಲ್ಕು ಡಾಲರ್ ಮತ್ತು ಎಂಬತ್ತು ಸೆಂಟ್ ವೆಚ್ಚಮಾಡಿ ಒಂದು ಮೇಜು ಮಾಡಿಸಿಕೊಂಡೆ. ಉಪಕರಣಗಳನ್ನಿಡುವ ಮೇಜು, ಅಡುಗೆ ಮನೆಯಲ್ಲಿರುವ ಮೇಜಿನಂತಿರುತ್ತಿತ್ತು. ಆಗ ಇದು ಕೇವಲ ಒಂದು ಡಾಲ ರಿಗೆ ದೊರೆಯುತ್ತಿತ್ತು.

ಹಿಂದೆ ವೈದ್ಯರಿಗೆ ಬೇರೆ ಸಹಾಯಕರಿರುತ್ತಿರಲಿಲ್ಲ. ಸ್ತ್ರೀಯರನ್ನು ಪ್ರತ್ಯೇಕವಾಗಿ ಪರೀಕ್ಷಿಸುವ ಪದ್ಧತಿ ಆಗಿನ್ನೂ ಬಂದಿರಲಿಲ್ಲ. ಸ್ತ್ರೀ ರೋಗಿ ಗಳನ್ನು ಪರೀಕ್ಷಿಸಿ, ನೋವು ಬೇನೆಗಳೇನೆಂದು ತಿಳಿದು ವೈದ್ಯ, ಅನುಪಾನ ಕೊಡ ಬೇಕಾಗಿತ್ತು. ಆಗ ಸ್ತ್ರೀಯರು ಮೇಲು ಉಡುಗೆಯ ಒಳಗೆ ಆರು ಬಗೆಯ ತೆಳು ಉಡುಪುಗಳನ್ನು ಧರಿಸುತ್ತಿದ್ದರು. ಇದು ನಂಬತಕ್ಕ ಮಾತಲ್ಲವಾದರೂ ಸತ್ಯ ವಾದುದೆಂದು ನಾನು ಹೇಳುತ್ತೇನೆ. ಅನೇಕಸಾರಿ ಒಳ ಉಡುಪನ್ನು ಎಣಿಸಿ ತಿಳಿದಿದ್ದೇನೆ. ಹೆಚ್ಚು ಒಳ ಉಡುಪು ಧರಿಸುತ್ತಿದ್ದವರು ದಪ್ಪಗೆ ಕಾಣುತ್ತಿದ್ದ ರಲ್ಲದೆ, ಹೆಚ್ಚಾಗಿ ತೊಟ್ಟಿದ್ದ ಅವರ ಉಡುಪನ್ನು ಕಳಚಿ ಪರೀಕ್ಷಿಸಬೇಕಾಗಿತ್ತು.

ಹೀಗೆ ಹೆಚ್ಚು ಬಟ್ಟೆ ಸರಿಸಿ ಸೂಕ್ಷ್ಮವಾಗಿ ಪರೀಕ್ಷೆ ಮಾಡುವುದು, ಹುಲ್ಲಿನ ಮೆದೆಯಲ್ಲಿ ಕೆಡವಿಕೊಂಡ ಸೂಜಿಯನ್ನು ಹುಡುಕಿ ತೆಗೆದಂತಾಗುತ್ತಿತ್ತು. ಈ ಕಷ್ಟ ತಪ್ಪಲೆಂದು ಅವನು ನಾಡಿ ಮತ್ತು ನಾಲಗೆಯನ್ನು ನೋಡಿ ರೋಗ ಪರೀಕ್ಷೆ ಮುಗಿಸಿಬಿಡುತ್ತಿದ್ದ. ಮುನ್ನೂರು ಚಿಲ್ಲರೆ ಪೌಂಡು ತೂಕವಿರುವ ಸ್ತ್ರೀಯರ ನೋವು, ಬಾಧೆಯನ್ನು ಪರೀಕ್ಷಿಸಿ ತಿಳಿಯುವುದು ಅಷ್ಟು ಸುಲಭವಾಗಿರಲಿಲ್ಲ. ವೈದ್ಯನೊಂದಿಗೆ ರೋಗಿಗಳನ್ನು ಪರೀಕ್ಷಿಸಲು ದಾದಿಯರಿರಲಿಲ್ಲವಾದ್ದರಿಂದ, ವೈದ್ಯನೇ ಶರೀರದಲ್ಲಿ ಕಾಣಿಸುತ್ತಿದ್ದ ಎಡವು ಕುಸಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ತಿಳಿದು, ಬೇನೆಯನ್ನು ಸ್ಪಷ್ಟವಾಗಿ ಕಂಡುಕೊಳ್ಳಬೇಕಾಗಿತ್ತು. ಆಗಿನ ಸ್ತ್ರೀಯರು ಆರು ಒಳ ಪಾವಡೆ ಧರಿಸುತ್ತಿದ್ದರೂ ಅದು ಅತಿ ಅಸಾಧ್ಯವಾದುದೆಂದು ಭಾವಿಸಿರಲಿಲ್ಲ. ಪ್ರಚೋದನೆಗೂ ಅದು ಕಾರಣವಾಗುತ್ತಿರಲಿಲ್ಲ.

ಆಧುನಿಕ ಗ್ರಾಮಾಂತರ ವೈದ್ಯಶಾಲೆ ಈಗಿನ ನಗರದ ವೈದ್ಯಶಾಲೆಯಂತೆ ಮಾರ್ಪಾಡು ಹೊಂದಿದೆ. ಆಧುನಿಕ ವೈದ್ಯ, ದಾದಿಯ ಸಹಾಯವಿಲ್ಲದೆ ಸ್ತ್ರೀ ರೋಗಿಯನ್ನು ಪರೀಕ್ಷಿಸುವುದಿಲ್ಲ. ಅನೇಕ ಸಂದರ್ಭಗಳಲ್ಲಿ ಈ ದಾದಿಯೇ ವೈದ್ಯನ ಲೆಕ್ಕಪತ್ರವನ್ನು ನೋಡಿಕೊಳ್ಳುತ್ತಾಳೆ. ಆದಾಯ ತೆರಿಗೆ ಬರುವುದಕ್ಕೆ ಮುಂಚೆ, ವೈದ್ಯ ಹೇಗೆ ತನ್ನ ಸಂಪಾದನೆಯನ್ನು ತಾಳೆ ನೋಡಿ ತಿಳಿಯುತ್ತಿದ್ದನೆಂದರೆ, ಜೇಬಿಗೆ ಸೇರಿರುವ ಹಣವೆಷ್ಟು, ವಸೂಲಾಗಬೇಕಾಗಿರುವ ಹಣವೆಷ್ಟು ಎಂದು ಎಣಿಸಿ ನೋಡಿ ತಿಳಿಯುತ್ತಿದ್ದ. ಆಗ ಅವನಿಗೆ ಆದಾಯನಷ್ಟದ ದಾಖಲೆ ನಿಷ್ಕರ್ಷೆಯಾಗುತ್ತಿತ್ತು.

ತಮ್ಮ ಪ್ರಕೃತಿಯನ್ನು ತೋರಲು ರೋಗಿಗಳು ವೈದ್ಯಶಾಲೆಗೆ ಬರುತ್ತಿದ್ದರು. ಆಗ ವೈದ್ಯರ ಹೊಣೆ ಹೆಚ್ಚಿರಲಿಲ್ಲ. ಉಗ್ರಕಾಹಿಲೆಗೆ ಕಾರಣರಾದವರೂ ಆಗ ವೈದ್ಯಶಾಲೆಗೆ ಬರುತ್ತಿದ್ದರು. ಪರೀಕ್ಷಿಸಿಕೊಂಡುಹೋದ ರೋಗಿ, ಮುನ್ನದಿನವೇ ಹಾಸಿಗೆ ಹಿಡಿದು ಮಲಗಿಬಿಡುತ್ತಿದ್ದ. ಒಂದುಸಾರಿ ವಿಷಮ ಶೀತಜ್ವರದಿಂದ ನರಳುತ್ತಿದ್ದ ರೋಗಿ ವೈದ್ಯಶಾಲೆಗೆ ನಡೆದುಕೊಂಡು ಬಂದ. "ಹೀಗೆ ನೀನು ನಡೆದುಕೊಂಡು ಬರಬಾರದು" ಎಂದು ಅವನನ್ನು ನಾನು ಮನೆಗೆ ಕಳುಹಿಸಿದೆ. ಮಾರನೇ ದಿನವೇ ಅವನು ರಕ್ತಸ್ರಾವದಿಂದ ಸತ್ತು

ಹೋದ. ಒಬ್ಬ ಕರುಳುಬಾಲರೋಗಕ್ಕೆ ಕಾರಣನಾಗಿದ್ದವನು, ಉರಿಯೂತದಿಂದ ನಡುಗುತ್ತಾ ವೈದ್ಯಾಲಯಕ್ಕೆ ಬಂದಾಗಲೇ ತಣ್ಣಗಾಗಿದ್ದ ಅವನ ಕೈಗಳು ಅವನ ಸಾಯುವಸ್ಥಿತಿಯನ್ನು ಸೂಚಿಸುತ್ತಿತ್ತು. ಇಂತಹ ಅತ್ಯವಸ್ಥೆಯ ಸ್ಥಿತಿಯ ಲ್ಲಿದ್ದವನನ್ನು ವೈದ್ಯ ಹೇಗೆ ರಕ್ಷಿಸುವುದು ? ಸಾಧಾರಣ ನೆವದಿಂದಾದ ವ್ರಣ, ಶಸ್ತ್ರಕ್ರಿಯೆಗೆ ಹೊಂದದೆ ಹೋಗುತ್ತಿತ್ತು. ಇಂತಹ ಸಮಯದಲ್ಲಿ ವೈದ್ಯ ದಿಕ್ಕು ಗಾಣದೆ ಕಳವಳದಿಂದ ಕೂಡಿರುತ್ತಿದ್ದ.

ದೀರ್ಘಕಾಲ ವ್ಯಾಧಿಯನ್ನು ಅನುಭವಿಸುತ್ತಿರುವ ರೋಗಿಗಳಿಗೆ ವೈದ್ಯಾಲಯ ದಲ್ಲಿ ಚಿಕಿತ್ಸೆ ನಡೆಸಬೇಕಾಗಿತ್ತು. ವ್ಯಾಧಿಲಕ್ಷಣ ತಿಳಿಯಲು ಕೂಲಂಕುಷವಾಗಿ ವೈದ್ಯಪರೀಕ್ಷೆಯಾಗಬೇಕಾಗಿತ್ತು. ಕಜ್ಜಿ, ಗಸೆ ಮುಂತಾದ ಸಾಧಾರಣ ರೋಗ ಗಳನ್ನು ವೈದ್ಯ ಅಷ್ಟು ಪರೀಕ್ಷಿಸಬೇಕಾಗಿರಲಿಲ್ಲ. ಈ ರೋಗಗಳೇ ಅವುಗಳ ಲಕ್ಷಣವನ್ನು ಪ್ರಕಟಿಸುತ್ತಿದ್ದುವು. ಇಂತಹ ಬೇನೆ ಬೇಸರವು ವಾಸಿಯಾಗು ತ್ತಿತ್ತು ಅಥವಾ ಉಪಶಮನವಾಗುತ್ತಿತ್ತು ಇಲ್ಲದಿದ್ದಲ್ಲಿ ಚಿಕಿತ್ಸೆಯೇ ರೋಗಿಗಳಿಗೆ ಹಿಡಿಯುತ್ತಿರಲಿಲ್ಲ. ಹೆಚ್ಚಾಗಿ ಚಿಕಿತ್ಸೆಯಿಂದ ರೋಗಿ ಎಚ್ಚೆತ್ತುಗೊಳ್ಳುತ್ತಿದ್ದ. ಚಿಕಿತ್ಸೆ ನಡೆಸಿ ಬೇಸರವಾದಾಗ, ರೋಗಿಗೇ ಚಿಕಿತ್ಸೆ ಬೇಡವೆನಿಸಿದಾಗ ವೈದ್ಯ ಆವನನ್ನು ಪ್ರಯೋಗ ಶಿಕ್ಷಣ ಸಂಸ್ಥೆಗೆ ಕಳುಹಿಸಿಕೊಡುತ್ತಿದ್ದ. ಅಲ್ಲಿ, ರೋಗಿಯ ಚಾರಿತ್ರಿಕ ಅಂಶ, ಪ್ರಕೃತಿ ಪರೀಕ್ಷೆ ಮತ್ತು ಪ್ರಯೋಗ ಪರೀಕ್ಷೆ ನಡೆಯುತ್ತಿದ್ದಿತಲ್ಲದೆ, ರೋಗಕ್ಕೆ ಪರಿಹಾರ ಸೂಚಕ ಔಷಧವನ್ನು ಕೊಡ ಲಾಗುತ್ತಿತ್ತು.

ಕಾಣಿಸಿಕೊಳ್ಳುತ್ತಿದ್ದ ರೋಗಲಕ್ಷಣವೆಲ್ಲಾ ಸಾಮಾನ್ಯವಾದುದೆಂದು ವೈದ್ಯ ಉಪೇಕ್ಷಿಸುವಂತಿರಲಿಲ್ಲ. ಕೆಲವುವೇಳೆ ಸಾಮಾನ್ಯವಾದುವುಗಳೇ ಉಲ್ಬಣ ವಾಗಿ ಕೈಮೀರಿ ಹೋಗುತ್ತಿತ್ತು. ರೋಗಿಗಳನ್ನು ಪರೀಕ್ಷಿಸುವಾಗ ವೈದ್ಯ ರೋಗಕ್ಕೆ ತಡೆಯಿದೆಯೆ ಇಲ್ಲವೆ ಎಂದು ತಿಳಿಯುತ್ತಿದ್ದ. ಏಕೆಂದರೆ, ಕೆಮ್ಮಿನ ಹಿಂದೆ ಕ್ಷಯದೋಷವಿದ್ದರೂ ಇರಬಹುದು ಎಂಬ ಸಂದೇಹಕ್ಕೆ ಆಸ್ಪದವಿರು ತ್ತಿತ್ತು. ಅಜೀರ್ಣದೋಷವೆಂದು ಕಂಡುಬಂದಾಗ ಹೊಟ್ಟೆಯಲ್ಲಿ ವ್ರಣವಿದ್ದರೂ ಇರಬಹುದೆಂದು ವೈದ್ಯ ತಿಳಿಯುತ್ತಿದ್ದ.

ಆಗದೆಂದು, ತಿಳಿಯದೆಂದು, ಚಿಕಿತ್ಸೆಗೆ ದಾರಿ ಇಲ್ಲವೆಂದು ಹಳ್ಳಿಯ ವೈದ್ಯ ರೋಗಿಯನ್ನು ನಿರುತ್ಸಾಹಗೊಳಿಸಿ ಕೈಬಿಡುತ್ತಿರಲಿಲ್ಲ. ರೋಗ ಪರಿ

ಹಾರಕ್ಕೆ ಮಾರ್ಗವಿಲ್ಲವೆಂದು ತನಗೆ ಕಂಡುಬಂದಾಗ, ರೋಗಿಯನ್ನು ಹೆಚ್ಚು ಪರಿಶ್ರಮವಿದ್ದ ನಗರ ವೈದ್ಯನ ಬಳಿಗೆ ಕಳುಹಿಸಿಕೊಡುತ್ತಿದ್ದ. ಮನೆ ವೈದ್ಯ ಸಿಗೆ, ಯಾವ ಸಂದರ್ಭದಲ್ಲಿ ಚಿಕಿತ್ಸೆ ಕೈಮೀರಿದೆ, ಯಾವಾಗ ನುರಿತ ನಗರದ ವಿಶೇಷವೈದ್ಯನ ಸಹಾಯ ಕೋರಬೇಕು ಎಂಬುದು ತಿಳಿದಿತ್ತು. ಹೀಗೆ ಪರಿಣಿತ ವೈದ್ಯನ ಬಳಿಗೆ ಕಳುಹಿಸಿಕೊಡುವುದರಲ್ಲಿಯೂ ಮನೆ ವೈದ್ಯನ ಹೊಣೆಗಾರಿಕೆ ಹೆಚ್ಚಿತ್ತು. ತನ್ನ ನಂಬಿಕೆಗೆ ಪಾತ್ರನಾದ ಹೆಚ್ಚು ಸೌಕರ್ಯವಿದ್ದ ನಗರವೈದ್ಯನ ಬಳಿಗೆ ಹಳ್ಳಿಯ ವೈದ್ಯ ತನ್ನ ರೋಗಿಯನ್ನು ಕಳುಹಿಸಿ ಕೊಡುತ್ತಿದ್ದ. ಹೀಗೆ ಕಳುಹಿಸಿಕೊಡುವುದೂ ಅವನ ಹೊಣೆಯೇ ಆಗಿತ್ತು. ಹಳ್ಳಿಯ ವೈದ್ಯ ಈ ಹೊಣೆ ಹೊತ್ತು ಉತ್ತಮ ನಗರವೈದ್ಯನ ಬಳಿಗೆ ಕಳುಹಿಸದಿದ್ದಲ್ಲಿ, ಡೋಂಗಿ ವೈದ್ಯನ ಕೈಗೆ ರೋಗಿ ಸಿಕ್ಕಿಬಿಡುತ್ತಿದ್ದ.

ಹೆಂಗಸರೇ ಹೆಚ್ಚಾಗಿ ತಮ್ಮ ಕಾಹಿಲೆಯ ಪರಿಹಾರಕ್ಕಾಗಿ ವೈದ್ಯಶಾಲೆಗೆ ಬರುವುದು. ಅವರ ಕಾಹಿಲೆಗಳೆಲ್ಲಾ-ಅನಿಶ್ಚಿತ ಕಾಹಿಲೆಗಳೇ ಸರಿ. ಹೇಗಾದ ರಿರಲಿ ; ಇವು ಸ್ತ್ರೀ ಕಾಹಿಲೆಗಳೇ ನಿಜ.

ವ್ಯವಸ್ಥಿತ ಶರೀರದಲ್ಲಿ ಕಾಣಿಸುವ ವ್ಯತ್ಯಾಸವೇ ರೋಗಕ್ಕೆ ಕಾರಣ. ಬರೀ ಈ ವ್ಯತ್ಯಾಸವಷ್ಟೇ ಸ್ತ್ರೀರೋಗಗಳೆಂದು ತಿಳಿಯಬಾರದು. ಮುಖ್ಯ ವಾಗಿ ಈ ಕಾಹಿಲೆಗಳೆಲ್ಲಾ ಸ್ತ್ರೀ ಆರೋಗ್ಯವಿಜ್ಞಾನಕ್ಕೆ ಸಂಬಂಧಪಟ್ಟವೇ ಆಗಿವೆ. ಸ್ತ್ರೀಯ ಆರೋಗ್ಯಶಾಸ್ತ್ರವಿಜ್ಞಾನಿ, ಸ್ತ್ರೀ ಸಂಬಂಧವಾದ ಕಾಹಿಲೆಗಳನ್ನು ಪರಸ್ಪರಾನುಬದ್ಧ ಪ್ರಾಣಿಶಾಸ್ತ್ರ ಮತ್ತು ಅದರ ಹುಟ್ಟುಗುಣ ವಿಮರ್ಶೆಮಾಡಿ ತಿಳಿಯುತ್ತಾನೆ. ಇದಕ್ಕೆ ಬದಲು "ಸ್ತ್ರೀರೋಗ ವಿಜ್ಞಾನಿ" ಎಂದು ಕರೆದರೆ ಚೆನ್ನು ಎಂದು ನನ್ನ ಅಭಿಪ್ರಾಯ. ಸ್ತ್ರೀ ಕಾಹಿಲೆಗಳೇ ಬೇರೆ, ಸ್ತ್ರೀರೋಗ ದೋಷಗಳೇ ಬೇರೆ. ಈ ಕಾಹಿಲೆಗೂ ದೋಷಕ್ಕೂ ಸಂಬಂಧವಿಲ್ಲ. ಈ ಅಭಿ ಪ್ರಾಯವನ್ನೇ ಸಮರ್ಥಿಸಿ ಹಿಂದೆ ವೈದ್ಯಶಾಲೆಯಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿ ಗಳಿಗೆ ನಾನು ಬೋಧಿಸುತ್ತಿದ್ದೆ." ಸ್ತ್ರೀಯ ಆರೋಗ್ಯಶಾಸ್ತ್ರವಿಜ್ಞಾನಿ ದುರ್ದೈ ವಿಯೇ ಸರಿ! ಪರಸ್ಪರಾನುಬದ್ಧ ಪ್ರಾಣಿಶಾಸ್ತ್ರದೊಂದಿಗೆ ಕ್ರೈಸ್ತಮತ ಸಂಬಂಧ ನೀತಿತತ್ವಗಳನ್ನು ಸೇರಿಸಿ ಇವೆಲ್ಲಾ ಸ್ತ್ರೀ ಸ್ವಭಾವಗುಣಗಳೆಂದು ಸೂಚಿಸು ತ್ತಾನೆ. "ಈ ಅಭಿಪ್ರಾಯ ತಕ್ಕುದಲ್ಲ" ಎಂದು ಹೇಳಿದೆ. ಈ ನನ್ನ ಅಭಿ ಪ್ರಾಯ ಹೇಳಿಕೆಯನ್ನು ಲಘುವಾಗಿ ಭಾವಿಸಿ ವಿದ್ಯಾರ್ಥಿಗಳು ಆಗ ನಕ್ಕು

ಬಿಟ್ಟರು. ನನ್ನ ಈ ಅಭಿಪ್ರಾಯ ದಿನಕಳೆದಂತೆ ಪುಷ್ಟಿಗೊಂಡಿತಲ್ಲದೆ ಹಿಂದೆ ವಿದ್ಯಾರ್ಥಿಗಳಿಗೆ ಬೋಧಿಸಿದ ನನ್ನ ಈ ಅಭಿಪ್ರಾಯವನ್ನು ನೆನೆದಲ್ಲಿ ಆನಂದ ವಾಗುವುದು.

ಕುದುರೆ ಏರಿ, ಬಂಡಿಹೂಡಿ ವೃತ್ತಿಯನ್ನು ಆರಂಭಿಸಿದಾಗ ಅನೇಕ ಸ್ತ್ರೀ ರೋಗಿಗಳು ವೈದ್ಯಶಾಲೆಗೆ ಬರುತ್ತಿದ್ದರು. ಸಾಮಾನ್ಯವಾಗಿ ಈ ಸ್ತ್ರೀಯರು ದೈಹಿಕ ತೊಂದರೆಯಾದಾಗ, ದೋಷ ಕಂಡುಬಂದಲ್ಲದೆ ವೈದ್ಯರನ್ನು ಕಾಣಲು ಬರುತ್ತಿರಲಿಲ್ಲ. ಎಂಟು ಅಥವಾ ಹನ್ನೆರಡು ಮಕ್ಕಳ ತಾಯಿ ಬುದ್ಧ್ಯುನ್ಮಾದ ಮತ್ತು ವಿಷೂಚಿಗೆ ಕಾರಣಳಾಗಿದ್ದಳು. ಒಂದೇ ಸಂಸಾರಕ್ಕೆ ಸೇರಿದ ತಾಯಿ ಮಕ್ಕಳು ಮನೆಗೆಲಸ ನೋಡಿಕೊಳ್ಳುತ್ತಿದ್ದರಲ್ಲದೆ, ಸೋಪು ತಯಾರಿಕೆ ಯಲ್ಲಿಯೋ ನೇಯ್ಗೆ ಕೆಲಸದಲ್ಲಿಯೋ ಭಾಗಿಗಳಾಗುತ್ತಿದ್ದರು- ಜೀವನಕ್ಕಾಗಿ ನಡೆಸುವ ಕೆಲಸ–ಕಲೆಯಲ್ಲಿ ಭಾಗವಹಿಸುತ್ತಿದ್ದರು. ಈ ಪಾಡಿನ ಜನರು ತಮಗೆ ಅನಾರೋಗ್ಯವೆಂದು ಹೇಳಿಕೊಂಡು ಬಂದಾಗ, ಇವರ ದೇಹ ದಣಿದಿದೆ, ವಿಶ್ರಾಂತಿಬೇಕು ಎಂದು ಸುಲಭವಾಗಿ ಅರ್ಥಮಾಡಿಕೊಳ್ಳುತ್ತಿದ್ದೆ.

ಸ್ತ್ರೀ ಹೇಗೆ ಹೆಚ್ಚಿಗೆ ತನ್ನ ಅನಾರೋಗ್ಯ ದೋಷಗಳನ್ನು ಹೇಳಿಕೊಳ್ಳು ತ್ತಿದ್ದಳೋ ಅಂತೆಯೇ ಅವಳ ಸಹೋದರರಿಗೂ ಈ ದೋಷ ತಟ್ಟಿದಂತಿತ್ತು. ಜಗತ್ತಿನಲ್ಲಿ ಜೀವಿಸುವ ಎಲ್ಲಾ ಪ್ರಾಣಿಗಿಂತಲೂ ಗಂಡಸೇ ಹೆಚ್ಚು ನರವ್ಯೂಹದ ಅಸ್ವಸ್ಥತೆಯಿಂದ ಬಳಲುವುದು. ಗಂಡಸು ಉದರಬೇನೆಯೆಂದು ಹೇಳಿಕೊಳ್ಳು ವನು. ಈ ಬೇನೆ ಅನಿಶ್ಚಿತವಾದದ್ದು. ಉದರಬೇನೆಯಿಂದ ಬಳಲುವ ಮನು ಷ್ಯನ ಮುಖ, ಮುಖಭಾವ, ಚುನಾವಣೆ ನಡೆದ ಮಾರನೆಯದಿನ ಸೋತ ಉಮೇದುವಾರನ ಮುಖ ಹೇಗಿರುವುದೋ ಹಾಗೆಯೇ ಕಾಣುವುದು. ಉದರ ಬೇನೆಯ ಮೂಲಕಾರಣ ತಿಳಿಯುವುದೇ ಕಷ್ಟ. ಒಮ್ಮೆ ನಾನು ಉದರಬೇನೆ ಯಿಂದ ನರಳುತ್ತಿದ್ದವನನ್ನು "ನಿನ್ನ ಬೇನೆ ಮಿತಿಮೀರಿದಾಗ ಅದು ಎಸೆದಾಡಿ ದಂತಾಗುವುದಿಲ್ಲವೆ ?" ಎಂದು ಕೇಳಿದೆ. ಅವನು "ಹೌದು, ನಿಜ" ಎಂದೊಪ್ಪಿ ಕೊಂಡವನು, ತಲೆಯ ಹಿಂಭಾಗದಲ್ಲಿ ಮತ್ತು ಹೊಟ್ಟೆಯ ಕೆಳಭಾಗದಲ್ಲಿ ನೋವಿನ ಸೆಳೆತ ಕಾಣಿಸಿಕೊಳ್ಳುವುದು ಎಂದು ಹೇಳಿಕೊಂಡ. ಆಗ, ಇವನು ನರವ್ಯೂಹದ ಅಸ್ವಸ್ಥತೆಯಿಂದ ಬಳಲುತ್ತಿರುವನೋ ಎಂಬ ಸಂದೇಹ ನನಗೆ ತೋರಿಬಂತು.

ಹೊಟ್ಟೆನೋವಿಗಿಂತಲೂ ಹೆಚ್ಚಿನದಾದ ದೋಷವಿದೆಯೆಂದು ನನಗಾಗ ಕಂಡು ಬಂತು.

ಈ ಬಗೆಯ ರೋಗಿಗಳನ್ನು ಹೇಗೆ ಪರೀಕ್ಷಿಸುವುದು ? ಔಷಧೋಪಚಾರ ಹೇಗೆ ಸೂಚಿಸುವುದು ? ಎಂದು ಒಮ್ಮೆ ಚತುರ ವೈದ್ಯನೊಬ್ಬನನ್ನು ಕೇಳಿದೆ. "ಇಂತಹ ರೋಗಿಗಳನ್ನು ನೀನು, ನಿನಗೆ ಆಗದಿರುವ ಬೇರೊಂದು ನಗರದ ವೈದ್ಯನ ಬಳಿಗೆ ಸಾಗುಹಾಕು" ಎಂದು ಸೂಚಿಸಿದ.

ಕಳವಳ ಮತ್ತು ಚಿಂತೆಯಿಂದ ಬಳಲಿದ ವ್ಯಾಪಾರಿಯೂ ಸಹ ತನಗೆ ಉದರಬೇನೆಯೆಂದು ಹೇಳಿಕೊಳ್ಳುತ್ತಾನೆ. ಧನಗ್ರಾಹಿಗಳು, ಹಣಕಾಸಿನ ವಹಿವಾಟು ನಡೆಸುವ ಸರಾಫರು, ಗಿರಣಿ ಮಾಲೀಕರು ಪದೇಪದೇ ಉದರಬೇನೆಯೆಂದು ಹೇಳಿಕೊಳ್ಳುವುದುಂಟು. ಉದರಬೇನೆಯಲ್ಲದೆ, ನರಗಳ ಸೆಳೆತವಿದೆಯೆಂದೂ ಹೇಳಿಕೊಳ್ಳುತ್ತಾರೆ. ಇವರಿಗೆಲ್ಲಾ ಉಪಶಮನವಾಗುವಂತಹ ಚಿಕಿತ್ಸೆಯೇ ಬೇಕು.

ಅನೇಕ ನೋವು ಬಾಧೆಗಳು ವೈದ್ಯಶಾಸ್ತ್ರಕ್ಕೆ ಸಂಬಂಧಿಸಿಲ್ಲ. ರೋಗಕ್ಕೆ ಕಾರಣ ಯಾವುದು ? ಮೂಲವೇನು ? ಎಂದು ತಿಳಿಯದೆ ರೋಗ ಪರಿಹರಿಸುವುದಕ್ಕಾಗುವುದಿಲ್ಲ. ಶಸ್ತ್ರಕ್ರಿಯೆ ಆಗಬೇಕೆಂದು ರೋಗಿ ವೈದ್ಯನಬಳಿಗೆ ಹೋಗುತ್ತಾನೆ. ಶಸ್ತ್ರಕ್ರಿಯೆ ಆದಮೇಲೆ ಚೇತರಿಸಿಕೊಳ್ಳುತ್ತಾನೆಂದು ತಿಳಿಯೋಣ. ಕ್ರಿಯೆ ನಡೆಯಿತು, ರೋಗಿಗೆ ಗುಣವಾಯಿತು ಎಂದು ಶಸ್ತ್ರವೈದ್ಯ ತನ್ನ ವರದಿ ಪಟ್ಟಿಯಲ್ಲಿ ಬರೆದುಕೊಳ್ಳುತ್ತಾನೆ. ಆದರೆ ಮನೆವೈದ್ಯ ಹೀಗೆ ಮಾಡಲಾರ: ಪದೇಪದೇ ರೋಗಿಯು ವೈದ್ಯನ ಬಳಿಗೋಡುವುದನ್ನು ಬಿಡುವುದಿಲ್ಲ. ವೈದ್ಯಕಲೆಯೇ ಇದು. ಔಷಧವಿಜ್ಞಾನದ ಪ್ರಯೋಜನವನ್ನಿಲ್ಲಿ ಕಾಣಬಹುದು. ಅಭ್ಯಾಸಬಲದಿಂದ ವೈದ್ಯ, ಶಸ್ತ್ರಕ್ರಿಯೆ ಬೇಕೇ ಬೇಡವೆ ಎನ್ನುವುದನ್ನು ಕಂಡುಕೊಳ್ಳುತ್ತಾನೆ. ಯಾವ ರೋಗಿ ಶಸ್ತ್ರಕ್ರಿಯೆಗೆ ಸಿದ್ಧ ಅಥವಾ ಸಿದ್ಧನಿಲ್ಲ ಎಂದು ತಿಳಿಯುವುದು ವೈದ್ಯನ ಕರ್ತವ್ಯ.

ಈ ಕಾರಣಕ್ಕಾಗಿ ನಾನು ರೋಗಿಗಳಲ್ಲಿ ನಿಕಟ ಸಂಬಂಧವಿಟ್ಟುಕೊಂಡಿದ್ದೆ. ಈ ಹೆಚ್ಚಿನ ಸಂಬಂಧದಿಂದ ನನಗೆ ಅವರು ಯಾವುದನ್ನೂ ಮರೆಮಾಚುತ್ತಿರಲಿಲ್ಲ. ತಾಯಿಯೊಬ್ಬಳು ತನ್ನ ಗಂಡುಮಗುವನ್ನು ವೈದ್ಯಶಾಲೆಗೆ ಕರೆತಂದು, "ವೈದ್ಯರೆ! ಮಗು ಪಿಯಾನೋ ಮೇಲಿಂದ ಕೆಳಗೆ ಬಿದ್ದು ಗಾಯಮಾಡಿಕೊಂಡಿದ್ದಾನೆ,

ಮೂಳೆ ಮುರಿದಿದೆಯೆ ? ನೋಡಿ ಹೇಳಿ" ಎಂದು ಕೂಗಿ ಹೇಳಿದಳು. ಕಾರಣ ವಿಲ್ಲದ ಈಕೆಯ ಭಯಕ್ಕೆ ಸಮ್ಮತಿಸಿ, ಹುಡುಗನನ್ನು ಪರೀಕ್ಷಿಸಿ, "ಮೂಳೆ ಮುರಿದಿಲ್ಲ, ಭಯಕ್ಕೆ ಕಾರಣವಿಲ್ಲ" ಎಂದು ಹೇಳಿ ಕಳುಹಿಸಿದೆ.

ಒಂದೊಂದು ಸಾರಿ ಹಾಸ್ಯ ಭಯವನ್ನು ಕಳಚುತ್ತಿತ್ತು. ಒಮ್ಮೆ ಗಟ್ಟಿಯಾಗಿ ಮಾತನಾಡಿಕೊಳ್ಳುತ್ತಾ ಸ್ತ್ರೀಯರಿಬ್ಬರು ಚಿಕ್ಕಹುಡುಗನನ್ನು ನನ್ನ ವೈದ್ಯಶಾಲೆಗೆ ಎಳೆದುಕೊಂಡು ಬಂದರು. ಆಗ ವೈದ್ಯಶಾಲೆಯಲ್ಲಿ ನನ್ನ ಅತಿ ವಿನೋದಿ ಸಹೋದ್ಯೋಗಿಯಿದ್ದ. ಸ್ತ್ರೀಯರಿಬ್ಬರು ವೈದ್ಯಶಾಲೆಯೊಳಗೆ ನುಗ್ಗಿ ಬಂದಾಗಲೂ ಮೇಜಿನಮೇಲಿದ್ದ ತನ್ನ ಎರಡು ಕಾಲುಗಳನ್ನೂ ನೀಡಿ ಕುಳಿತು ಕೊಂಡಿದ್ದ. ಸಭ್ಯತೆಗಾಗಿಯೂ ಅವನು ನೀಡಿದ್ದ ಕಾಲನ್ನು ತೆಗೆಯಲಿಲ್ಲ. ಕಳವಳದಿಂದ ಕೂಡಿದ ಸ್ತ್ರೀಯರನ್ನು, ಅವರು ಆಡುತ್ತಿದ್ದ ಮಾತು ಗಳಿಂದ ಮತ್ತು ಅಳುತ್ತಿದ್ದ ಹುಡುಗನನ್ನು ನೋಡಿದ ಕೂಡಲೇ, ಸಹೋದ್ಯೋಗಿಯು ಹುಡುಗ ಒಂದು ಪೆನ್ನಿ ನಾಣ್ಯವನ್ನು ನುಂಗಿಬಿಟ್ಟಿದ್ದಾ ನೆಂದು ತಿಳಿದುಕೊಂಡ. "ಈ ಹುಡುಗನ ಗಂಟಲು ಹರಿಯಿರಿ" ಎಂದೆನ್ನುತ್ತಾ ಅವನು ಮೇಜಿನಮೇಲಿದ್ದ ಒಂದು ಕಾಲನ್ನು ಹಿಂದಕ್ಕೆಳೆದುಕೊಂಡು "ನಿಮ್ಮ ಪೆನ್ನಿ ನಿಮಗೆ ವಾಪಸ್ಸು ಬರುವುದು, ಆದಾಯತೆರಿಗೆ ವಸೂಲಿಯವನ ದೃಷ್ಟಿ ಬೀಳದಿರಲೆಂದು ಈ ಹುಡುಗ ಪೆನ್ನಿಯನ್ನು ಮುಚ್ಚಿಟ್ಟುಕೊಂಡಿದ್ದಾನೆ" ಎಂದ. ಆಗೆಲ್ಲರೂ ಫಕ್ಕನೆ ನಗುತ್ತಾ ಆ ವಿನೋದದಲ್ಲಿ ಮುಳುಗಿದರು. ಕೊನೆಗೂ ಪೆನ್ನಿ ಏನಾಯಿತೆಂದು ತಿಳಿಯಲಿಲ್ಲ.

ರೋಗಿಗಳ ಸ್ವಭಾವ ವೈಚಿತ್ರವನ್ನು ತಿಳಿದ ವೈದ್ಯನಿಗೆ ಹೆಚ್ಚು ಅನುಭವ ವಿರುತ್ತದೆ. ವೈದ್ಯನಿಗೆ ಅತ್ಯಂತ ಆಧುನಿಕ ಶಾಸ್ತ್ರೀಯ ಪ್ರಯೋಗ ತಿಳಿಯದೇ ಇರಬಹುದು. ಆದರೂ ಅವನು ತನ್ನ ರೋಗಿಗಳ ನೋವು ಬಾಧೆಗಳ ನಿವಾ ರಣೆಗೆ ಯೋಗ್ಯನೇ ಇರುತ್ತಾನೆ. ಅಂಗಭಾಗ ದೋಷದಿಂದ ರೋಗಿ ಬಾಧೆ ಪಡುತ್ತಿಲ್ಲ, ಬಾಧೆಗೆ ಬೇರೆ ಕಾರಣವಿದೆ ಎಂದು ಕಂಡುಕೊಳ್ಳುವವನು ಎಂದರೆ ಅನುಭವಿಕ ವೈದ್ಯನೇ. ಕಾಹಿಲೆಯಿಂದ ನರಳುವುದು ಕೆಲವುಕಾಲ ಮಾತ್ರವೆ. ಈ ನರಳುವಿಕೆಗೆ ಪರಿಹಾರವೇನೂ ಬೇಕಿಲ್ಲ. ಅವನ ಶಕ್ತಿಗೆ ಮೀರಿದ ಯಾವುದೋ ವ್ಯಸನದಿಂದಲೋ ಅಥವಾ ಸಂಕಟಕ್ಕೆ ಕಾರಣನಾಗಿಯೋ ತೊಳಲಾಟಕ್ಕೆ ಸಿಕ್ಕಿ ರೋಗಿ ನರಳುತ್ತಾನೆ.

ರೋಗಿ ಯಾವುದೋ ಕೈಗೂಡದ ಆಸೆಯನ್ನು-ಮನಸ್ಸಿಗೆ ತಂದುಕೊಂಡು ವರ್ಷ ಗಟ್ಟಲೇ ಕೊರಗುವುದುಂಟು. ಈ ಸಂಕಟ ಸ್ಥಿರವೋ ಅಸ್ಥಿರವೋ ತಿಳಿಯುವುದಿಲ್ಲ. ಬಳಕೆಗೆ ಬಂದ ವೈದ್ಯನನ್ನು, ಈ ರೋಗಿಗಳು ಕಳೆದುಕೊಂಡಲ್ಲಿ ನಿಜವಾಗಿಯೂ ತಮ್ಮ ಗೆಳೆಯನನ್ನು ಮತ್ತು ಮುಖ್ಯ ರಕ್ಷಕನನ್ನು ಕಳೆದುಕೊಂಡಂತೆಯೇ ಸರಿ.

೭

ವೈದ್ಯ ಪದವಿ ಪಡೆಯುವುದಕ್ಕೆ ಮುಂಚೆ, ವೈದ್ಯವಿದ್ಯಾರ್ಥಿ ಬೇರೆಬೇರೆ ವಿಜ್ಞಾನಶಾಸ್ತ್ರ ತಿಳಿಯಲು, ಹೆಚ್ಚು ಶೋಧನೆ ನಡೆಸಲು ಸಿದ್ಧನಾಗಬೇಕು. ವಿಜಾನಶಾಸ್ತ್ರ ಕುರಿತು ನಾವು ಬೇಕಾದಷ್ಟು ಮಾತನಾಡುತ್ತೇವೆ. ಮೂಲ ಶಾಸ್ತ್ರವನ್ನು ತಿಳಿದ ವಿದ್ಯಾರ್ಥಿ ಮುಂದೇನು ಮಾಡಬೇಕು? ಅವನಿಗೆ ಮುಂದೆ ಕಲಿಯಲು ಸಾಧ್ಯವಿರುವುದಿಲ್ಲ. ವೈದ್ಯಶಾಸ್ತ್ರವನ್ನು ಓದಿ ಪವವಿ ಗಳಿಸಿಕೊಂಡ ತರುಣ, ಉಪಯೋಗವಾಗುವ ರೀತಿಯಲ್ಲಿ ಮುಂದೆ ಪ್ರಯೋಗಿಸಬೇಕು. ಹೃದ್ಗತವಾದ ವಿಜ್ಞಾನವನ್ನು ಪ್ರಯೋಗಿಸಲು ಸಿದ್ಧನಾಗಬೇಕು. ವಿಜ್ಞಾನ ಶಾಸ್ತ್ರವನ್ನು ಪೂರ್ವವ್ಯಾಸಂಗದಲ್ಲಿಯೇ ತಿಳಿದು ಪದವಿ ಗಳಿಸಿಕೊಳ್ಳಬೇಕು. ವೈದ್ಯವಿಜ್ಞಾನದ ಬಗ್ಗೆ ಎಷ್ಟೋ ವಿಷಯಗಳನ್ನು ಕೇಳಿದ್ದೇವೆ. ಕಾಣುತ್ತಿರುವುದು ಮಾತ್ರ ಅಲ್ಪವೇ ಆಗಿದೆ.

ಪದವಿಯನ್ನು ಗಳಿಸಿಕೊಳ್ಳುವುದಕ್ಕಾಗಿ ವಿದ್ಯಾರ್ಥಿ ಶಾಸ್ತ್ರಮೂಲವನ್ನು ತಿಳಿಯಬೇಕು. ನಾನು ವೈದ್ಯಕೀಯ ವ್ಯಾಸಂಗ ಮುಗಿಸಿಪಮೇಲೆ, ಪದವಿ ಪಡೆಮ ಕೊಳ್ಳಲು ಎರಡು ವರ್ಷ ಅಭ್ಯಾಸಮಾಡಿದೆ. ಮುಂದೆ ನನ್ನದೇ ಆದ ವೈದ್ಯ ಶಾಲೆಯನ್ನಿಟ್ಟುಕೊಳ್ಳುವಾ ಎಂದು ಯೋಚಿಸಿದೆ. ಹೀಗೆ ನಾನು ಯೋಚಿಸಿಕೊಂಡಮೇಲೆ ವಿಜ್ಞಾನಶಾಸ್ತ್ರದ ವಿಶೇಷ ಅನುಭವವೆಲ್ಲಾ ನನಗಿರಬೇಕು ಎಂದುಕೊಂಡೆ. ಹೀಗೆ ಯೋಚಿಸಿದಂತೆ ನಾನು ಅನುಸರಿಸಲಾಗಲಿಲ್ಲ. ಆರ್ಥಿಕ ಮುಗ್ಗಟ್ಟು ತಡೆಗಟ್ಟಿತು. ಪ್ರಯೋಗ ಪರೀಕ್ಷೆ ಮತ್ತು ಅಭ್ಯಾಸಬಲವನ್ನು ನಾನು ನಂಬಿಕೊಳ್ಳಬೇಕಾಯಿತು.

ನಾನಿನ್ನೂ ಶಾಲೆಯಲ್ಲಿ ವ್ಯಾಸಂಗಮಾಡುತ್ತಿದ್ದಾಗ, ಉಪಾಧ್ಯಾಯರೊಬ್ಬರು "ನೀನು ಜರ್ಮನಿ (Germany)ಯಲ್ಲಿ ವಿದ್ಯಾಭ್ಯಾಸ ಮುಂದು

ವರಿಸು, ನಿನಗಲ್ಲಿ ಹೆಚ್ಚು ಪ್ರಯೋಜನವಿದೆ" ಎಂದು ತಿಳಿಸಿದರು. ಮೂವತ್ತು ವರ್ಷವಾಗುವುದರೊಳಗಾಗಿ ಜರ್ಮನಿಯಲ್ಲಿ ಎರಡುವರ್ಷಕಾಲ ವ್ಯಾಸಂಗ ಮಾಡಿಯೇ ಮುಗಿಸುವೆನೆಂದು ನಾನು ನಿಶ್ಚಯಿಸಿದೆ. ಮೇಲಾಗಿ, ಗಣಿತ ಶಾಸ್ತ್ರ ಮತ್ತು ಶ್ರೇಷ್ಠಗ್ರಂಥಗಳನ್ನು ಅಧ್ಯಯನ ಮಾಡಿದ್ದೆ. ವೈದ್ಯಶಾಸ್ತ್ರಕ್ಕೆ ಅತ್ಯಾವಶ್ಯಕವಾದ ಜೀವಶಾಸ್ತ್ರವನ್ನು ಓದಿಕೊಂಡಿರಲಿಲ್ಲ. ಪದವೀಧರನಾಗಲು ನಾನು ಜೀವಶಾಸ್ತ್ರ ಓದಲೇಬೇಕಾಗಿತ್ತು. ಓದಿ ಹೇಗೋ ಸರಿಪಡಿಸಿಕೊಂಡು ಪದವಿ ಗಳಿಸಿಕೊಂಡೆ. ಆಗ ಬೇರೆ ಬೇರೆ ಕಲಾಶಾಲೆಯಲ್ಲಿ ಬೇರೆ ಬೇರೆ ಶಾಸ್ತ್ರಾ ಧ್ಯಯನ ಮಾಡಲು ಅವಕಾಶ ಸಿಗುತ್ತಿತ್ತು. ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗ ಮಾಡಲು ಅನುಕೂಲವಿಲ್ಲದಿದ್ದವರಿಗಾಗಿ ಪತ್ರವ್ಯವಹಾರ ಶಿಕ್ಷಣಶಾಲೆಗಳಿತ್ತು. ಈ ಶಿಕ್ಷಣ ಶಾಲೆಯಲ್ಲಿ ಕಲಿತು ಪದವಿಯನ್ನು ಗಳಿಸಿಕೊಳ್ಳುವುದಕ್ಕಾಗುತ್ತಿರಲಿಲ್ಲ. ಶಾಸ್ತ್ರಾಭ್ಯಾಸ ಮಾಡಲು ಮಾತ್ರ ಈ ಶಿಕ್ಷಣ ಶಾಲೆಯೇ ಅನುಕೂಲವಾಗಿತ್ತು.

ನಾನು ಪತ್ರವ್ಯವಹಾರ ಶಿಕ್ಷಣಶಾಲೆಯೊಂದನ್ನು ಸೇರಿಕೊಂಡೆ. ಕಲಿಯಲು ಅಲ್ಲಿ ಜೀವಶಾಸ್ತ್ರ ಮತ್ತು ಮಾನಸಶಾಸ್ತ್ರವನ್ನು ಆರಿಸಿಕೊಂಡೆ. ಜೀವಶಾಸ್ತ್ರ ಕಲಿಯುತ್ತಿದ್ದ ಕಾಲದಲ್ಲಿ ನನಗೆ ಹೆಚ್ಚು ಬಣ್ಣದ ಚಿಟ್ಟೆಗಳು ಬೇಕಾಗಿದ್ದವು. ಚಿಟ್ಟೆ ಗಳನ್ನು ಹಿಡಿಯಲು ಒಂದು ಬಲೆ ಮಾಡಿದೆ. ನನಗೆ ಯಾವ ತರಹೆಯ ಚಿಟ್ಟೆ ಅಭ್ಯಾಸಕ್ಕೆ ಬೇಕೋ ಅವುಗಳನ್ನು ಹಿಡಿದೆ. ಆಯ್ದ ಚಿಟ್ಟೆಗಳನ್ನು ಸಯನೈಡ್ ದ್ರಾವಕದಲ್ಲಿಡುತ್ತಿದ್ದೆ. ವೈದ್ಯಕ್ರಿಯೆಗೆ ಇದು ಅಗೌರವ ತರುವುದೆಂದು ಯೋಚಿಸದೆ, ಚಿಟ್ಟೆಗಳನ್ನು ಬಿಡದೆ ಸಂಗ್ರಹಿಸಿದೆ.

ಎಂದಿನಂತೆ ನನಗೆ ಕರೆ ಬರುತ್ತಿತ್ತು. ಚಿಟ್ಟೆಯನ್ನು ಹಿಡಿದು ಪರಿಶೀಲಿಸಿ ತಿಳಿಯುವುದನ್ನು ನಾನು ನಾಲ್ಕು ವರ್ಷಕಾಲ ನಡೆಸಿದೆ. ನನ್ನ ಪರೀಕ್ಷೆ, ಈ ಶೋಧನೆ, ರೋಗಿಗಳ ಕಣ್ಣಿಗೆ ಬೀಳಬಾರದೆಂದು ಜಾಗರೂಕತೆಯಿಂದ ನೋಡಿ ಕೊಳ್ಳುತ್ತಿದ್ದೆ. ಕೆಲಸವಿಲ್ಲದೆ ಸದಾ ಶೋಧನೆಯಲ್ಲಿ ಕಾಲ ಕಳೆಯುತ್ತಿರುವ ನೆಂದು ಇತರರು ತಿಳಿಯಬಾರದೆಂದು ಶೋಧನೆಯನ್ನು ನಾನು ಮುಚ್ಚಿಡಬೇಕಾ ಯಿತು. ಒಂದು ದಿನ ಆಕಸ್ಮಿಕವಾಗಿ ಚಿಟ್ಟೆಯ ಬಲೆಯನ್ನು ಹರಡಿದ್ದಾಗ ಕದ್ದುನೋಡಿ ಬಂದ ಬೇಸಾಯಗಾರನೊಬ್ಬ, "ವೈದ್ಯರೆ, ನನ್ನ ರೋಗಲಕ್ಷಣ ತಿಳಿಯಲು ಶೋಧನೆ ನಡೆಸುತ್ತಿರುವಿರಾ ?" ಎಂದು ಕೇಳಿದ.

ಜನರು ನನ್ನ ಪರಿಶೋಧಕದೃಷ್ಟಿಯನ್ನು ಗಮನಿಸದೆ, ಏನೋ ಅದ್ಭುತ ವಿನೋದ ನಡೆಸುತ್ತಿರುವನೆಂದು ಭಾವಿಸುತ್ತಿದ್ದರು. ನಾನು ವಿನೋದದಲ್ಲಿ ಆಸಕ್ತಿಯುಳ್ಳವನೆ. ಒಮ್ಮೆ ಒದ್ದೆ ಹೀರುವಂತಿದ್ದ ಅಡ್ಡಮೂಳೆಯನ್ನು ಕರುಳು ರೋಗಕ್ಕಾಗಿ ಪರೀಕ್ಷೆಮಾಡುತ್ತಿದ್ದೆ. ಪರಿಕ್ಷಾರ್ಥವಾಗಿ ನಾಯಿಗಳಿಗೆ ಶಸ್ತ್ರಕ್ರಿಯೆ ನಡೆಸಿದಮೇಲೆ, ಅದರ ಮುಂಗಾಲು ಮತ್ತು ಪೂರಾ ಹಿಂಗಾಲುಗಳಿಗೆ ಗಚ್ಚು ಹಚ್ಚುತ್ತಿದ್ದೆ. ಗಚ್ಚುಹಚ್ಚಿದ (Plaster Cast) ನಾಯಿಗಳನ್ನು ವೈದ್ಯಶಾಲೆಯಲ್ಲಿ ಕೂಡಿಹಾಕಿಬಿಡುತ್ತಿದ್ದೆ. ಇವುಗಳಲ್ಲಿ ಒಂದು ಹೇಗೋ ತಪ್ಪಿಸಿಕೊಂಡು ಹೊರಗೆ ಬಂತು. ನಾನು ಹೊರಗೆ ಎಲ್ಲಿಗೋ ಹೋಗುತ್ತಿದ್ದಾಗ ಈ ತಪ್ಪಿಸಿಕೊಂಡು ಬಂದ ನಾಯಿಯನ್ನು ನೋಡಿದೆ. ನಾಯಿಗೂ ನಾನು ಶಸ್ತ್ರಕ್ರಿಯೆ ನಡೆಸುವೆನೆಂದು ಜನರು ತಿಳಿದಾರು ಎಂದು ಹೆದರಿದೆ. ತಪ್ಪಿಸಿಕೊಂಡು ಬಂದ ನಾಯಿಯು ಜಾತಿ ಬೇರೆಯಾಗಿತ್ತು. ಇದು ಇತರ ನಾಯಿಗಳೊಂದಿಗೆ ಸೇರದ ಪ್ರಾಣಿಯಾಗಿತ್ತು. ನನ್ನ ಈ ಪ್ರಯೋಗ ಕ್ರಿಯೆಯನ್ನು ಹೆಚ್ಚು ಗಮನಿಸಿದ್ದ ಜನರು, ನಾಯಿಯನ್ನು ನೋಡಿ ನಕ್ಕುಬಿಟ್ಟರು. ಇದರಿಂದ ನನಗೆ ಅವಮಾನವಾಗುವುದು ತಪ್ಪಿತು. ಕುತ್ತಿನಿಂದ ನಾನು ಪಾರಾದೆ. ಒಂದುಸಾರಿ ಒಬ್ಬ ಹುಡುಗನಿಗೆ ಬಂದೂಕಿನ ಹೊಡೆತದಿಂದ ಕರುಳು ವ್ರಣವಾಯಿತು. ಈ ವ್ರಣವನ್ನು ವಾಸಿಮಾಡಲು ನಾನು ಹೋದೆ. ಚಿಕಿತ್ಸೆಯ ಬಗ್ಗೆ ತಂದೆಗೂ ಮಗನಿಗೂ ಚರ್ಚೆ ನಡೆಯಿತು. ನಾನು ನಡೆಸಿದ ಶಸ್ತ್ರಕ್ರಿಯೆಯಿಂದ ಹುಡುಗನಿಗೆ ಗುಣವಾಯಿತು. ನಗರಾಧ್ಯಕ್ಷ ಕೆಲವು ನಾಯಿಗಳನ್ನು ಪರೀಕ್ಷಾರ್ಥಕ್ಕಾಗಿ ನನಗೆ ಕೊಟ್ಟಿದ್ದ. ಪರೀಕ್ಷಾಫಲದಿಂದ ಹುಡುಗನಿಗೆ ಮಾಡಿದ ಶಸ್ತ್ರಕ್ರಿಯೆ ಉತ್ತಮವಾಯಿತು ಎಂದವನಿಗೆ ತೃಪ್ತಿಯಾಯಿತು. ನಗರಾಧ್ಯಕ್ಷನ ನೆರವಿಲ್ಲದೆ ನಾನು ಶಸ್ತ್ರಕ್ರಿಯೆ ಮಾಡುತ್ತಿರಲಿಲ್ಲ ಮತ್ತು ನನಗದರ ಅನುಭವವೂ ಆಗುತ್ತಿರಲಿಲ್ಲ.

ಜೀವಶಾಸ್ತ್ರ ಪರಿಚಯಮಾಡಿಕೊಳ್ಳಲು ಅಲ್ಪಪ್ರಾಣಿಯಾದ ನಾಯಿ ನನಗೆ ಸಿಕ್ಕಿದುದು ಅನುಕೂಲವಾಯಿತು. ಬಾಲ್ಯದಿಂದಲೂ ನಾನು ಸ್ವಲ್ಪ ಆವೇಶಭರಿತನೆ. ಮೊದಲಿನಿಂದಲೂ ತತ್ವಜ್ಞಾನ ಬುದ್ಧಿಯಿಂದ ಕೂಡಿಹೋಗಿದ್ದೆ. ತತ್ವಜ್ಞಾನದಿಂದ ಕೂಡಿರುವುದು, ಯೋಚಿಸುವುದು, ತಕ್ಕುದಲ್ಲ; ಸದಾ ಜ್ಞಾನದಿಂದ ಕೂಡಿ ತರ್ಕಿಸುವುದು ಉತ್ತಮವೆಂದು ತಿಳಿದೆ. ಮಾನಸಶಾಸ್ತ್ರವನ್ನು ಕಲಿಯಲು ಪತ್ರವ್ಯವಹಾರ ಶಿಕ್ಷಣಶಾಲೆಯ ನೆರವು ಪಡೆದೆ. ಅನೇಕ ಗ್ರಂಥ

ಓದಿದೆ. ಶರೀರಶಾಸ್ತ್ರಕ್ಕೆ ಸಂಬಂಧಿಸಿದ ಮಾನಸಿಕಶಾಸ್ತ್ರ ನನಗೆ ಮುಖ್ಯ ಗ್ರಂಥ ವಾಯಿತು. ಇನ್ನುಳಿದ ಗ್ರಂಥಗಳನ್ನು ಓದಿ ಈ ಗ್ರಂಥ ಪರಿಚಯ ಮಾಡಿ ಕೊಳ್ಳಬೇಕಾಯಿತು. ಜ್ಞಾನದ ಬಗೆಯ ಅಧ್ಯಾಯವೇ ಕಷ್ಟ, ಈ ಅಧ್ಯಾಯ ಅದ್ಭುತ. ನಾನೆಷ್ಟು ಇದನ್ನು ಮನನಮಾಡಿಕೊಂಡರೂ ವಿಷಯ ಮಾತ್ರ ನನ್ನ ಬುದ್ಧಿಗೇರಲಿಲ್ಲ. ಒಂದು ರಾತ್ರಿ ರೋಗಿಯನ್ನು ನೋಡಬೇಕೆಂದು ಹೊರಟ ನಾನು ಎಚ್ಚರತಪ್ಪಿ ಆಳವಾಗಿದ್ದ ಹಳ್ಳದಲ್ಲಿ ಬಿದ್ದುಬಿಟ್ಟೆ. ಆಗ ನನ್ನ ತಲೆಗೆ ಏಟು ತಗುಲಿತು. ಈ ಸಮಯದಲ್ಲಿ ವಿಚಾರವೊಂದು ನನಗೆ ಹೊಳೆಯಿತು. ಮಾನಸ ಶಾಸ್ತ್ರವನ್ನು ತಿಳಿಯಬೇಕಾದರೆ ಮನುಷ್ಯ ತನ್ನ ತಲೆ ತಗುಲಿಸಿಕೊಂಡಿರಬೇಕು ಎಂದು ತಿಳಿದೆ.

ವಿದೇಶ ವಿದ್ಯಾಭ್ಯಾಸ ಮುಗಿದಮೇಲೆ, ನಾನು ಫ್ರೆಂಚ್ ಭಾಷೆಯನ್ನು ಕಲಿಯಬೇಕೆಂದು ಮನಸ್ಸುಮಾಡಿದೆ. ಮೊದಲಾಗಿ ರೈಲು ಪ್ರಯಾಣ ಸಮಯ ದಲ್ಲಿ ಫ್ರೆಂಚ್ ಓದುವಿಕೆಯನ್ನು ಪ್ರಾರಂಭಿಸಿದೆ. ಹೆಚ್ಚು ಭಾಷಾ ಪರಿಚಯವನ್ನು ಮಾಡಿಕೊಳ್ಳಲು ನಾನು ಪ್ರಯತ್ನಿಸಲಿಲ್ಲ. ಫ್ರೆಂಚ್ ಭಾಷೆಯಿಂದ ಇಂಗ್ಲಿಷಿಗೆ ತರ್ಜುಮೆ ಮಾಡಿಕೊಳ್ಳುವಷ್ಟು ಜ್ಞಾನ ಸಂಪಾದಿಸಿದೆ. ಒಂದು ಭಾಷೆ ಪರಿ ಚಯಮಾಡಿಕೊಳ್ಳುವುದಕ್ಕೂ ಓದಿ ತರ್ಜುಮೆ ಮಾಡುವುದಕ್ಕೂ ಬಹಳ ವ್ಯತ್ಯಾಸವಿದೆ. ಬಾಲ್ಯದಲ್ಲಿ ಜರ್ಮನಿ ಭಾಷೆ ಕಲಿತೆ. ಇದರಿಂದ, ಜರ್ಮನಿಯ ಭಾಷೆ ಸಂಭಾಷಣೆ ಅನುಸರಿಸಲು ನನಗೆ ಅನುಕೂಲವಾಯಿತು. ಜ್ಞಾನೋಪ ದೇಶ ಭಾಷಣ ನಾನು ತಿಳಿಯುವಂತಾದೆ. ಜರ್ಮನಿಯ ವೈದ್ಯಕೀಯ ಭಾಷೆ ಪರಿಚಯಮಾಡಿಕೊಳ್ಳಲು ಅಲ್ಲಿ ಪ್ರಚಾರವಾಗುತ್ತಿದ್ದ ವೈದ್ಯಕೀಯ ಪತ್ರಿಕೆ ಗಳನ್ನು ತರಿಸಿಕೊಳ್ಳುತ್ತಿದ್ದೆ. ಜರ್ಮನಿಯಲ್ಲಿ ರಚಿತವಾಗಿದ್ದ ಶರೀರಶಾಸ್ತ್ರ ಮತ್ತು ನರಗಳ ವ್ಯವಸ್ಥಾರಚನೆಯ ಗ್ರಂಥವನ್ನು ಇಂಗ್ಲಿಷ್ ಭಾಷೆಗೆ ತರ್ಜುಮೆ ಮಾಡಿದೆ. ಈ ತರ್ಜುಮೆಯ ಕೆಲಸ ತುಂಬಾ ಕಷ್ಟಕರವಾಗಿತ್ತು. ಫಲಿ ತಾಂಶವೂ ಅಷ್ಟು ಒಳ್ಳಿತಾಗಲಿಲ್ಲ.

ನಾಲ್ಕುವರ್ಷ ವೈದ್ಯವೃತ್ತಿ ನಡೆಸಿ ಬೇಕಾದಷ್ಟು ಹಣ ಗಳಿಸಿದೆ. ಗಳಿಸಿ ದುದು ಗಳಿಸದಂತೆಯೇ ಆಯಿತು. ನನ್ನ ವೃತ್ತಿ ಸಿದ್ಧತೆಯಲ್ಲಿ ಏನೋ ಲೋಪ ವಿದೆಯೆಂದು ಕಂಡುಬಂತು. ಪಡೆದ ಅನುಭವಶಕ್ತಿ ಹೆಚ್ಚಾಗಿದ್ದುದರಿಂದ ಲೋಪ ಕಾಣಿಸಿಕೊಳ್ಳುವುದು ಹೆಚ್ಚೇನಲ್ಲವೆಂದು ತೋರಿತು. ಏನು ಮಾಡಿದ್ದರೂ

ಅಂತ್ಯದಲ್ಲಿ ಮಾತ್ರ ನಿರಾಶಾಭಾವನೆಯುಂಟಾಯಿತು. ಒಬ್ಬನು ಕಾಣಬೇಕೆಂದಿರುವ ನೋಟ ನೋಟವೇ ಆಗಿರದು ಎಂದೆನಿಸಿತು.

ಬರ್ಲಿನ್ ನಗರಕ್ಕೆ ನನ್ನ ಸಂಸಾರದೊಂದಿಗೆ ಬಂದಿಳಿದು. ವಿಶ್ವವಿದ್ಯಾನಿಲಯಕ್ಕೆ ಹೋದೆ. ನಾನು ಯಾವ ಶಾಸ್ತ್ರವನ್ನು ಪರಿಚಯ ಮಾಡಿಕೊಳ್ಳಬೇಕೆಂದು ಬಂದೆನೋ ಅದಕ್ಕೆ ದಾಖಲೆಯಾದೆ. ಹೀಗೆ ದಾಖಲೆಯಾದುದು ಸುಲಭವಾಯಿತು, ಉತ್ತಮವಾಯಿತು. ನನ್ನ ಸಂಸಾರವರ್ಗದವರನ್ನು ಬರ್ಲಿನ್ ನಗರದಲ್ಲಿ ದಾಖಲೆ ಮಾಡಿಸಲು ಅನೇಕವಿನ ಹಿಡಿಯಿತು. ಹೆಸರು ದಾಖಲೆ ಮಾಡಿಸಿ,ರಹದಾರಿಯನ್ನುಅವರ ವಶಕ್ಕೆಕೊಟ್ಟುವಿದ್ಯಾರ್ಥಿಪಟ್ಟಿಪಡೆದುಕೊಂಡೆ. ಅನಂತರ ಇತರರ ಹೆಸರನ್ನು ದಾಖಲೆಮಾಡಲು ಹತ್ತಿರವಿದ್ದ ಕಛೇರಿಗೆ ಹೋದೆ. ಅವರು ನನ್ನ ವಿದ್ಯಾರ್ಥಿಪಟ್ಟಿಯನ್ನು ಅಂಗೀಕರಿಸದೆ ಪುನಃ ರಹದಾರಿಯೇ ಬೇಕೆಂದು ಕೇಳಿದರು. ನನ್ನ ಸಂಸಾರವರ್ಗದವರನ್ನು ದಾಖಲೆಮಾಡಿಕೊಳ್ಳಲು ಅಧಿಕಾರಿಗಳು ವೃಥಾ ತೊಂದರೆಕೊಡುತ್ತಿದ್ದಾರೆಂದು ವಿಶ್ವವಿದ್ಯಾನಿಲಯದ ಅಧಿಕಾರಿಗಳಲ್ಲಿ ಹೇಳಿಕೊಂಡೆ. ನನ್ನ ಕಷ್ಟವನ್ನು ಮತ್ತು ಅಧಿಕಾರಿಗಳು ಕೊಡುತ್ತಿದ್ದ ವೃಥಾ ತೊಂದರೆಯನ್ನು ಕೇಳಿ ಕೆರಳಿದ ವಿಶ್ವವಿದ್ಯಾನಿಲಯದವರು "ಮೆದುಳಿಲ್ಲದ ಪೋಲಿಸರು" ಎಂದು ಕೂಗಾಡಿದರು. ಯೋಚಿಸಿ, ಕೊನೆಗೆ ಮುಗುಳುನಗೆ ನಕ್ಕು "ಅಮೆರಿಕದಲ್ಲಿ ನೀನು ಇಂತಹ ಮೆದುಳಿಲ್ಲದ ಜನರು ವೃಥಾ ತೊಂದರೆ ಕೊಟ್ಟದ್ದಲ್ಲಿ ಏನು ಮಾಡುತ್ತಿದ್ದೆ? ನೀನು ಹೋಗಿ ಅವರನ್ನು ಬೆದರಿಸಿ ಹೇಳು" ಎಂದು ಸೂಚಿಸಿದರು. ಈ ಸೂಚನೆಯಂತೆ ಪೋಲಿಸರನ್ನು ಪುನಃ ಕಂಡು ವರದಿಮಾಡಿದೆ. ಆಗ ವೃಥಾ ನನಗೆ ತೊಂದರೆ ಕೊಟ್ಟೆನೆಂದು ಪೋಲಿಸ ಅಧಿಕಾರಿ ಕ್ಷಮೆಯಾಚಿಸಿದ. ನನ್ನಲ್ಲಿ ರಹದಾರಿ ಇದೆಯೋ ಇಲ್ಲವೋ ಎಂದು ಖಚಿತವಾಗಿ ತಿಳಿಯುವುದಕ್ಕಾಗಿ ಅಲೆದಾಡಿಸಿದನೆಂದು ಪೋಲಿಸ ಅಧಿಕಾರಿ ಹೇಳಿಕೊಂಡ,

ದಾಖಲೆಯ ಕಷ್ಟ–ಪ್ರಕರಣ ಮುಗಿಯಿತು. ವಿಶ್ವವಿದ್ಯಾನಿಲಯದಲ್ಲಿ "ಪೆರಿಟೋನಿಯಮ್" ಎಂದರೆ ಉದರ ಪರಿವೇಷ್ಟನ ಪಟಲವನ್ನು ತಿಳಿಯಲು ಪ್ರಯತ್ನಿಸಿದೆ. ಅಂಜಿಕೆಯಿಂದಲೇ ಡಾ|| ಹಾನ್ಸ್‌ವಿರಚಾವ್ ಅವರನ್ನು ಕಂಡೆ. ಆಗ ಅವರು "ಪರಿವೇಷ್ಟನ ಪಟಲದ ಬಗ್ಗೆ ಯಾರೂ ಹೆಚ್ಚಿಗೆ ತಿಳಿದುಕೊಂಡಿಲ್ಲ. ಈ ಬಗ್ಗೆ ನೀನು ಪರಿಕ್ಷಿಸಬೇಕೆಂದಿರುವೆಯಾದರೆ, ನನ್ನಿಂದಾಗುವ

ಎಲ್ಲಾ ಸಹಾಯವನ್ನೂ ಮಾಡುವೆ" ಎಂದರು. "ಪರೀಕ್ಷೆ ಸುಲಭವಲ್ಲ. ಉದರದಲ್ಲೊಬ್ಬ ಇಪ್ಪತ್ತು ವರ್ಷ ಜೀವಿಸಿ, ತಾನು ಕಂಡ ಬಗೆಯನ್ನು ವಿವರಿಸಿದರೆ ಮಾತ್ರಾ ತಿಳಿಯಲು ಸಾಧ್ಯವೇ ವಿನಾ ಬರೀ ಶೋಧನೆಯಿಂದ ತಿಳಿಯಲು ಕಷ್ಟ" ಎಂದು ನುಡಿದರು. ಕಷ್ಟವೆಂದು ಈ ಪರೀಕ್ಷೆಯನ್ನು ನಾನು ಬಿಟ್ಟು ಬಿಡಲಿಲ್ಲ. ಡಾ|| ಹಾನ್ಸ್‌ರವರು ಸೂಚಿಸಿದಂತೆ ಪ್ರಯೋಗ ಪರೀಕ್ಷೆ ನಡೆಸಿದೆ.

ನನ್ನ ಈ ಪ್ರಯೋಗ ಪ್ರಯತ್ನದ ವೇಳೆಯಲ್ಲಿ ಡಾ|| ಹಾನ್ಸ್‌ರವರು ತೋರಿದ ಉದಾರಭಾವ ಅದ್ಭುತವಾದದ್ದು. ನನ್ನ ಕ್ಷೇಮಚಿಂತನೆಯನ್ನು ವಿದ್ಯಾಭ್ಯಾಸ ಪೂರೈಸುವವರೆಗೂ ಅವರೇ ನೋಡಿಕೊಳ್ಳುತ್ತಿದ್ದರು. ನನ್ನ ಕೆಲಸ, ಪ್ರಯೋಗ ಪ್ರಯತ್ನವನ್ನು ಕಟುವಾಗಿ ಟೀಕಿಸುವಷ್ಟು ಸಾಮರ್ಥ್ಯ ಅವರಿಗಿತ್ತು. ಆದರೆ, ಅವರು ಪ್ರಯತ್ನವನ್ನು ಟೀಕಿಸದೆ, ಹೆಚ್ಚು ಪ್ರೋತ್ಸಾಹಿಸುತ್ತಿದ್ದರು. ಒಂದುಸಾರಿ ಪ್ರತಿಕೂಲವಾಗಿ ಸಮಸ್ಯೆಯನ್ನು ಕುರಿತು ಆಡಿದಾಗ, "ಇನ್ನೊಬ್ಬ ನಿನ್ನ ಸಮಸ್ಯೆಗೆ ಏನು ಹೇಳುತ್ತಾನೆ ಎಂದು ತಿಳಿದುನೋಡು" ಎಂದರು. "ಉದರ ಪರಿವೇಷ್ಟನದಲ್ಲಿ ಕಾಣಿಸಿಕೊಳ್ಳುವ ಲೋಳೆಚರ್ಮ ಸ್ವಾಭಾವಿಕವಾದುದಲ್ಲ ಎಂದು ಕಂಡು ಹಿಡಿದಿರುವೆ; ನೀನು ಹೇಗೆ ಕಂಡುಕೊಂಡ ಬಗೆಯನ್ನು ವಿವರಿಸು" ಎಂದು ಕೇಳಿದರು. ನಾನವರಿಗೆ ಪೂರ್ಣವಾಗಿ ವಿವರಿಸಿ ಹೇಳಿದೆ. ನನ್ನ ಈ ಹೇಳಿಕೆಯನ್ನು ಡಾ|| ಹಾನ್ಸ್‌ರವರು ಒಪ್ಪಲಿಲ್ಲ. ಮೊಟ್ಟೆಯನ್ನೊಡೆದು, ಬೆಳ್ಳಿಯ ಲವಣದ್ರವ (Silver Nitrate)ದಲ್ಲದ್ದಿ ಲೋಳೆಮಾಡಿ ಅವರಿಗೆ ತೋರಿಸಿದೆ. ಆಗ ಅವರು, "ಈ ಲೋಳೆ ಕೃತಕನಿರ್ಮಿತ, ಸ್ವಾಭಾವಿಕವಾದುದಲ್ಲ" ಎಂದೊಪ್ಪಿಕೊಂಡರು. ಅಂದಿನಿಂದ ಲೋಳೆಚರ್ಮ ಎಂಬುದು ಬೇರೊಂದಿಲ್ಲ ಎಂದು ತೀರ್ಮಾನವಾಯಿತು.

ಡಾ|| ಹಾನ್ಸ್‌ರವರು ನನಗೆ ಅನೇಕ ವಿಷಯಸಮರ್ಥನ ವರದಿ ಪುಸ್ತಕಗಳನ್ನು ತಂದುಕೊಟ್ಟರು. ಹೀಗೆ ತಂದುಕೊಡುತ್ತಾ ವಿಶ್ವಾಸವನ್ನು ತೋರುತ್ತಿದ್ದರು. ಅವರಿಗೆ ಮಕ್ಕಳಿರಲಿಲ್ಲ. ನಾನು ಅವರಿಗೆ ಮಗನಂತಾಗಿದ್ದೆ. ನಾನು ಸದಾ ಓದಿನಲ್ಲಿ ಮತ್ತು ಕೆಲಸದಲ್ಲಿದ್ದುದನ್ನು ನೋಡಿ ಅವರು ಮೆಚ್ಚುಗೊಂಡಿದ್ದರಲ್ಲದೆ ಅವರ ಸ್ನೇಹಿತರೊಂದಿಗೆ ಹೇಳಿಕೊಳ್ಳುತ್ತಿದ್ದರು. ವಿದ್ಯಾ ಗುರುಗಳು ನನ್ನಮೇಲೆ ಇಷ್ಟು ಅಭಿಮಾನವಿಟ್ಟು ಹೇಳಿಕೊಳ್ಳುತ್ತಿದ್ದುದು ನಿಜವಾಗಿ ನನಗೆ ಹೆಮ್ಮೆಯಾಗಿತ್ತು. ಜರ್ಮನಿ ಭಾಷೆಯಲ್ಲಿ ವಿಷಯ ಸಮರ್ಥನೆ

ಯನ್ನು ಕುರಿತು ನಾನು ಯಾವ ವರದಿಯನ್ನೂ ಪ್ರಕಟಿಸಲಿಲ್ಲ. ಹೀಗೆ ಪ್ರಕಟಿಸಿದ್ದಲ್ಲಿ ನನ್ನ ವಿದ್ಯಾಗುರುಗಳಿಗೆ ಎಷ್ಟೋ ಆನಂದವೆನಿಸುತ್ತಿತ್ತು. ಗುರುಗಳು ತೋರಿದ ಪ್ರೀತಿ ಪುರಸ್ಕಾರಕ್ಕೆ ಬದಲಾಗಿ ನಾನು• ವಿಷಯಸಮರ್ಥನೆಯನ್ನು ಪ್ರಕಟಿಸಿ ಅವರನ್ನು ಸಂತೋಷಗೊಳಿಸಬಹುದಾಗಿತ್ತು. "ನಿನ್ನ ಸಮರ್ಥನೆ ನಿಜವೆ?" ಎಂದು ಸದಾ ಅವರು ಕೇಳುತ್ತಿದ್ದುದು ನನ್ನ ನೆನಪಿನಲ್ಲಿ ಇನ್ನೂ ಇದೆ.

ವಿದ್ಯಾಭ್ಯಾಸ ಮುಗಿಸಿ ಮನೆಗೆ ಬಂದಮೇಲೂ ನಾನು ಪರಿವೇಷ್ಟನ ಪಟಲ ಶೋಧನೆಯನ್ನು ಬಿಡಲಿಲ್ಲ. ವೈದ್ಯವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದೆ. ಆದರೂ ನನ್ನ ಶೋಧನೆಯನ್ನು ಮುಂದುವರಿಸುತ್ತಿದ್ದೆ. ವೈದ್ಯಾಲಯದಲ್ಲಿ ಕೆಲಸ ಹೆಚ್ಚಾಗಿದ್ದಾಗಲೂ ಈ ಶೋಧನೆಯ ವಿಚಾರವನ್ನು ಬಿಡದೆ ನೆನೆಯುತ್ತಿದ್ದೆ. ಇಪ್ಪತ್ತು ವರ್ಷ ಸತತ ಶೋಧನೆಯ ಫಲವಾಗಿ ಎರಡು ಗ್ರಂಥ ಸಿದ್ಧವಾಯಿತು. ವೃದ್ಧ ಗುರುಗಳ ಹಿತವಚನದಂತೆ ನನ್ನ ಪರಿವೇಷ್ಟನಪಟಲ ಗ್ರಂಥವನ್ನು ಅಚ್ಚುಮಾಡಿದೆ. ನನ್ನ ಗುರುಗಳ ನೆಚ್ಚಿಗೆಗೆ ಈ ಗ್ರಂಥ ಸರಿತೂಗದಿದ್ದರೂ ಅವರ ಪ್ರೋತ್ಸಾಹ, ಮತ್ತು ಆಶಾಭಾವದಿಂದ ನಾನು ಈ ಗ್ರಂಥ ಬರೆದು ಮುಗಿಸಿದೆ.

ಅಂಗರಚನಾ ಶಾಸ್ತ್ರವನ್ನು ಹೆಚ್ಚಿಗೆ ತಿಳಿಯಲು ನಾನು ನಿತ್ಯ ಎರಡು ಗಂಟೆಯ ಕಾಲ ಎರಡುವರ್ಷ ವಾಲ್ಡರ್‌ರವರ ಭಾಷಣವನ್ನು ಕೇಳಿದೆ. ವಾಲ್ಡರ್ ಅಂಗರಚನಾ ಶಾಸ್ತ್ರವನ್ನು ಚನ್ನಾಗಿಬಲ್ಲ ವಿದ್ವಾಂಸರಾಗಿದ್ದರು. ನೇರವಾಗಿ ಇವರು ನಮ್ಮನ್ನು ಶರೀರವನ್ನು ಕೊಯ್ದು ಸೂಕ್ಷ್ಮವಾಗಿ ಪರೀಕ್ಷಿಸುವ ಭಾಗಕ್ಕೆ ಕರದೊಯ್ಯುತ್ತಿದ್ದರು. ಅಲ್ಲಿ, ಶರೀರದ ಒಳಪದರಗಳು ಯಾವುವು ಎಂದು ತೋರುತ್ತಿದ್ದರು. ಒಂದೊಂದು ಅಂಗಕ್ಕೂ ಇರುವ ಸಂಬಂಧವನ್ನು ಚೆನ್ನಾಗಿ ನಾವು ತಿಳಿಯುವಂತೆ ತೋರುತ್ತಿದ್ದರಲ್ಲದೆ, ತಡೆಯಿಲ್ಲದೆ ಆ ಹೆಸರುಗಳನ್ನು ನೆನೆಪಿನಲ್ಲಿಟ್ಟುಕೊಳ್ಳುವಂತೆ ಹೇಳುತ್ತಿದ್ದರು. ಶಸ್ತ್ರವೈದ್ಯ, ಅಂಗಾಂಗ ಬೇಧವನ್ನು ಚೆನ್ನಾಗಿ ಮನದಟ್ಟುಮಾಡಿಕೊಳ್ಳದಿದ್ದಲ್ಲಿ, ಶಸ್ತ್ರಕ್ರಿಯೆ ನಡೆಸಿದಾವ ನಂತರ ಮುಂದೇನಾಗುವುದು ಎಂದು ಆಂತಕಪಡಬೇಕಾಗುವುದು ಎಂದು ಒತ್ತಿ ಒತ್ತಿ ಹೇಳುತ್ತಿದ್ದರು. ಈ ಹಿತವಚನ ಶಸ್ತ್ರವೈದ್ಯನಿಗೆ ಹೇಳಬೇಕಾದುದೇ ನಿಜ. ಕ್ರಿಯೆ ಸಿಧಾನವಾದಲ್ಲಿ ಪ್ರಯೋಜನಕ್ಕೆ ಬಾರದೆ ಸಂಪರ್ಕದೋಷಕ್ಕೆ

ಕಾರಣವಾಗುವುದುಂಟು.—ಒಬ್ಬ ಪರಿಣಿತ ಶಸ್ತ್ರವೈದ್ಯ, ದೊಡ್ಡ ಕರುಳಿನ ಆದಿ ಭಾಗವನ್ನು ಗುರುತಿಸಲು ಸುಮಾರು ಹದಿನೈದು ನಿಮಿಷ ಕಾಲಕಳೆದ. ಈ ವೈದ್ಯ ಹೃದಯದ ದೊಡ್ಡ ರಕ್ತನಾಳವನ್ನು ಹುಡುಕುತ್ತಿರುವನೋ ಎನ್ನುವಂತೆ ಹುಡುಕಾಡುತ್ತಿದ್ದ.

ಶರೀರಲಕ್ಷಣಶಾಸ್ತ್ರವನ್ನು ಸಾಕ್ಷಾತ್ತಾಗಿ ನೋಡಿ ತಿಳಿಯುವ ಕ್ರಿಯಾ ವಿಧಾನದೊಡನೆ ಬರ್ಲಿನ್ ನಗರದ ವಿಶ್ವವಿದ್ಯಾನಿಲಯದಲ್ಲಿ ಕಲಿಸುತ್ತಿದ್ದರು. ಈ ವಿಧಾನವನ್ನು ಉಪೇಕ್ಷಿಸಕೂಡದೆಂದು ಹೆಚ್ಚು ಹೆಚ್ಚಾಗಿ ಒತ್ತಿ ಹೇಳಿಕೊಡು ತ್ತಿದ್ದರು. ವೈದ್ಯನ ವೃತ್ತಿವ್ಯವಹಾರಿಕದಲ್ಲಿ ಇದು ಮೊಟ್ಟಮೊದಲನೆಯದು ಎಂದು ಹೇಳುತ್ತಿದ್ದರು. ವೈದ್ಯ ಬರೀ ವ್ಯವಹಾರ ದೃಷ್ಟಿಯಲ್ಲಿಯೇ ಎಲ್ಲವನ್ನೂ ನೋಡಬಾರದೆಂದು ಹೇಳುತ್ತಿದ್ದರು. ನಾನು ತೋಳಿನ ಪ್ರತಿ ನರಸ್ಥಾನವನ್ನೂ ಬಿಡಿಸಿ ಸೂಕ್ಷ್ಮ ವಿವರವನ್ನೆಲ್ಲಾ ತಿಳಿದುಕೊಂಡೆ. ವಿವರವೆಲ್ಲಾ ತಿಳಿದಿದೆ ಯೆಂಬ ನಂಬಿಕೆಯಿಂದ ವಿದ್ವಾಂಸರಾದ ವಾಲ್ಡರ್ ಅವರಿಗೆ ತೋರಿಸಲು ನಿಂತೆ. ಅವರು ನನ್ನ ವಿವರವನ್ನೆಲ್ಲಾ ಕೇಳಿ, ಕೈಯಾಡಿಸಿ, "ನೀನು ಸೂಕ್ಷ್ಮ ನರ ಗಳನ್ನು ಬಿಡಿಸಿ ವಿವರ ತಿಳಿದಿದ್ದೀಯೆ. ಇದು ಶಾಸ್ತ್ರಾಭ್ಯಾಸಕನಿಗೆ ಪರಿಚಯು ವಾಗಿರಲೇಬೇಕು. ಕುಶಲ ಶಸ್ತ್ರವೈದ್ಯ, ಗೋಚರವಾಗದೆಯಿರುವ ಅತಿಸೂಕ್ಷ್ಮ ವಾಗಿರುವ ಮುಖ್ಯ ನರಗಳನ್ನು ಕಂಡುಹಿಡಿದು, ಬಿಚ್ಚಿ ಪರೀಕ್ಷಿಸಬೇಕು" ಎಂದು ಸಲಹೆಯಿತ್ತರು. ಅನುಕಂಪನದ ನರಲಕ್ಷಣ ವಿವರವನ್ನು ತಿಳಿಯಲು ನಾನು ಅವರ ಸಹಾಯಬೇಡಿದೆ. ಅಂಗವನ್ನು ಛೇದಿಸಿ ತಿಳಿ ಎಂದವರು ಸಲಹೆಯಿತ್ತರು.

ಮೂಲಭೂತ ವೈದ್ಯಶಾಸ್ತ್ರ ಲಕ್ಷಣವನ್ನು ಬರ್ಲಿನ್ ನಗರದಲ್ಲಿ ಅಭ್ಯಾಸ ಮಾಡುತ್ತಿದ್ದಾಗ, ನಾನು ಅನೇಕ ಪ್ರಯೋಗ ಶಿಕ್ಷಣಾಲಯವನ್ನು ನೋಡಿಬಂದೆ. ಕಣ್ಣುಬೇನೆ ಶಾಖೆಯ ವಿನಾ ಮಿಕ್ಕೆಲ್ಲಾ ವೈದ್ಯಶಾಸ್ತ್ರ ಶಾಖೆಯನ್ನು ನೋಡಿ ಬಂದೆ. ವೈದ್ಯಶಾಸ್ತ್ರಕ್ಕೆ ಸಂಬಂಧಪಟ್ಟ ಎಲ್ಲಾ ವಿವರಗಳನ್ನು ತಿಳಿದುಕೊಳ್ಳ ಬೇಕೆಂಬ ಆಶಯ ನನ್ನದಾಗಿತ್ತು. ಮುಂದೆ ಆಮೂಲಾಗ್ರವಾಗಿ ಧರ್ಮ ಚಾರಿತ್ರ್ಯವನ್ನು ಹೆಚ್ಚು ತಿಳಿಯಬೇಕೆಂದು ಯೋಚಿಸುತ್ತಿದ್ದೆ. ಅಧ್ಯಯನ ಕಾಲ ದಲ್ಲಿ ಶಸ್ತ್ರಕ್ರಿಯೆಗೆ ಸಂಬಂಧಪಡದ ಕೆಲಸವನ್ನೂ ತಿಳಿಯಲು ಪ್ರಯತ್ನಿಸಿದೆ. ಉದಾಹರಣೆಗೆ—ಕನ್ನಡಿಯನ್ನು (ಸುಲೋಚನದ) ಜೋಡಿಸಿ ಸರಿಪಡಿಸಿಕೊಡು

ವುದು ನನ್ನಿಂದಾಯಿತು. ಇದು ಶಸ್ತ್ರಕ್ರಿಯೆಗೆ ಸಂಬಂಧಪಡದ ಕೆಲಸವೆ. ಆದರೇನು ? ಕಣ್ಣು ಮತ್ತು ಅದರ ರಕ್ಷಣೆಯ ಭಾಗದ ಅನುಭವ ನನಗೆ ದೊರೆ ತಂತಾಯಿತು. ಥಳಥಳಿಸುವ ಸುಲೋಚನವನ್ನು ಧರಿಸುವ ಮಹಿಳೆಯ ಕಣ್ಣು ಚೆನ್ನಾಗಿ ಕಾಣುವುದೆಂದು ತಿಳಿದು ಆಕೆ ಶಸ್ತ್ರಕ್ರಿಯೆಗೆ ಗುರಿಯಾಗಬೇಕಿಲ್ಲವೆಂದು ನಾವು ನಿರ್ಧರಿಸುತ್ತೇವೆ. ವೈದ್ಯವಿದ್ಯಾಭ್ಯಾಸಕಾಲದಲ್ಲಿ ಹೀಗೆ ನಾನು ಮೂಗು, ಗಂಟಲು ಈ ಭಾಗಗಳ ಹೆಚ್ಚಿಗೆ ವಿವರ ತಿಳಿಯಲು ಪ್ರಯತ್ನಿಸಿದೆ. ಶಸ್ತ್ರಕ್ರಿಯೆ ನಡೆಸಿ ಹೆಚ್ಚಿನ ಅನುಭವ ಪಡೆದೆ.

ಮೂಗು ಮತ್ತು ಗಂಟಲು ಈ ಭಾಗದ ಹೆಚ್ಚು ವಿವರ ತಿಳಿಯಲು ನಾನು ಮತ್ತು ನನ್ನ ಸ್ನೇಹಿತ ಪ್ರಸಿದ್ಧ ವಿದ್ವಾಂಸರಾದ ಜಾನ್ಸರ್ ಅವರ ಬಳಿಗೆ ಹೋದೆವು. ಶಸ್ತ್ರವೈದ್ಯನಿಗೆ ಎಲ್ಲಾ ಬಗೆಯ ಶಸ್ತ್ರಕ್ರಿಯೆ ತಿಳಿದಿರಬೇಕೆಂದು, ನಾವು ನಲವತ್ತು ವಿದ್ಯಾರ್ಥಿಗಳು ಜಾನ್ಸರ್ ಅವರ ಬಳಿಗೆ ಕಲಿಯಲು ನಿಂತೆವು. ನನಗಾಗಲೀ ಮತ್ತು ನನ್ನ ಸ್ನೇಹಿತನಿಗಾಗಲೀ ಮೂಗು ಮತ್ತು ಗಂಟಲು ಚಿಕಿತ್ಸೆಯ ಬಗ್ಗೆ ಹೆಚ್ಚು ಪರಿಚಯವಿರಲಿಲ್ಲ. ಉಳಿದ ವಿದ್ಯಾರ್ಥಿಗಳೆಲ್ಲಾ ಈ ಭಾಗವನ್ನು ಕಲಿತು ಪರಿಣಿತರಾಗಿದ್ದರು. ವಿದ್ವಾಂಸ ಜಾನ್ಸರ್ ಅವರು ಪ್ರಯೋಗಿಸುತ್ತಿದ್ದ ತಂತ್ರವೇ ವಿಶೇಷವಾಗಿತ್ತು. ಅವರ ಮಾದರಿಯಂತೆ ಶಸ್ತ್ರಕ್ರಿಯೆಯನ್ನು ಯಾರೂ ಮಾಡುತ್ತಿರಲಿಲ್ಲ. ಹೆಚ್ಚು ಅನುಭವ ಪಡೆಯಲು ನಾವು ಉಪಕರಣದೊಂದಿಗೆ ಹೆಣವಿಡುತ್ತಿದ್ದ ಗೂಡಿನ ಬಳಿಗೆ ಹೋಗಿ, ಗಲಗಂಥಿಯನ್ನು ತಿಳಿಯಲು ಶಸ್ತ್ರಕ್ರಿಯೆ ಮಾಡಿದೆವು. ಹೀಗೆ ಅನೇಕ ಶಸ್ತ್ರಕ್ರಿಯೆ ಮುಗಿಸಿ ಕೈಕುದುರಿಸಿಕೊಂಡೆವು. ಕುದುರಿದ ಕೈ, ಶಸ್ತ್ರಕ್ರಿಯೆಗೆ ಅನುಕೂಲವಾಯಿತು. ಆಗ ನಮಗೆ ಹೆದರಲು ಕಾರಣವೇ ಇರುತ್ತಿರಲಿಲ್ಲ. ವಿದ್ವಾಂಸರ ನೆರವು ಈ ಸಮಯದಲ್ಲಿ ನಮಗೆ ಬೇಕಾಗಿಯೂ ಇರಲಿಲ್ಲ. ನಮ್ಮ ಕೈಚಳಕ ನೋಡಿದ ಜಾನ್ಸನ್‌ರವರು, "ಶಸ್ತ್ರಕ್ರಿಯೆ ನಿಮಗೆ ಹಸ್ತಗತವಾಗಿದೆ" ಎಂದು ನಮ್ಮನ್ನು ಹೊಗಳಿದರು. "ಬೇರೆ ಬೇರೆ ರೀತಿಯಲ್ಲಿ ನೀವು ಶಸ್ತ್ರಕ್ರಿಯೆ ಮಾಡಬೇಕಾದುದಿಲ್ಲ, ಬದಲಾಗಿ ಕಂಠನಾಳ ಶೋಧಿಸಿರಿ" ಎಂದು ಸೂಚಿಸಿದರು. ಆದರೆ ಶಸ್ತ್ರಕ್ರಿಯೆಯನ್ನು ನಾವು ಕರಗತ ಮಾಡಿಕೊಂಡ ಬಗೆಯನ್ನು ಮಾತ್ರ ಯಾರಿಗೂ ವಿವರಿಸಲಿಲ್ಲ.

ಎದೆಯ ಬೇನೆಗೆ ಪರಿಹಾರಮಾರ್ಗ ತಿಳಿಯಲು ವೈದ್ಯ ಬರ್ಗ್ ಅವರ ಬಳಿ ನಿತ್ಯ ಎರಡು ಗಂಟೆಯಂತೆ ಒಂದುವರ್ಷ ಅಭ್ಯಾಸಮಾಡಿದೆ. ಡಾ|| ಬರ್ಗ್ ಅವರು ಎದೆಯ ಬೇನೆಗೆ ಪರಿಹಾರಮಾರ್ಗವನ್ನು ಚೆನ್ನಾಗಿ ಕಂಡು ಕೊಂಡಿದ್ದರು. ಮುಂದೆ ಪೂರ್ಣವೈದ್ಯನೆಂದೆನಿಸಿಕೊಳ್ಳುವೆ, ಆಗ ನನಗೆ ಎಲ್ಲಾ ಚಿಕಿತ್ಸೆಯೂ ಗೊತ್ತಿದ್ದಿರಬೇಕು, ಅಭ್ಯಾಸಕಾಲದಲ್ಲಿ ಕಲಿಯುವುದನ್ನೆಲ್ಲಾ ಕಲಿ ತಿರಬೇಕೆಂದು ನಾನು ಮುಂದುವರಿಯುತ್ತಿದ್ದೆ. ಶ್ವಾಸಕೋಶಕ್ಕೆ ಸಂಬಂಧಿಸಿದ ಬೇನೆಯನ್ನೂ ತಿಳಿದೆ. ಈ ಅಭ್ಯಾಸದಿಂದ ಮುಂದೆ ಶ್ವಾಸಕೋಶದಲ್ಲಿ ಕಾಣಿಸಿ ಕೊಳ್ಳುವ ಕುರುವನ್ನು ವಾಸಿಮಾಡಲು ನನಗನುಕೂಲವಾಯಿತು.

ಒಬ್ಬನು ಎಲ್ಲಾ ಬಗೆಯ ಅಭ್ಯಾಸಕ್ರಮವನ್ನು ಅನುಸರಿಸಿ ತಿಳಿಯ ಬಹುದು. ಎಲ್ಲಿ ತಿಳಿಯಬೇಕು ? ಹೇಗೆ ತಿಳಿಯಬೇಕು ? ಯಾರನ್ನು ಆಶ್ರ ಯಿಸಬೇಕು ಎಂಬುದನ್ನು ಮಾತ್ರ ಗೊತ್ತುಮಾಡಿಕೊಳ್ಳಬೇಕು. ತರುಣ ವೈದ್ಯ ವಿದ್ವಾಂಸರನೇಕರು ವಿಶ್ವವಿದ್ಯಾನಿಲಯದಲ್ಲಿ ಬೋಧಿಸುತ್ತಿದ್ದರಲ್ಲದೆ, ಖಾಸಗಿ ಬೋಧನೆಗೂ ಒಪ್ಪಿಕೊಂಡಿದ್ದರು. ಖಾಸಗೀ ಬೋಧನೆಗೆ ತಲಾ ತಿಂಗಳಿಗೆ ಐವತ್ತು ಮಾರ್ಕ್ (Mark) ಮೌಲ್ಯವನ್ನು ಸಲ್ಲಿಸಬೇಕಾಗಿತ್ತು. ಖಾಸಗೀ ಬೋಧನೆಗೆ ಹತ್ತುಜನ ವಿದ್ಯಾರ್ಥಿಗಳು ಕೊಡಬಹುದಾದ ಐನೂರು ಮಾರ್ಕ್, ಜರ್‌ಹರ್ಟ್ ಖಾಸಗೀ ವಿದ್ಯಾಲಯದಲ್ಲಿ ಪಾವತಿಮಾಡಿ ನಾವಿಬ್ಬರೇ ತರಬೇತಿ ಪಡೆಯಲು ಸೇರಿಕೊಂಡೆವು. ಆಗ ನಮಗಲ್ಲಿ ರೋಗಿಗಳನ್ನು ಪರೀಕ್ಷಿಸಿ ತಿಳಿದು ಕೊಳ್ಳಲು ಅನುಕೂಲವಾಯಿತು. ಶವಪರೀಕ್ಷಣದಿಂದ ಎದೆಗೆ ಸಂಬಂಧಿಸಿದ ಹೆಚ್ಚು ವಿಷಯಗಳನ್ನು ತಿಳಿದುಕೊಂಡೆವು.

ನನಗೆ ಹೆಚ್ಚು ಹೆಚ್ಚಾಗಿ ಜರ್ಮನ್ ವೈದ್ಯ ವಿದ್ವಾಂಸರ ನೆರವು ಸಿಕ್ಕಿತಲ್ಲದೆ, ನನ್ನಂತಹ ಬಡ ವಿದ್ಯಾರ್ಥಿಗೆ ಎಲ್ಲಿಯೂ ಸಿಗದ ಪ್ರೋತ್ಸಾಹವೂ ಸಿಕ್ಕಿತು. ಕಲಿಯಬೇಕೆನ್ನುವವರಿಗೆ ಅವರು ಹೆಚ್ಚು ಪ್ರೀತಿಯಿಂದ ಹೇಳಿಕೊಡುತ್ತಿದ್ದರು. ಪ್ರಾಯೋಗಿಕ ಶಾಲೆಯ ಖರ್ಚಿಗಾಗಿ ನಾವು ಅರವತ್ತು ಮಾರ್ಕ್ ಕೊಡು ತ್ತಿದ್ದೆವು.

ವಿದ್ಯಾರ್ಜನೆಯ ಅಂತ್ಯದಲ್ಲಿ ವೈದ್ಯ ವಾಲ್ಡರ್, ನನ್ನನ್ನು ಶರೀರಲಕ್ಷಣ ಶಾಸ್ತ್ರದ ಸಹೋಪಾಧ್ಯಾಯನಾಗಿ ನಿಲ್ಲು ಎಂದು ಹೇಳಿದರು. ವೈದ್ಯ ವಿರ್‌ಚಾವ್ ಅವರು, "ನಿನಗೆ ವೈದ್ಯ ಉದ್ಯೋಗ ಬೇಡ, ಮುಂದೆಯೂ ಪ್ರಾಯೋಗಿಕ

ನಾಗಿಯೇ ಏಕೆ ನಿಲ್ಲಬಾರದು ?" ಎಂದು ದಾರಿ ತೋರಿಕೊಟ್ಟರು. "ಹೆಚ್ಚು ಬುದ್ಧಿಶಕ್ತಿ ಮತ್ತು ಗ್ರಹಿಸಲು ಸಾಮರ್ಥ್ಯವಿರುವವನು ರೋಗಿಗಳ ರಕ್ಷಣೆ ನೋಡುತ್ತಾ ಕಾಲಕಳೆಯಬಾರದು. ಅವನು ಎಷ್ಟೇ ಎಚ್ಚರಿಕೆಯಿಂದ ಪರಿಹಾರ ಮಾರ್ಗ ಸೂಚಿಸಿದರೂ ರೋಗಿ ಸಾಯುವುದು ಖಂಡಿತ. ಇಲ್ಲಿ ಸತ್ಯವೇ ಅಮರವಾದದ್ದು !" ಎಂದು ನುಡಿದರು.

ಬರ್ಲಿನ್ ನಗರದಲ್ಲಿ ನಾನು ಅನೇಕ ಪ್ರಸಿದ್ಧ ವೈದ್ಯರನ್ನು ಭೇಟಿಮಾಡಿದೆ. ಗ್ರಂಥದಲ್ಲಿ ಹೇಳಿರುವಷ್ಟನ್ನೇ ಅವರು ನುಡಿಯುತ್ತಿದ್ದರು. ಆದರೆ ಉತ್ತೇಜನ ಮತ್ತು ವ್ಯಕ್ತಿತ್ವವನ್ನು ತೋರುವಂತಹವರು ಕಾಣುತ್ತಿರಲಿಲ್ಲ. ಪ್ರಸಿದ್ಧ ವೈದ್ಯರ ವಯಸ್ಸು ಅರವತ್ತು ಅಥವಾ ಎಪ್ಪತ್ತು ಮೀರಿತ್ತು. ವಯಸ್ಸು ಮೀರಿದ್ದರೇನು ? ಅವರ ಚೇತನವೇ ನಮಗೆ ಸ್ಫೂರ್ತಿ ತರುವಂತಿತ್ತು. ವೈದ್ಯ ವಾಲ್ಡರ್, ಶರೀರಲಕ್ಷಣ ಶಾಸ್ತ್ರವನ್ನು ಕೊನೆಮೊದಲಿಲ್ಲದೆ ಅಭ್ಯಾಸಮಾಡುತ್ತಿದ್ದರು. ವೈದ್ಯ ಲಿಟ್ಟನ್ ಅವರು, ರಕ್ತಕಣಗಳು ಹೇಗೆ ರೂಪುಗೊಳ್ಳುವುವು ಎಂದು ತಿಳಿಯಲು ಶ್ರಮಿಸುತ್ತಿದ್ದರು. ಎಂಬತ್ತು ವರ್ಷದ ವೈದ್ಯ ವಿರ್‌ಚಾವ್ ಅವರು, ಹೊತ್ತು ಮೂಡುವುದಕ್ಕೆ ಮುಂಚೆಯೇ ಪ್ರಯೋಗಶಾಲೆಗೆ ಬಂದು, ಎಲ್ಲಾ ಮಾದರಿಗಳಿಗೆ ತಮ್ಮ ಕೈಯಿಂದಲೇ ಗುರುತಿನ ಚೀಟಿ ಅಂಟಿಸಿ, ಪ್ರಯೋಗಕ್ಕೆ ಸಿದ್ಧಪಡಿಸಿಕೊಡುತ್ತಿದ್ದರು. ಈ ವೃದ್ಧವೈದ್ಯರ ಪೂರ್ಣಚೇತನ ಎಲ್ಲರಿಗೂ ಸ್ಫೂರ್ತಿಧಾಯಕವಾಗಿಯೇ ಇತ್ತು ಎನ್ನುವುದರಲ್ಲಿ ಸಂಶಯವೇ ಇರಲಿಲ್ಲ. ಸಾಯುವವರೆವಿಗೂ ದುಡಿಯುವುದೇ ನನ್ನ ಕೆಲಸ ಎಂಬ ನಿಶ್ಚಯವನ್ನು ಅವರು ತೋರುತ್ತಿದ್ದರು. ಸಂಶೋಧನೆಯಲ್ಲಿ ಒಬ್ಬನಿಗೆ ಎಷ್ಟು ಶಕ್ತಿಯಿತ್ತು, ಆಸಕ್ತಿಯಿತ್ತು ಎಂಬುದನ್ನು ಇದು ತೋರಿಸಿಕೊಡುವುದು. ಒಮ್ಮೆ ನಾನು ಉದ್ರೇಕಗೊಂಡ ನಾಳಕ್ಕೆ (ಇಂಜೆಕ್ಷನ್ ಮಾಡಲು) ಸೂಜಿಮದ್ದು ಕೊಡುತ್ತಿದ್ದೆ. ಆಗ ವಿದ್ವಾಂಸ ಹಾನ್ಸ್‌ವಿರ್‌ಚಾವ್ ಅವರು "ಕಲಿಯಲು ಅಥವಾ ತಿಳಿಯಲು ಯಾರು ಶ್ರಮಿಸುವುದಿಲ್ಲವೋ, ಬೆವರು ಸುರಿಸುವುದಿಲ್ಲವೋ ಅವರು ಏನನ್ನೂ ಕಲಿಯುವುದಿಲ್ಲ, ಸಾಧಿಸಿದಂತಾಗುವುದೂ ಇಲ್ಲ" ಎಂದು ಹೇಳಿದರು.

ಪದವೀಧರನಾಗಲು ನಾನು ಎರಡುವರ್ಷಕಾಲ ದುಡಿದು ಮನೆಗೆಬಂದೆ. ಹತ್ತು ವರ್ಷಕಾಲ ವೈದ್ಯ ಶಾಸ್ತ್ರಾಭ್ಯಾಸ ಮಾಡಿದೆ. ಮೊದಲು ವಿಶ್ವವಿದ್ಯಾನಿಲಯದಲ್ಲಿ ನಾಲ್ಕು ವರ್ಷ, ಬಳಿಕ ನಗರದ ಪ್ರಾಯೋಗಿಕ ಶಾಲೆಯಲ್ಲಿ ನಾಲ್ಕು

ವರ್ಷ, ಮತ್ತೆ ಬರ್ಲಿನ್ ನಗರದಲ್ಲಿ ಎರಡು ವರ್ಷಕಾಲ ಕಲಿತುಬಂದೆ. ಕಲಿತು "ಆಶೋಕ್ತಿಯುಳ್ಳ ತರುಣ" ಎಂದೆನಿಸಿಕೊಂಡೆ. ಶಸ್ತ್ರವೈದ್ಯನಾಗಬೇಕು ಎಂಬುದೇ ನನ್ನ ಹಂಬಲವಾಗಿತ್ತು. ಈ ದೃಷ್ಟಿಯೇ ಬೇರೆ ಎಂದು ತಿಳಿದು ಕೊಂಡಿದ್ದ ನನಗೆ, ಕಲಿಯಲು ಇನ್ನೂ ಬೇಕಾದಷ್ಟು ಅಂಶವಿತ್ತು. ಪುಸ್ತಕ, ಪತ್ರವ್ಯವಹಾರ ಶಿಕ್ಷಣಮಾರ್ಗ ಬೇಕಾದಷ್ಟಿತ್ತು. ವಿದ್ಯಾರ್ಜನೆಗೆ ಕೊನೆಮೊದ ಲಿಲ್ಲ? ವಿದ್ಯಾರ್ಜನೆಗೂ ಸಂಪಾದನೆಗೂ ನಾನೇ ದಾರಿ ಕಂಡುಕೊಳ್ಳಬೇಕಾ ಯಿತು.

೮

ವೈದ್ಯಪದವಿಯನ್ನು ಗಳಿಸಲು ನಾವು ಶಾಲೆ ಅಥವಾ ವೈದ್ಯ ಸಂಸ್ಥೆಗೆ ಸೇರಿ ಕೊಳ್ಳುತ್ತೇವೆ. ಒಂದು ವೈದ್ಯ ಸಂಸ್ಥೆಯಲ್ಲಿ ಪದವಿ ಗಳಿಸಿಕೊಂಡ ಪದವೀಧರ, ಅಭ್ಯಾಸ ಮುಂದುವರಿಸಲು ಬೇರೆಕಡೆಗೆ ಹೋಗುತ್ತಾನೆ. ಹೀಗೆ ಅಭ್ಯಾಸ ಮುಂದುವರಿಸುವ ಹೊಣೆ ಅವನದೇ ಆಗಿರುತ್ತದೆ. ಹೆಚ್ಚುದಿನ ಅಥವಾ ತಿಂಗಳೋ ಹೀಗೆ ಕಲಿಯಲು ನಿಂತ ವೈದ್ಯವಿದ್ಯಾರ್ಥಿಯನ್ನು ವೃತ್ತಪತ್ರಿಕೆಯವರು "ಸಂಶೋಧಕರು" ಎಂದು ಕರೆದು ಪ್ರಚಾರ ಮಾಡುತ್ತಾರೆ. ನನ್ನ ಸ್ನೇಹಿತ ನೊಬ್ಬ ವೈದ್ಯಾನುಭವ ಪಡೆಯಲು ವ್ಯೈನ್ ಉಡ್ಸ್ ಎಂಬಲ್ಲಿ ಮೂರು ವಾರ ನಿಂತನಲ್ಲದೆ, ತನ್ನ ಊರಿಗೆ ಹಿಂತಿರುಗುವುದಕ್ಕೆ ಮೊದಲು ನ್ಯೂಯಾರ್ಕ್ ನಗರದಲ್ಲಿ ಒಂದು ವಾರವಿದ್ದು ಬಂದ. ಇವನೂ "ಸಂಶೋಧನೆ"ಗಾಗಿ ನಿಂತ ಎಂದು ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟವಾಯಿತು. ಮೊದಲು ಕಲಿಯುವು ದಕ್ಕೂ, ಪದವಿ ಪಡೆದಮೇಲೆ ಮುಂದುವರಿಸುವ ಅಭ್ಯಾಸಕ್ಕೂ ಬಹಳ ವ್ಯತ್ಯಾಸ ವಿದೆ. ಪದವಿ ಪಡೆದುಕೊಂಡ ವೈದ್ಯನಿಗೆ ಎಲ್ಲಾ ಬಗೆಯ ವೈದ್ಯಕೀಯ ಬಗೆ ಯನ್ನು ತಿಳಿಯಲು ಅವಕಾಶವಿದೆ. ಹೀಗೆ ವೈದ್ಯಾನುಭವ ಪಡೆಯಲು ಅವನು ಅನುಕೂಲವಿದ್ದ ಕಡೆ ಹೋಗಿ ಸೇರಿಕೊಳ್ಳಬಹುದು.

ತರಬೇತಿ ಹೊಂದಿದ ಶಸ್ತ್ರವೈದ್ಯ, ಹೆಚ್ಚಿಗೆ ಅನುಭವಪಡೆಯಲು ಅಥವಾ ವಿಶೇಷ ಶಿಕ್ಷಣ ಪಡೆಯಲು ಹೀಗೆ ಮುಂದುವರಿಯುತ್ತಾನೆಂದು ತಿಳಿಯುವಾ. ಕಾಲೇಜು ಅಥವಾ ವಿದ್ಯಾಸಂಸ್ಥೆಯಲ್ಲಿ ಕೆಲಸಮಾಡತಕ್ಕ ಅಧ್ಯಾಪಕರ ಪೈಕಿ ಕೆಲವರಾದರೂ ತತ್ವಜ್ಞಾನ ಪಂಡಿತರಿರುತ್ತಾರೆ. ಒಂದು ಕಾಲೇಜು ಇನ್ನೊಂದು ವಿದ್ಯಾಲಯವನ್ನು ಅನುಕರಿಸುವುದು. ಕಾಲೇಜಿನಲ್ಲಿ ಮತ್ತು ವಿದ್ಯಾಲಯದಲ್ಲಿ

ಬೋಧನೆ ಬದಲಾವಣೆ ಬೇರೆಯಿರುತ್ತದೆಯಾದರೂ ಈ ಅನುಕರಣೆ ಮಾತ್ರ ತಪ್ಪದು. ಹೀಗಿರುವಾಗ, ಅಧ್ಯಾಪಕ ಶ್ರೇಷ್ಠನೆಂದು ಅವನು ಗಳಿಸಿಕೊಂಡಿರುವ ಪಾಂಡಿತ್ಯ ಪದವಿಗಳ ಮೇಲೆ ಗೊತ್ತುಹಚ್ಚಬಾರದು. ಅವನ ಸಾಮರ್ಥ್ಯವನ್ನು ಹೀಗೆ ಎಂದು ಪ್ರಮಾಣಬದ್ಧವಾಗಿ ಗೊತ್ತುಮಾಡುವುದಕ್ಕಾಗುವುದಿಲ್ಲ. ಅಧ್ಯಾಪ ಕನ ಸಾಮರ್ಥ್ಯವನ್ನು ಅಳೆಯಲು ಬೇರೆ ಸಾಧನವೊಂದಿರಬೇಕು. ವೈದ್ಯ ಶಿಕ್ಷಣಶಾಲೆ ಈ ಬಣ್ಣಕಟ್ಟನಿಂದ ಆದುದೇ ಎಂದೆನ್ನಬಹುದು.

ನಾನು ವೈದ್ಯವೃತ್ತಿ ನಡೆಸುತ್ತಿದ್ದಾಗ ವೈದ್ಯವಿಜ್ಞಾನ ಬೆಳವಣಿಗೆ ತೀವ್ರ ಗತಿಯಿಂದ ಸಾಗುತ್ತಿತ್ತು. ಹೀಗೆ ಮುಂದುವರಿಯುತ್ತಿದ್ದ ವಿಜ್ಞಾನ ಬೆಳವಣಿಗೆ ಯನ್ನು ಅಲ್ಪವಾದರೂ ಅನುಸರಿಸಲಾಗುತ್ತಿರಲಿಲ್ಲ. ಹಳೆಯ ಪದ್ಧತಿಯನ್ನು ತಳ್ಳಿಹಾಕಿ ಹೆಚ್ಚಿನ ಉತ್ತಮರೀತಿಯ ಹೊಸಪದ್ಧತಿ ರೂಢಿಗೆ ಬರುತ್ತಿದ್ದವು. ಹೊಸಪದ್ಧತಿಗಳ ಬಗ್ಗೆ ಮುಂದೆ ವಿವರಿಸುವೆ.—

ವೈದ್ಯಶಾಖೆಯಲ್ಲಿ ವಿಶೇಷ ಪರಿಶ್ರಮ ಪಡೆದವನು, ಸಾಮಾನ್ಯವಾಗಿ ಪ್ರಾಯೋಗಿಕ ವೇಳೆಯಲ್ಲಿ ಕಂಡುಬಂದ ಲೋಪಗಳನ್ನು ಗುರಿತಿಸಿಟ್ಟುಕೊಳ್ಳು ವನು. ಬೆನ್ನುನೋವು ಎಂದಾಗ, ಅಂಗವಿಕಾರವನ್ನು ಸರಿಪಡಿಸಿಕೊಡುವ ಶಸ್ತ್ರ ವೈದ್ಯ ಎಲುಬು ಬಿಗಿದು ಕಟ್ಟಬೇಕು ಎಂದು ತಿಳಿಯುವನು. ಸ್ತ್ರೀರೋಗ ಶಾಸ್ತ್ರ ವಿಜ್ಞಾನಿ ಕಿಬ್ಬೊಟ್ಟೆಯಲ್ಲಿ ತೊಂದರೆಯೇನೋ ಇದೆಯೆಂದು ಶಸ್ತ್ರಕ್ರಿಯೆ ನಡೆಸ ಬೇಕೆನ್ನುತ್ತಾನೆ. ಅನುಭವಿಕವೈದ್ಯ ಕೂಡಲೇ ಇದು ಕಟುವಾಯುವಿನಿಂದ ಕಾಣಿಸಿಕೊಳ್ಳುವಂತಹ ನೋವು ಎಂದು ತಿಳಿಯುತ್ತಾನೆ. ಇಲ್ಲಿಯೇ ಸತ್ಯವಡ ಗಿರುವುದು. ಸರಿಯಾಗಿ ರೋಗಪರೀಕ್ಷೆಮಾಡಿ ತಿಳಿಯುವವರಿಗೆ ಲೋಪ ಕಾಣ ಬರುವುದು. ಅಂಗರಚನಾರೀತಿಯಲ್ಲಿ ಕಾಣಿಸಿಕೊಳ್ಳುವ ವಿಲಕ್ಷಣವನ್ನು ವಿಶೇಷಜ್ಞ ತಪ್ಪೆಂದು ತಿಳಿಯುವುದಿಲ್ಲ. ನಿರ್ದಿಷ್ಟಭಾಗದಲ್ಲಿ ಪರಿಶ್ರಮ ಪಡೆದ ತಜ್ಞ, ರೋಗಲಕ್ಷಣವನ್ನು ಅರಿತುಕೊಳ್ಳುತ್ತಾನೆ. ನೇರವಾಗಿ ರೋಗಲಕ್ಷಣ ವನ್ನು ತಿಳಿಯುವವನು ಉತ್ತಮ ವೈದ್ಯನೇ ಸರಿ.

ಆಧುನಿಕ ವೈದ್ಯಶಿಕ್ಷಣ ಶಾಲೆಯಲ್ಲಿ ತರಪೇತಿ ಹೊಂದಿದವನು ಒಂದೆರಡು ವರ್ಷ ನಿರ್ಬಂಧ ಶಿಕ್ಷಣ ಪಡೆಯುತ್ತಾನೆ. ಒಂದೆರಡು ವರ್ಷ ಕಲಿತವನು ವೈದ್ಯವೃತ್ತಿ ನಡೆಸಬಹುದಾದರೂ ಅವನು ಅನುಭವಿಕವೈದ್ಯನಾಗುವುದಿಲ್ಲ.

ಹೆಚ್ಚು ಜ್ಞಾನಾರ್ಜನೆಮಾಡಿದ ವೈದ್ಯ ನಿರುಪಯೋಗಿಯಾದುದನ್ನು ನಾನು ನೋಡಿದ್ದೇನೆ.

ವೈದ್ಯ ವಿದ್ಯಾರ್ಥಿ ವೈದ್ಯಜ್ಞಾನ ಪಡೆದಿರುತ್ತಾನೆ. ಅವನ ಓದು, ತಿಳಿವಳಿಕೆ, ಪ್ರಯೋಗದಲ್ಲಿ ಕೂಡಿಕೊಂಡಿರಬೇಕು. ಶಾಲೆಯಲ್ಲಿ ಅವನು ಕಲಿತ ಓದು, ಓದಿನ ಜ್ಞಾನ ಸದಾ ಸಾಕಾರವಾದುದಾಗಿರುವುದಿಲ್ಲ. ವಿದ್ಯಾರ್ಥಿ, ಒಂದು ಬಗೆಯ ಓದು ಕಲಿತು ಜ್ಞಾನ ಪಡೆದಿರುತ್ತಾನೆ. ವೃತ್ತಿಜೀವನದಲ್ಲಿ ಬೇರೆ ಬೇರೆ ಬಗೆಯಾದ ಅನುಭವವನ್ನು ಪಡೆದು ಅದನ್ನು ಕುದುರಿಸಿಕೊಳ್ಳುತ್ತಾನೆ.

ಶಾಸ್ತ್ರೀಯ ಔಷಧಿಗಳು ಎಂದೆನ್ನುತ್ತೇವೆ. ಯಾವ ರೀತಿ ಇವು ಶಾಸ್ತ್ರೀಯ ಔಷಧಿಗಳೆಂದೆನಿಸಿಕೊಳ್ಳುತ್ತವೆ ? ಹಿಂದೆ ಪದವೀಧರನಾದ ಮೇಲೆ ತರುಣ ವೈದ್ಯ, ವೃತ್ತಿಗಾಣ ಬೀಸುತ್ತಿದ್ದ. ಹೆಚ್ಚು ರೋಗಿಗಳನ್ನು ನೋಡಿ, ಪರಿಶೀಲಿಸಿ ಅವನು ಹೆಚ್ಚು ಅನುಭವ ಪಡೆಯಬೇಕಲ್ಲವೆ ? ಹೆಚ್ಚು ಬೇನೆ ಉಪದ್ರವಗಳ ಪೈಕಿ ತರುಣನಿಗೆ ಪರಿಚಯವಾಗಿರುವುದು ಕೇವಲ ಅಲ್ಪವೆ. ಪರಿಚಯವಾದುದಕ್ಕಿಂತಲೂ ನೂರುಬಾರಿ ಪರಿಶೀಲಿಸುವುದರಿಂದ ಹೆಚ್ಚು ಹೊಸ ಹೊಸ ರೋಗಗಳು ಅವನಿಗೆ ಸ್ಪಷ್ಟವಾಗುವುದು. ಅಂಗವಿಚ್ಛೇದನ ತಂತ್ರ ಮತ್ತು ರೋಗ ನಿಧಾನ ತಂತ್ರ ತಿಳಿದವನು ಹೆಚ್ಚು ಅನುಭವಿಯೇ ಸರಿ. ಪ್ರಾಯೋಗಿಕ ದೃಷ್ಟಿಯಿಂದ ಹೆಚ್ಚು ತಿಳಿಯಬಹುದೆಂದು ತರುಣ ವೈದ್ಯ ತಿಳಿಯಲಾರ. ಪ್ರಾಯೋಗಿಕ ಜ್ಞಾನಕ್ಕೂ ಮಲಭೂತ ಶಾಖಾಭಾಗ ಜ್ಞಾನದ ತಿಳಿವಳಿಕೆಗೂ ತುಂಬಾ ವ್ಯತ್ಯಾಸವಿದೆ. ಪದವಿ ಗಳಿಸುವುದಕ್ಕಾಗಿ ವಿದ್ಯಾರ್ಥಿ ಕಲಿಯುತ್ತಾನೆ. ಆನಂತರ ಕಲಿತದ್ದನ್ನು ಮರೆಯುತ್ತಾನೆ.

ಬೇಸಾಯಗಾರ ಭೂಮಿಯನ್ನು ಉತ್ತು ಉತ್ತು ಉಳುವುದನ್ನು ಹೇಗೆ ಕಲಿಯುತ್ತಾನೆಯೋ ಹಾಗೆಯೇ ವೈದ್ಯ ವೈದ್ಯಶಾಸ್ತ್ರವನ್ನು ಕಲಿಯುತ್ತಾನೆ. ಉಳುಮೆಯಂತೆ ಜಾಡುಹಾದಿ ಹಿಡಿದು ವೈದ್ಯ ಕಲಿಯಬೇಕು. ಮೊದಲ ದರ್ಜೆಯ ವೈದ್ಯವೃತ್ತಿಯವನು, ಚತುರತೆಯಿಂದ ನಾನಾಬಗೆಯ ಕಾಹಿಲೆ ತರಹೆಯನ್ನು (ಜಾಡನ್ನು) ತಿಳಿದು, ಶಾಸ್ತ್ರೀಯ ಜ್ಞಾನವನ್ನು ಬಿಟ್ಟು ಅನುಭವದಿಂದ ಬಂದ ಪರಿಹಾರಮಾರ್ಗ ಸೂಚಿಸಿ ಪ್ರವೀಣವೈದ್ಯನೆಂದೆನಿಸಿಕೊಳ್ಳುವನು. ಅನೇಕ ಶಸ್ತ್ರವೈದ್ಯರು ಮೂಲಭೂತ ಪ್ರಯೋಗಶಿಕ್ಷಣದ ಅನುಭವವನ್ನು ಉಪಯೋಗಿಸಿಕೊಳ್ಳುವುದಿಲ್ಲ. ಈ ಶಿಕ್ಷಣಾನುಭವ, ಉಪಯೋಗಕ್ಕೆ

ಬಾರದೆಂದು ಅವರು ತಿಳಿದಿರಬೇಕು. ಶಸ್ತ್ರವೈದ್ಯರನೇಕರು ಶಸ್ತ್ರ ಚಿಕಿತ್ಸೆಗೆ ಸಂಬಂಧಪಟ್ಟ ರೋಗನಿಧಾನ ತಂತ್ರವನ್ನು ಪುನಃ ಪರಿಶೀಲಿಸಿಕೊಂಡರೆ ಸಾಕು, ಜೀವನ ನಡೆದೀತು ಎಂದುಕೊಂಡುದುದನ್ನು ಕೇಳಿದ್ದೇನೆ.

ನಿಜವಾಗಿಯೂ ಮೂಲಭೂತ ಜ್ಞಾನ, ಅನುಭವವನ್ನು ಕಂಡುಕೊಳ್ಳ ಬೇಕು ಎಂಬುವನು ವೈದ್ಯಕೀಯ ವೃತ್ತಿಗೆ ಸಂಬಂಧಿಸಿದ ಅಂಗರಚನಾ ಶಾಸ್ತ್ರ, ಶರೀರಶಾಸ್ತ್ರ ಮತ್ತು ರೋಗನಿಧಾನ ತಂತ್ರ ಇವುಗಳ ಆದಿಮೂಲ ವನ್ನು ಚೆನ್ನಾಗಿ ತಿಳಿಯಬೇಕು. ಒಂದು ಭಾಗದಲ್ಲಿ ವಿಶೇಷ ಪರಿಣಿತನಾಗ ಬೇಕೆನ್ನುವವನಿಗೆ ಶಾಸ್ತ್ರವಿಶಾಲತೆ ಅಷ್ಟಾಗಿರುವುದಿಲ್ಲ. ಅವನು ಬೇಗ ಪರಿ ಣಿತನೆನಸಿಕೊಳ್ಳಬಹುದು, ಸಾಮಾನ್ಯ ವೈದ್ಯಕೀಯವೃತ್ತಿ ನಡೆಸಹೋಗುವವ ನಿಗೆ ಮೇಲೆ ಹೇಳಿದ ಮೂರುವಿಧ ಶಾಸ್ತ್ರದಲ್ಲಿ ಅಷ್ಟೂ ಆಳವಾದ ಜ್ಞಾನಾನು ಭವವಿರುವುದಿಲ್ಲ.

ಪರಿಣಿತನಾಗಬೇಕೆನ್ನುವ ಶಸ್ತ್ರವೈದ್ಯ, ಪ್ರಯೋಗಶಿಕ್ಷಣ ಸಂಸ್ಥೆಗೆ ಸೇರಿ ಅನುಭವಿಕ ಶಸ್ತ್ರವೈದ್ಯನೊಡನೆ ಐದಾರುವರ್ಷ ಕಲಿಯುವುದು ಒಳ್ಳೆಯದು. ಶಿಕ್ಷಣಾಂತ್ಯದಲ್ಲಿ ಈ ವೈದ್ಯನ ಎದುರಿನಲ್ಲಿ ವಿದ್ಯಾರ್ಥಿಯು ಶಸ್ತ್ರಚಿಕಿತ್ಸೆಮಾಡಿ ಅನುಭವಪಡೆಯುವನು. ಇದು ಯುಕ್ತವಾದ ಸಲಹೆ. ಖಾಸಗೀ ವೈದ್ಯ ಶಾಲೆಯಲ್ಲಿ ವೃತ್ತಿ ನಡೆಸಹೋಗುವವನಿಗೆ ಇದು ಸರಿಹೋಗದು. ಎಲ್ಲಾ ವೈದ್ಯವಿದ್ಯಾರ್ಥಿಗಳಿಗೆ ಈ ಸಲಹೆ ಸರಿಹೊಂದದು.

ಇನ್ನು ನನ್ನ ಮುಂದಿನ ಅನುಭವವನ್ನು ಹೇಳುವೆ. ಎರಡು ವರ್ಷಕಾಲ ಬರ್ಲಿನ್ ನಗರದಲ್ಲಿದ್ದು, ಎಲ್ಲಾ ಸಮಯ ಸಂದರ್ಭವನ್ನು ಅನುಸರಿಸಿ, ಅನು ಭವಪಡೆದು ಕಾನ್ಸಾಸ್ ನಗರಕ್ಕೆ ಬಂದೆ. ಇಲ್ಲಿ ನನ್ನ ವೈದ್ಯಕೀಯ ಸಾಮರ್ಥ್ಯ ತೋರಲು ಅವಕಾಶ ನನಗೆ ಸಿಗಲಿಲ್ಲ.

ಒಂದು ದೊಡ್ಡ ವಿಶ್ವವಿದ್ಯಾನಿಲಯದಲ್ಲಿ ಅಂಗರಚನಾ ಶಾಸ್ತ್ರ ಬೋಧಕ ನಾಗಿರಲು ನನಗೆ ಕರೆ ಬಂತು. ಈ ಕರೆ ಬಂದಾಗ ದೀರ್ಘವಾಗಿ ಯೋಚಿಸಿದೆ. ನನಗೆಲ್ಲಿ ಮನಸ್ಸಿತ್ತೋ ಅವಕಾಶವಿತ್ತೊ ಅಲ್ಲಿಂದ ಕರೆ ಬಂದಿದೆಯೆಂದು ತಿಳಿದೆ. ಆದರೂ ಕುದುರೆಯ ಬೆನ್ನುಬಿಡಲು ನನಗೆ ಸಾಧ್ಯವಿಲ್ಲ ಎಂದು ತೋರಿಬಂತು. ಕುದುರೆ ಏರಿ ವೃತ್ತಿ ಅನುಸರಿಸಿಯೇ ಬಿಡುವುದೆಂದು ನಿಶ್ಚಯಿಸಿದೆ.

ವೃತ್ತಿ ಹಿಡಿದು ನಿಂತಮೇಲೆ ಶಸ್ತ್ರವಿದ್ಯೆ ವಿದ್ಯಾರ್ಜನೆಯನ್ನು ಹೆಚ್ಚು ಮುಂದುವರಿಸಲು ಸಾಧ್ಯವೆಲ್ಲಿಯದು. ಶಸ್ತ್ರವಿದ್ಯಾರ್ಜನೆಗೆ ರೋಗಿಗಳು ಬೇಕು, ಹೆಚ್ಚಿನ ತಾಳ್ಮೆಯೂ ಬೇಕು.

ರೋಗಿಗಳಿಗೆ ನಾನು ಔಷಧ ಕೊಡುತ್ತಿದ್ದೆನಲ್ಲದೆ ಶಸ್ತ್ರ ಚಿಕಿತ್ಸೆಯನ್ನೂ ಮಾಡುತ್ತಿದ್ದೆ. ಸರ್ವಾಂಶ ವೈದ್ಯನಾದುದರಿಂದ ನನ್ನ ಉತ್ಪತ್ತಿ ಹೆಚ್ಚಾಗಿದ್ದಿತು. ಸಲಹೆಯ ವೈದ್ಯ, ಸರ್ವಾಂಶ ವೈದ್ಯನೆನಿಸಿಕೊಂಡಿದ್ದುದರಿಂದ, ನನಗೊಬ್ಬ ಚತುರ ಸಹೋದ್ಯೋಗಿಯಿದ್ದುದರಿಂದ ವೃತ್ತಿಯು ತೊಡಕಿಲ್ಲದೆ ನಡೆಯುತ್ತಿತ್ತು. ಕುದುರೆಗಾಡಿ ಏರಿಹೋಗಿ ರೋಗಿಗಳನ್ನು ಪರೀಕ್ಷಿಸಿ ಬಂದಮೇಲೆ, ಇತರ ವ್ಯವಹಾರಗಳಿಗೆ ಗಮನ ಕೊಡುತ್ತಿದ್ದೆ. ಗಾಡಿ ಪ್ರಯಾಣ ರೂಢಿಗೆ ಬಂದಮೇಲೆ ರೈಲು ಪ್ರಯಾಣ ಮೊದಲಾಯಿತು. ರೈಲುಹತ್ತಿ ಅಲ್ಲಿ ಇಲ್ಲಿ ಸುತ್ತಾಡಿ ಬರುತ್ತಿದ್ದ ನನಗೆ ಕೆಲವು ಅನುರಂಜಿಸುವಂತಹ ರೋಗಿಗಳನ್ನು ಪರೀಕ್ಷಿಸಿ, ರೋಗ ಲಕ್ಷಣವನ್ನು ತಿಳಿಯುವ ಸುಯೋಗ ದೊರಕಿತು. ಹೆಚ್ಚು ಪರಿಶ್ರಮ ಪಡೆದ ಶಸ್ತ್ರವೈದ್ಯನಿಂದ ಚಿಕಿತ್ಸೆ ಪಡೆಯಲು ಸಾಧ್ಯವಿಲ್ಲದವರು, ನನ್ನ ಚಿಕಿತ್ಸಾಲಯಕ್ಕೆ ತಾವಾಗಿಯೇ ಬರುತ್ತಿದ್ದರು. ಹಣ ಬರಲಿ, ಬಾರದಿರಲಿ, ರೋಗಿಗಳಿಗೆ ಚಿಕಿತ್ಸೆಮಾಡಿಬಿಡುತ್ತಿದ್ದೆ.

ನಾನು ವಾಸಿಸುತ್ತಿದ್ದ ಗ್ರಾಮದಲ್ಲಿ ಜನಸಂಖ್ಯೆ ಸಾವಿರಕ್ಕೂ ಹೆಚ್ಚು ಮೀರಿರಲಿಲ್ಲ. ಶಸ್ತ್ರಚಿಕಿತ್ಸೆಗೆ ಬೇಕಾದ ಉಪಕರಣಗಳೂ ಅಲ್ಲಿ ಸಿಕ್ಕುತ್ತಿರಲಿಲ್ಲ. ಇನ್ನೂ ಹೆಚ್ಚು ಕಲಿಯಬೇಕೆಂದಿದ್ದ ನನಗೆ ವಿದ್ಯಾರ್ಜನೆ ಮುಂದುವರಿಸಲಾಗಲಿಲ್ಲ. ಕಲಿಯಲು ಹೀಗೆ ಅವಕಾಶ ಸಿಕ್ಕದಿದ್ದಾಗ, ನನಗೆ ಅದೃಷ್ಟವಶಾತ್ ಕಾನ್ಸಾಸ್ ನಗರದ ವಿಶ್ವವಿದ್ಯಾನಿಲಯದಲ್ಲಿ ಅಂಗಾಂಶ ಶಾಸ್ತ್ರ (Histology) ಮತ್ತು ರೋಗಲಕ್ಷಣ ಶಾಸ್ತ್ರ (Pathology) ಬೋಧಕನಾಗಲು ಕರೆಬಂತು.

ವಿಶ್ವವಿದ್ಯಾನಿಲಯದಲ್ಲಿ ಬಿಡುವಿಲ್ಲದೆ ವಾರಕ್ಕೆ ಐದು ಅಥವಾ ಆರುದಿನ ಪೂರ್ತಿ ನಾನು ಬೋಧಿಸಬೇಕಾಯಿತು. ನನಗೆ ತಿಂಗಳಿಗೆ ಐವತ್ತು ಡಾಲರ್ ವೇತನ ಕೊಡುತ್ತಿದ್ದರು. ನನಗೆ ದೊರೆಯುತ್ತಿದ್ದ ವೇತನ ಶಾಲಾಬಾಗಿಲು ಕಾಯುವವನಿಗೆ ದೊರೆಯುತ್ತಿದ್ದ ವೇತನದಷ್ಟೇ ಆಗಿತ್ತು. ಆ ಪ್ರಾಂತ್ಯದಲ್ಲಿ ನಾನು ಪೂರ್ಣ ವೈದ್ಯಪರಿಣಿತನೆಂದು ಪರಿಗಣಿಸಲ್ಪಟ್ಟಿದ್ದೆ. ವಿಶ್ವವಿದ್ಯಾನಿಲಯಕ್ಕೆ ಸೇರಿಕೊಂಡಿದ್ದ ಚಿಕಿತ್ಸಾಲಯದಲ್ಲಿ ಅನೇಕಬಗೆಯ ರೋಗಲಕ್ಷಣಗಳನ್ನು ತಿಳಿಯಲು

ಅವಕಾಶ ಸಿಗಬಹುದೆಂಬ ಸಂತೋಷದಿಂದ ಬೋಧಕನಾಗಿ ನಿಲ್ಲಲು ಒಪ್ಪಿಕೊಂಡೆ. ಚಿಕಿತ್ಸಾಲಯದಲ್ಲಿ ಶಸ್ತ್ರ ಚಿಕಿತ್ಸೆಗೆ ಕಾರಣರಾದ ಅನೇಕ ರೋಗಿಗಳನ್ನು ನೋಡಿದೆ. ಬೇರೆ ಎಡೆಯಲ್ಲಿ ಶವಪರೀಕ್ಷಣಕ್ಕೂ ಬೇಕಾದಷ್ಟು ಅವಕಾಶವಿತ್ತು. ಈ ಅವಕಾಶವನ್ನು ನಾನು ಪೂರ್ಣವಾಗಿ ಉಪಯೋಗಿಸಿಕೊಂಡೆ. ಯಾವ ಶಸ್ತ್ರ ಚಿಕಿತ್ಸೆಗೆ ಕಾರಣನಾದ ರೋಗಿ ಸಾಯುತ್ತಾನೆ? ಯಾವ ಚಿಕಿತ್ಸೆಯಿಂದ ಫಲಿತಾಂಶ ಉತ್ತಮವಾಗುವುದು, ಎಂದು ತಿಳಿದುಕೊಂಡೆನಲ್ಲದೆ, ಏನನ್ನು ಶಸ್ತ್ರಚಿಕಿತ್ಸೆ ಸಂದರ್ಭದಲ್ಲಿ ಮಾಡಬಾರದು ಎಂಬುದನ್ನು ಮುಖ್ಯವಾಗಿ ಕಂಡುಕೊಂಡೆ. ಶಸ್ತ್ರವಿದ್ಯಾಪ್ರವೀಣ ಪಡೆಯುವ ಅನುಭವನವನ್ನು ನಾನಿಲ್ಲಿ ಪಡೆದೆ.

ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ನಾನು, ಅಂಗಾಂಶ ಶಾಸ್ತ್ರ, ರೋಗಲಕ್ಷಣ ಶಾಸ್ತ್ರ, ಪ್ರಯೋಗ ಶಸ್ತ್ರವಿದ್ಯೆ ಮತ್ತು ಸ್ತ್ರೀರೋಗ ಶಾಸ್ತ್ರ ಬೋಧಿಸುತ್ತಿದ್ದೆ. ಎರಡುವರ್ಷಕಾಲ ಅಂಗಚ್ಛೇದ ಶಾಲೆಯನ್ನು ನಡೆಸಿದೆ. ದಿನಂಪ್ರತಿ ೧೦ ಘಂಟೆಯ ಕಾಲ ಬೋಧಿಸಲು ಏರ್ಪಾಟುಮಾಡಿದೆ. ವಿದ್ಯಾರ್ಥಿಗಳನ್ನು ಪಂಗಡ ಪಂಗಡವಾಗಿ ವಿಂಗಡಿಸಿದ್ದೆನಲ್ಲದೆ, ಪ್ರಯೋಗಿಕ ನಿರೂಪಣೆಗೆ ನಾನೇ ಅನುಕೂಲಪಡಿಸಿಕೊಡುತ್ತಿದ್ದೆ. ಏಕಾಣುಜೀನಿಶಾಸ್ತ್ರ ಮತ್ತು ಅಂಗಾಂಶ ಶಾಸ್ತ್ರ ಕುರಿತು ಪ್ರಾಯೋಗಿಕ ಪುಸ್ತಕವನ್ನು ಬರೆದೆ. ಇದರಿಂದ ಅನೇಕರಿಗೆ ಸಹಾಯವಾಯಿತು. ಅಂಗಚ್ಛೇದನೆ ಮೊದಲಾದಂದಿನಿಂದ ನನ್ನ ಕೆಲಸ ಇನ್ನೂ ಎರಡು ಗಂಟೆಯಕಾಲ ಹೆಚ್ಚು ಮುಂದುವರಿಯಿತು. ವಿಶ್ವವಿದ್ಯಾನಿಲಯದಲ್ಲಿ ಏಳು ವರ್ಷಕಾಲ ಪೂರಾಹೊತ್ತಿನ ಅಧ್ಯಾಪಕನಾಗಿ ಕೆಲಸಮಾಡಿದೆ.

ಬೋಧಕನಾಗಿದ್ದಾಗಲೂ ನಾನು ಪ್ರಯೋಗಪರೀಕ್ಷೆ ನಡೆಸುವುದನ್ನು ಬಿಡಲಿಲ್ಲ. ಸೂಕ್ಷ್ಮಚರ್ಮದಲ್ಲಿ ಕಾಣುವ ಸಂದು ಮತ್ತು ಅದರ ಶೋಣತೆಯ ಪರೀಕ್ಷೆ ನಡೆಸುತ್ತಿದ್ದೆ. ಶ್ವಾಸಕೋಶದ ಕ್ಷಯರೋಗಕ್ಕೆ ತುತ್ತಾಗಿದ್ದ ನಾನು, ಈ ರೋಗವನ್ನು ಪರೀಕ್ಷಿಸಿ, ಕೂಲಂಕಷವಾಗಿ ತಿಳಿಯಲು ಪ್ರಯತ್ನಿಸಿದೆ. ಗಿನಿ ಹಂದಿಗಳಿಗೆ ಉರಿಯೂತವನ್ನು ಅಂಟಿಸಿ, ಈ ಅಂಟು ಹೇಗೆ ಹೆಚ್ಚಿ ಹಬ್ಬಿ ಬೆಳೆಯುವುದು? ಪಿತ್ತಕೋಶದ ಮೇಲೆ ಯಾವಬಗೆಯ ಪರಿಣಾಮವನ್ನುಂಟು

ಮಾಡುವುದು ? ಎಂದು ತಿಳಿಯಲು ಪ್ರಯೋಗಪರೀಕ್ಷೆಮಾಡಿದೆ. ಉತ್ತಮ ಪರಿಣಾಮವೇನೂ ಕಾಣಬರಲಿಲ್ಲ.

ಈ ನಡುವೆ ಒಬ್ಬ ಪ್ರಸಿದ್ಧ ಪ್ರಕಾಶಕರು ನನ್ನನ್ನು ಬಾವು, ಗೆಡ್ಡೆ ಮತ್ತು ಗ್ರಂಥಿ ಇವುಗಳನ್ನು ಕುರಿತು ಪುಸ್ತಕ ಬರೆಯುವಂತೆ ಪ್ರೇರೇಪಿಸಿದರು. ಹೀಗೆ ಪ್ರಕಟನಶಾಖೆಯವರು ನನ್ನ ಬೆನ್ನಿಗೆ ಬಿದ್ದಾಗ, ಸಹಜ ಹೊಗಳಿಕೆಗೆ ಕಾರಣನಾಗಿ ಉತ್ಸಾಹದಿಂದ ಗ್ರಂಥ ಬರೆಯತೊಡಗಿದೆ. ಬರಹಕ್ಕೆ ಅನುಕೂಲವಾಗಿ ನನಗೆ ಯಾವ ಗ್ರಂಥದ ನೆರವೂ ಗ್ರಂಥಭಾಂಡಾರದ ಸಹಾಯವೂ ಸಿಗಲಿಲ್ಲ. ದೇಶದ ಶಸ್ತ್ರವಿದ್ಯಾಪ್ರವೀಣನ ಪುಸ್ತಕ ಭಂಡಾರದಿಂದ ನಾನು ಯಾವ ಪುಸ್ತಕವನ್ನು ಎರವಲು ಪಡೆಯುವಂತಿರಲಿಲ್ಲ. ಅಂದರೆ ಗ್ರಂಥರಚನೆಯ ಕಾಲದಲ್ಲಿ ನನಗೆ ಯಾವ ಬಗೆಯ ಸಹಾಯವೂ ದೊರೆಯಲಿಲ್ಲ.

ನಾನೇ ಒಂದು ಸ್ವಂತ ಗ್ರಂಥ ಭಂಡಾರವನ್ನು ಉಪಯೋಗಕ್ಕೆ ಇಟ್ಟುಕೊಳ್ಳಬಾರದು ಎಂದು ಯೋಚಿಸಿಕೊಳ್ಳಲು ನಿಶ್ಚಯಿಸಿದೆ. ಒಂದು ಸಂಜೆ ವಿದೇಶಿ ಪುಸ್ತಕಪಟ್ಟಿಯನ್ನು ನೋಡಿ ಸಾವಿರಾರು ಡಾಲರು ಬೆಲೆಬಾಳುವ ಗ್ರಂಥಗಳು, ಹೆಚ್ಚಾಗಿ ಪತ್ರಿಕಾ ಸಂಪುಟಗಳನ್ನು ಆರಿಸಿ ತರಿಸಿಕೊಂಡೆ. ಇಷ್ಟು ಬೆಲೆ ಬಾಳುವ ಗ್ರಂಥ ಸಮುದಾಯವನ್ನು ಹೇಗೆ ತರಿಸುವುದು ? ಇಷ್ಟು ಹಣ ನಾನೆಲ್ಲಿಂದ ತರುವುದು ಎಂದು ಯೋಚಿಸಲಿಲ್ಲ. ಯೋಚಿಸದೆ ಗ್ರಂಥಸಮುದಾಯವನ್ನು ಕಳುಹಿಸಬೇಕೆಂದು ಬರೆದು ಬಿಟ್ಟೆ. ನನಗಿಂತಲೂ ವಿಕ್ರಯಾಧಿಕಾರಿ ಇಷ್ಟು ಹಣ ನಾನೆಲ್ಲಿ ಒದಗಿಸುವೆ ಎಂದು ಯೋಚಿಸಿ ತಲೆಕೆಡಿಸಿಕೊಂಡಿರಬೇಕು. ಕೊನೆಗೆ ಪೂರ್ಣವಾಗಿ ಅವುಗಳೆಲ್ಲಕ್ಕೂ ಹಣಕೊಟ್ಟೆ. ಪುಸ್ತಕ ಜ್ಞಾನ ಪಡೆಯಲು ಅಪಾರ ಹಣ ವೆಚ್ಚ ಮಾಡಿದಂತಾಯಿತು.

ಈ ಹೇರಳ ಗ್ರಂಥ ಸಹಾಯದಿಂದ ನನ್ನ ಗ್ರಂಥರಚನೆ ಮುಗಿಯಿತು. ಮುಗಿದು ಇತರರಿಗೆ ಅನುಕೂಲವಾಯಿತು. ಗ್ರಂಥರಚನೆ ಮುಗಿದಮೇಲೂ ನನ್ನ ಪುಸ್ತಕ ಶೇಖರಣೆಯ ಕೆಲಸ ನಿಲ್ಲಲಿಲ್ಲ. ನನಗೆ ಬೇಕಾದ ಮಾದರಿ ಪುಸ್ತಕಗಳನ್ನೆಲ್ಲಾ ಸಂಗ್ರಹಿಸಿದೆ. ಇದರಿಂದ ಹೆಚ್ಚಿನ ವಿದ್ಯಾರ್ಜನೆಗೆ ಅವಕಾಶ ಒದಗಿತು ; ಬರಹಕ್ಕೆ ಅನುಕೂಲವಾಯಿತು. ಉದ್ಗ್ರಂಥ ಬರೆಯಲು ಅಭ್ಯಾ

ಸವೂ ಆಯಿತು. ಗೆಡ್ಡೆ, ಗ್ರಂಥಿ ಬಗ್ಗೆ ನಾನು ಗ್ರಂಥ ರಚಿಸಿದಾದನಂತರ, ಹೆಚ್ಚು ಜನ ನನ್ನನ್ನು ಈ ಬಗೆಯ ಕಾಹಿಲೆಗಳಿಗೆ ಸಲಹೆ ಕೇಳಲು ಬರುತ್ತಿದ್ದರು.

ನನ್ನ ಗ್ರಂಥಾಲಯಕ್ಕೆ ಹೆಚ್ಚು ಹೆಚ್ಚು ಪುಸ್ತಕ ಬಂದು ಸೇರುತ್ತಿತ್ತು. ಅನೇಕ ಶಸ್ತ್ರವೈದ್ಯಕ್ಕೆ ಸಂಬಂಧಿಸಿದ ಮತ್ತು ರೋಗಲಕ್ಷಣಶಾಸ್ತ್ರ ಗ್ರಂಥಗಳನ್ನು ಕೂಡಿಹಾಕಿದೆ. ಗ್ರಂಥಾಲಯ ಬೆಳೆಯಲು ಹೆಚ್ಚು ಹಣ ಬೇಕಲ್ಲವೇ ಎಂದು ಕಂಡುಬಂತು. ಹಣಬೇಕು, ಶ್ರಮಿಸಲೂಬೇಕು ಎಂದು ತಿಳಿದೆ. ನಲವತ್ತು ನಾಲ್ಕು ಪತ್ರಿಕಾ ಸಂಪುಟವನ್ನು ಪಡೆದುಕೊಂಡೆ. ಈ ಕೆಲಸ ಸುಲಭಸಾಧ್ಯವಲ್ಲ. ಇದು ಹೆಚ್ಚು ದುಬಾರಿಯ ಕೆಲಸವೆಂದೂ ತೋರಿತು. ಒಮ್ಮೆ ನನ್ನ ಗ್ರಂಥಾಲಯದಲ್ಲಿ ಎಂಟುಸಾವಿರ ಗಟ್ಟಿ ಅಟ್ಟಿನ ಗ್ರಂಥಗಳಿತ್ತಲ್ಲದೆ, ಹತ್ತುಸಾವಿರ ಲಘು ಪುಸ್ತಕಗಳಿದ್ದವು. ಕ್ರಮೇಣ ಈ ಪುಸ್ತಕರಾಶಿಯನ್ನು ಅನೇಕ ಸಂಸ್ಥೆಗಳಿಗೆ ದಾನಮಾಡಿದೆ.

ಗಡ್ಡೆ ಗ್ರಂಥಿಯ ಬಗ್ಗೆ ಗ್ರಂಥ ರಚಿಸಿದಮೇಲೆ ಛಾಯಾಗ್ರಹಣ ಚಿತ್ರಗಳ ಬೆಲೆ ನನಗೆ ತಿಳಿಯಿತು. ಛಾಯಾಗ್ರಹಣ ಚಿತ್ರ ಹೆಚ್ಚು ದಿನ ದಾಖಲೆಯಾಗಿ ಉಳಿಯುವುದು ಎಂದು ಕಂಡಿತು. ನಾನೊಂದು ಉತ್ತಮ ಛಾಯಾಗ್ರಹಣ ಪೆಟ್ಟಿಗೆ ಕೊಂಡೆ. ಚಿತ್ರ ತೆಗೆಯಲು ಒಬ್ಬ ಹುಡುಗನಿಗೆ ಹೇಳಿಕೊಟ್ಟೆ. ಈ ಹುಡುಗ ಉತ್ತಮ ತರಬೇತಿ ಪಡೆದ. ನನ್ನೊಂದಿಗೆ ಈ ಛಾಯಾಚಿತ್ರಗ್ರಾಹಕ ಸುಮಾರು ಇಪ್ಪತ್ತೈದು ವರ್ಷಕಾಲ ಕೆಲಸಮಾಡಿದ. ಪ್ರಯೋಗಶಾಲೆಯ ಮಾದರಿಗಳನ್ನು ಮತ್ತು ದಾಖಲೆಯಾಗಿ ಉಳಿಯಬೇಕಾಗಿದೆಯೆನ್ನುವ ಇತರ ಎಲ್ಲಾ ವಸ್ತುಗಳ ಛಾಯಾಚಿತ್ರ ತೆಗೆದಿಡಬೇಕೆಂದು ಅಪ್ಪಣೆಮಾಡಿದೆ. ಒಬ್ಬನು ಒಂದು ಗ್ರಂಥ ರಚಿಸಬೇಕು ಎಂದು ಯೋಚಿಸಿ ಕುಳಿತಾಗ, ಅನೇಕ ಚಿತ್ರದಾಖಲೆಗಳು ಅವನ ಬರವಣಿಗೆಗೆ ಸಹಾಯವಾಗಿ ಬರುವುದು ಖಚಿತವೆಂದು ತಿಳಿಯಿತು.

ಶಸ್ತ್ರವಿದ್ಯೆ ಅಥವಾ ಶಸ್ತ್ರವೈದ್ಯನಾಗಲು ಒಬ್ಬನು ಹಲವಾರು ವರ್ಷ ಕಷ್ಟ ಪಟ್ಟು ಅನುಭವ ಪಡೆಯಬೇಕು. ಎಲ್ಲಾ ಮೂಲವಿಜ್ಞಾನವನ್ನು ತಾರುಣ್ಯದಲ್ಲಿಯೇ ಕಲಿತು, ಹೆಚ್ಚಾಗಿ ಅಂಗರಚನಾಶಾಸ್ತ್ರ ಮತ್ತು ರೋಗಲಕ್ಷಣ ಶಾಸ್ತ್ರವನ್ನು ಚೆನ್ನಾಗಿ ತಿಳಿದಿರಬೇಕು. ವಾದ್ಯಗಾರನಿಗೆ ತನ್ನ ವಾದ್ಯದ ಮೇಲೆ ಎಷ್ಟು ಹತೋಟಿಯಿರುತ್ತದೆಯೋ ಅಷ್ಟೇ ಶಸ್ತ್ರವೈದ್ಯನಿಗೆ ತನ್ನ ಶಸ್ತ್ರದ ಮೇಲೆ ಅಷ್ಟು ಹತೋಟಿ ಇರಬೇಕು. ವಾದ್ಯಗಾರನ ವಾದ್ಯ, ಮೇಲ್ಸ್ತರಗತಿಯದೇ

ಆಗಿರಲಿ, ಸಂಗೀತ ಶಾಸ್ತ್ರವನ್ನು ಅವನು ಪೂರ್ಣವಾಗಿ ತಿಳಿದಿರಲಿ, ವಾದ್ಯವೂ ಹಾಡುಗಾರಿಕೆಯೂ ಒಟ್ಟುಗೂಡಿಕೊಳ್ಳಬೇಕಲ್ಲವೆ? ಧ್ವನಿಗೂಡಿ ವಾದ್ಯ ಮತ್ತು ಗಾಯನ ಎರಡೂ ಸಮ್ಮಿಳನವಾಗಬೇಕಲ್ಲವೆ? ವಾದ್ಯಗಾರ ಚೆನ್ನಾಗಿ ತನ್ನ ವಾದ್ಯವನ್ನು ನುಡಿಸಲು ಅಭ್ಯಾಸಮಾಡಿಕೊಂಡಿರುತ್ತಾನೆ. ಆದರೆ ಅವನು ತನ್ನ ಸರ್ವಸ್ವವಾದ ವಾದ್ಯವನ್ನು ಪಳಗಿಸಿ, ಹತೋಟಿಗೆ ತಂದುಕೊಂಡಿರುತ್ತಾನೆ. ವಾದ್ಯಗಾರರಂತೆ ಶಸ್ತ್ರವೈದ್ಯರು ಹುಟ್ಟಿನಿಂದ ಬಂದ ಕಲಾವಿದರು. ಹುಟ್ಟು ಕವಿಯಂತೆ ಹುಟ್ಟು ಶಸ್ತ್ರವೈದ್ಯ, ಅಭ್ಯಾಸಬಲವಿಲ್ಲದೆ ತನ್ನ ಪ್ರತಿಭೆಯನ್ನು ತೋರಲಾರ. ಪ್ರತಿಭಾವಂತ ಶಸ್ತ್ರವೈದ್ಯ ಮೊದಲಿನಿಂದಲೂ ತನ್ನ ಹಸ್ತಕೌಶಲಕ್ಕೆ ಮೆರುಗು ಕೊಡುತ್ತಲೇ ಇರುತ್ತಾನೆ.

ಶಸ್ತ್ರವಿದ್ಯಾಭ್ಯಾಸ ಮಾಡುವ ಮೊದಲು ರೋಗಿಗಳನ್ನು ಕಂಡುಕೊಳ್ಳಬೇಕು. ರೋಗಿ ಸಿಗುತ್ತಾನೆ, ಈ ರೋಗಿಯ ರಕ್ಷಣೆ ಶಸ್ತ್ರವೈದ್ಯನಿಂದಾಗಬೇಕು. ವೈದ್ಯ, ರೋಗಿಯನ್ನು ಸ್ನೇಹಿತನಂತೆ ಕಾಣಬೇಕು. ತಾಂತ್ರಿಕವಾದ ಚತುರತೆಯಿಂದ ಕಂಡುಕೊಳ್ಳಬೇಕು. ರೋಗಿ ಸತ್ಯವಂತನೆಂದೂ, ಅವನು ಹೇಳುವುದೆಲ್ಲಾ ನಿಜವೆಂದು ನಂಬಬೇಕು. ಈ ಬಗೆಯಲ್ಲಿ ವೈದ್ಯ ತೋರುವ ಕೌಶಲವೇ ಮುಖ್ಯವಾದುದು.

ರೋಗಿಯೊಬ್ಬ ದೊರಕಿದಮೇಲೆ ಅವನ ರೋಗ ಚಾರಿತ್ರ್ಯವನ್ನು ಕೇಳಿ ತಿಳಿಯಬೇಕು. ರೋಗಿಯಿಂದ ವಿಷಯವನ್ನು ಹೊರಪಡಿಸುವುದೇ ಒಂದು ಕಲೆ. ರೋಗಲಕ್ಷಣ ಮತ್ತು ಮಾನವ ಸ್ವಭಾವ ತಿಳಿದುಕೊಳ್ಳಲು ಒಬ್ಬನಿಗೆ ಚೆನ್ನಾಗಿ ತಿಳಿವಳಿಕೆಯಿರಬೇಕು. ಮಾನವ ಸ್ವಭಾವವನ್ನು ಸುಲಭವಾಗಿ ಗೊತ್ತುಮಾಡಿಕೊಳ್ಳಲು ಸಾಧ್ಯವಿಲ್ಲ. ಇದು ಕ್ರಮಸಾಧ್ಯವಾದ ಕೆಲಸವಾದರೂ ಹೆಚ್ಚು ಹೊತ್ತು ತೆಗೆದುಕೊಳ್ಳುವುದು. ವೈದ್ಯ ರೋಗಲಕ್ಷಣವನ್ನು ತಿಳಿಯುತ್ತಾನೆ ಸರಿ. ಅನೇಕ ಸಾರಿ ಇನ್ನೂ ಹೆಚ್ಚಿನ ಅಂಶಗಳು ಸೂಕ್ಷ್ಮದರ್ಶಕ ಯಂತ್ರದಿಂದ ಹೊರಬೀಳುವುದುಂಟು.

ಸಾಮಾನ್ಯವಾಗಿ ರೋಗಲಕ್ಷಣವನ್ನು ಮತ್ತು ರೋಗಚಾರಿತ್ರ್ಯವನ್ನು ತರುಣ ವೈದ್ಯ ಕೇಳಿ ತಿಳಿಯುತ್ತಾನೆ. ರೋಗಿಯ ಹೇಳಿಕೆಯನ್ನು ಊಹಿಸಿ ತಿಳಿಯುವುದು ಸ್ವಲ್ಪ ಕಷ್ಟವೆ. ಆದರೂ ಅನುಭವಿಕ ರೋಗಿಯ ಹೇಳಿಕೆಯನ್ನು ಚೆನ್ನಾಗಿ ಗ್ರಹಿಸುತ್ತಾದೆ. ಹಳೆಯ ಸಾಮಿತಿಯೊಂದಿವೆ. "ವೈದ್ಯ

ನಿಗೆ ಮತ್ತು ವಕೀಲನಿಗೆ ನಿಜವನ್ನೇ ನುಡಿ" ಎಂದು. ಈ ಮಾತು ಸತ್ಯವಾದದ್ದು. ರೋಗಿ ಸತ್ಯವನ್ನೇ ನುಡಿಯುವದಾದರೂ ಅದನ್ನು ಕಷ್ಟದಿಂದಲೇ ನುಡಿಯುವನು. ತಮ್ಮ ಬೇನೆಯ ನೋವನ್ನು ಸರಿಯಾಗಿ ಅರ್ಥವಾಗುವಂತೆ ವೈದ್ಯರಿಗೆ ವಿವರಿಸಿ ಹೇಳುವುದು ರೋಗಿಗಳಿಗೆ ಬಾರದು. ತಲೆಯಲ್ಲಿ ಮತ್ತು ಹೊಟ್ಟೆಯಲ್ಲಿ ಕಾಣಿಸಿ ಕೊಳ್ಳುವ ನೋವು, ಆ ನೋವಿನ ಪ್ರಮಾಣ ಇವುಗಳ ವಿವರವನ್ನು ಯಾವ ರೋಗಿಯೂ ವೈದ್ಯನಿಗೆ ಸರಿಯಾಗಿ ವಿವರಿಸಲಾರ. ರೋಗಿ, ವೈದ್ಯನಿಗೆ ಹೀಗೆ ತನ್ನ ರೋಗದ ಚಾರಿತ್ರ್ಯವನ್ನು ವಿವರಿಸುವಾಗ ವೈದ್ಯನಿಗೆ ಹೊಸ ಸಮಸ್ಯೆ ಯನ್ನು ತಂದೊಡ್ಡುವನು.

ರೋಗಿಗಳು ತಮ್ಮ ಕಾಹಿಲೆಯ ಅಥವಾ ಬೇನೆಯ ವಿವರಣೆಯನ್ನು ಅದ್ಭುತವಾಗಿಯೇ ಹೇಳಿಕೊಳ್ಳುವರು. ರೋಗಿಗಳು ಉಪಯೋಗಿಸುವ ಗುಣ ವಾಚಕ ಪದಗಳನ್ನು ವೈದ್ಯ ಚೆನ್ನಾಗಿ ವಿಮರ್ಶಿಸಿ ತಿಳಿದುಕೊಳ್ಳಬೇಕು. "ನನಗೆ ಭಯಂಕರ ನೋವಾಗುತ್ತಿದೆ" ಎಂದು ರೋಗಿ ಹೇಳಿಕೊಂಡಾಗ, ವೈದ್ಯ ಪೇಚಾಟಕ್ಕೆ ಸಿಕ್ಕಿಕೊಳ್ಳುತ್ತಾನೆ. "ಭಯಂಕರ ನೋವು" ಎಂಬುದರ ಅರ್ಥ ವೇನು ಎಂದು ತಿಳಿದುಕೊಳ್ಳಲು ವೈದ್ಯ ಪ್ರಯತ್ನಿಸಬೇಕು. ರೋಗಿ ಓದು ವಾಗಲೋ ಸಿಗರೇಟು ಸೇದುವಾಗಲೋ ಒಂದು ಬಗೆಯ ನೋವನ್ನೋ ಬಾಧೆ ಯನ್ನೋ ಅನುಭವಿಸಿರಬೇಕು ಎಂದು ವೈದ್ಯ ತಿಳಿಯುತ್ತಾನೆ. ಠಕ್ಕು, ಬಿಗಿ ತುಟಿಯಿಂದ ಬಿಗ್ಗಿಕೊಂಡ ರೋಗಿ ತನ್ನ ರೋಗಲಕ್ಷಣವನ್ನು ಹೇಳಿಕೊಳ್ಳ ಬೇಕಾದುದಿಲ್ಲ. ಅವನ ರೋಗಲಕ್ಷಣವನ್ನು ಅವನು ಬಿಗ್ಗಿಕೊಂಡಿರುವುದ ರಿಂದಲೇ ವ್ಯಕ್ತವಾಗುವುದು. ಇಡೀ ರಾತ್ರಿ ನಿದ್ರೆಬಾರದ, ಮೂರು ವಾರಗಳ ವರೆಗೆ ಆಹಾರ ಸೇವಿಸದ ಮತ್ತು ಇದರ ಪರಿಣಾಮವಾಗಿ ಶರೀರತೂಕ ಕಳೆದು ಕೊಳ್ಳದ ರೋಗಿಯಿಂದ ವಿಷಯವನ್ನು ಹೊರಪಡಿಸಿ, ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ವೈದ್ಯ ತನ್ನ ಜಾಣತನವನ್ನು ಉಪಯೋಗಿಸಬೇಕು. ಏಕೆಂದರೆ, ನಿಜವಾದ ಕಾರಣ ನೇರವಾಗಿ ಹೊರಬೀಳುವುದಿಲ್ಲ. ಒಬ್ಬನ ಅತಿಹೇಳಿಕೆಯಲ್ಲಿ ನಿಜಾಂಶ ಕಾಣಬರುವುದಿಲ್ಲ. ಉದ್ದೇಶಪೂರ್ವಕವಾಗಿ ಹೇಳಿಕೊಂಡ ತಪ್ಪು ತಪ್ಪಾದ ರೋಗವಿವರಣೆಯನ್ನು ಸುಲಭವಾಗಿ ಕಂಡುಕೊಳ್ಳಬಹುದು. ಹೀಗೆ ಕಂಡುಕೊಳ್ಳುವುದು ಸಾಮರ್ಥ್ಯದಿಂದ ಮತ್ತು ಅಳೆದು ನೋಡುವುದು ಅನು ಭವಸಾಧ್ಯದಿಂದ ಮಾತ್ರ ಆಗುವುದು.

ರೋಗ ಚಾರಿತ್ರ್ಯವನ್ನು ತಿಳಿದು ವಿಮರ್ಶಿಸಿಕೊಂಡಮೇಲೆ ರೋಗಲಕ್ಷಣಕ್ಕೆ ತಕ್ಕುದಾದ ಚಿಕಿತ್ಸೆ ಯಾವುದಿದೆಯೆಂದು ತಿಳಿಯಬಹುದು. ಇದರ ಜೊತೆಗೆ ಪ್ರಾಯೋಗಿಕ ಪರೀಕ್ಷೆಯಿಂದಲೂ ರೋಗದ ಅಜ್ಞಾಂಶವನ್ನು "ಎಕ್ಸ್‌ರೇ" ಮೂಲಕವಾಗಿಯೂ, ರಸಾಯನಿಕ ಪರೀಕ್ಷೆಯ ಮೂಲಕವಾಗಿಯೂ ಕಂಡುಕೊಳ್ಳಬಹುದು. ಕೆಲವು ಸಂದರ್ಭಗಳಲ್ಲಿ ಈ ಮೂರು ವಿಧಾನದಿಂದಲೂ ಚಿಕಿತ್ಸೆಗೆ ತಕ್ಕ ಮಾರ್ಗ ಕಂಡುಕೊಳ್ಳಬಹುದು. ರೋಗಕ್ಕೆ ಶಸ್ತ್ರಚಿಕಿತ್ಸೆ ಸಾಧುವೇ ಅಸಾಧುವೇ ಎಂದು ನಿಶ್ಚಯಿಸಿಕೊಳ್ಳಬೇಕು.

ರೋಗಲಕ್ಷಣವನ್ನು ಪರೀಕ್ಷಿಸಿ ತಿಳಿದ ಬಳಿಕ ವೈದ್ಯ ಚಿಕಿತ್ಸೆಯ ರೂಪ ಕಂಡುಕೊಳ್ಳಬೇಕು. ರೋಗಿಗೆ ಶಸ್ತ್ರಚಿಕಿತ್ಸೆ ಮಾಡುವುದಕ್ಕೆ ಮೊದಲು ವೈದ್ಯನು ಮಾಡಬೇಕಾಗಿರುವ ಶಸ್ತ್ರಚಿಕಿತ್ಸೆಯನ್ನು ತಾನೇ ಯೋಚಿಸಿ ತೀರ್ಮಾನಿಸಿಕೊಳ್ಳುತ್ತಾನೆ. ರೋಗಿಯ ಹೇಳಿಕೆ ಮತ್ತು ವೈದ್ಯ ಗ್ರಹಿಸದ ರೋಗಲಕ್ಷಣದ ಮೇಲೆ ಶಸ್ತ್ರಚಿಕಿತ್ಸೆ ಮಾಡಬೇಕೇ ಅಥವಾ ಇಲ್ಲವೇ ಎಂಬ ಬಗ್ಗೆ ನಿರ್ಣಯವಾಗುವುದು. ರೋಗಿಯ ವೈಯುಕ್ತಿ[illegible] ಲಕ್ಷಣ ಎಂದರೆ, ವಯಸ್ಸಾಗಿರುವಿಕೆ, ಪ್ರಾಯ, ಸ್ಥೂಲ, ಕೃಶ ಮೊದಲಾದುವು [illegible]ತ್ತು ಅವನ ಮನಬಲಿಕೆ ಮುಂತಾದುವನ್ನು ಗ್ರಹಿಸಿಯೇ ವೈದ್ಯನು ಶಸ್ತ್ರಚಿ[illegible] ಮಾಡುವುದು.

ಎಲ್ಲಾ ಬಗೆಯ ರೋಗಿಗಳಿಗೂ ಶಸ್ತ್ರಚಿಕಿತ್ಸೆ ಆಗಬೇಕಾದುದಿಲ್ಲ. ಶಸ್ತ್ರವೈದ್ಯ ರೋಗಿಗೆ ಔಷಧ ಕೊಟ್ಟಕೂಡಲೇ ಚಿಕಿತ್ಸಕನಾಗುತ್ತಾನೆ. ವೈದ್ಯವೃತ್ತಿಯಲ್ಲಿ ಶಸ್ತ್ರಚಿಕಿತ್ಸೆಯೇ ಕುತೂಹಲಕಾರಿಯಾದುದು. ಶಸ್ತ್ರಕ್ರಿಯೆಗೆ ಹಸ್ತಕೌಶಲ, ತಾಂತ್ರಿಕಜ್ಞಾನ, ಅನುಭವವೇ ಹೆಚ್ಚು ಪ್ರಾಧಾನ್ಯ. ಮಾನಸಿಕ ವ್ಯಾಪಾರ (ಆಲೋಚಿಸುವ ವಿಷಯ) ಅಲ್ಲಿ ಅಷ್ಟಿರುವುದಿಲ್ಲ. ತಾಂತ್ರಿಕ ಜ್ಞಾನವನ್ನು ಸುಲಭವಾಗಿ ಪಡೆಯಬಹುದು. ತಾಂತ್ರಿಕ ಉಪಯೋಗ ವಿತರಣೆಯಲ್ಲಿ ಮಾತ್ರ ತಾರತಮ್ಯ ಜ್ಞಾನಬೇಕು.

ಶಸ್ತ್ರಚಿಕಿತ್ಸೆ ಆಗಬೇಕೆ ಬೇಡವೆ ಎಂಬುದು ಸಾಪೇಕ್ಷೆಯಿಂದ ನಿರ್ಣಯವಾಗತಕ್ಕದ್ದು. ಶಸ್ತ್ರ ಚಿಕಿತ್ಸೆಗೆ ಕಾಲ, ರೋಗಿಯ ಸ್ಥಿತಿ ಉತ್ತಮವಾಗಿದೆ ಎಂದು ಕಂಡುಬಂದಾಗ ನಡೆಸಿದ ಶಸ್ತ್ರಕ್ರಿಯೆಯಿಂದ ರೋಗಿಗೆ ಲಾಭವಾಗುವುದು. ರೋಗಿ ಇದರಿಂದ ನಿಜವಾಗಿಯೂ ಗುಣಕಾಣುತ್ತಾನೆ. ಆದರೆ

ಶಸ್ತ್ರಕ್ರಿಯೆಯಿಂದ ಆಜೀವಪರ್ಯಂತ ಅಲ್ಪಸ್ವಲ್ಪ ಅಸ್ವಸ್ಥತೆಗೆ ಕಾರಣನಾಗುವುದುಂಟು.

ಶಸ್ತ್ರಚಿಕಿತ್ಸೆ ಆಗಬೇಕೇ ಬೇಡವೇ ಎಂಬ ಭಿನ್ನಾಭಿಪ್ರಾಯ ತಲೆದೋರುವುದುಂಟು. ಈ ಭಿನ್ನಭಿಪ್ರಾಯ ಜನ ಸಾಮಾನ್ಯನಿಗೆ ವಿಚಿತ್ರವೆನಿಸಬಹುದು. ವೈದ್ಯರು ಸದಾ ಒಮ್ಮತದಿಂದ ಕೆಲಸಮಾಡುತ್ತಿರುತ್ತಾರೆ. ಅವರಲ್ಲಿ ಭಿನ್ನಾಭಿಪ್ರಾಯಕ್ಕೆ ಕಾರಣವಾಗಿದೆಯೆಂದು ಕಂಡುಬಂದಾಗ, ಜನಸಾಮಾನ್ಯರಿಗೆ ಇದು ಆನಂದವಾಗಿ ತೋರಿಬರುವುದು. ನವೀನತೆಯಲ್ಲಿ ಜನರಿಗೆ ಹೆಚ್ಚು ಪ್ರೀತಿ. ಭಿನ್ನಭಿಪ್ರಾಯದಲ್ಲಿ ಕುತೂಹಲವೇಕೋ ತಿಳಿಯದು. ವಕೀಲರು ಸಮ್ಮತ ಎಂದಾಗ ಆಗ ನವೀನತೆಯಿಲ್ಲದ್ದು ವೈದ್ಯರಲ್ಲಿ ಸಮ್ಮತಿಯಿಲ್ಲ ಎಂದಾಗ ನಗೆಯಾಟವೇಕೆ ತಿಳಿಯದು. ಮುಕ್ತದ್ವಾರ ಸೇರಲು ತಾವು ಕಂಡದಾರಿಯೇ ಶ್ರೇಷ್ಠವೆಂದು ಮಂತ್ರಿಗಳು ತಮ್ಮ ತಮ್ಮಲ್ಲಿ ಭಿನ್ನಾಭಿಪ್ರಾಯಪಡುವುದಿಲ್ಲವೆ?

ಶಸ್ತ್ರವಿದ್ಯೆಯನ್ನು ಅನುಭವಜ್ಞಾನದಿಂದ ಪಡೆದ ಬಗೆಯನ್ನು ನಾನು ಹತ್ತು ಸಂಪುಟದಲ್ಲಿ ಸಂಗ್ರಹಿಸಿದ್ದೇನೆ. ನಾನು ರಚಿಸಿರುವ ಈ ಗ್ರಂಥದಲ್ಲಿ ಶಸ್ತ್ರವೈದ್ಯ ರೋಗ ಶಾಸ್ತ್ರಗ್ರಂಥದಲ್ಲಿ ರೋಗಿಗಳನ್ನು ಕಂಡು, ಪರಿಶೀಲಿಸಿ, ತೋರಿದ ಅಭಿಪ್ರಾಯಗಳನ್ನು ಚಿತ್ರಿಸಿದ್ದೇನೆ. ರೋಗಿಗಳೇ ಈ ಅನುಭವ ವಿವರಣೆಗೆ ಕಾರಣರಾಗಿದ್ದಾರೆ.

೬

ಈ ಕಾಲದ ತರುಣ ವೈದ್ಯರನೇಕರು ದೊಡ್ಡ ವೈದ್ಯಾಲಯದಲ್ಲಿರುವಂತೆ ಸೌಕರ್ಯವಿರಬೇಕು, ಇಲ್ಲದಿದ್ದಲ್ಲಿ ಶಸ್ತ್ರಚಿಕಿತ್ಸೆ ಮಾಡುವುದಕ್ಕಾಗುವುದಿಲ್ಲವೆನ್ನುತ್ತಾರೆ. ಹಳೆಯ ವೈದ್ಯರು ಕೂಡ ಶಸ್ತ್ರಚಿಕಿತ್ಸೆ ಮಾಡಲು ಅಸಮರ್ಥರೆ. ವೈದ್ಯಾಲಯದ ಸೌಕರ್ಯವಿಲ್ಲವೆಂಬ ನೆಪ ಹೇಳಿ ತಪ್ಪಿಸಿಕೊಳ್ಳುತ್ತಾರೆ. ಹೀಗೆ ತಪ್ಪಿಸಿಕೊಳ್ಳುವುದು ಎಂದರೆ ತಮ್ಮ ಅಸಮರ್ಥತೆಯನ್ನು ತೋರಿಗೊಂಡಂತೆಯೇ ಸರಿ.

ಪಾಕಶಾಲಾ ಶಸ್ತ್ರವೈದ್ಯ (Kitchen Surgery) ಅಥವಾ ಕಚ್ಚಾ ಶಸ್ತ್ರವೈದ್ಯ ಪದ್ಧತಿ ನಿರುಪಯೋಗವಾಗಬಾರದು. ಈ ಪದ್ಧತಿಯು ನಾಶವಾದಲ್ಲಿ ನಾವು ಅಮೂಲ್ಯ ಪದ್ಧತಿಯೊಂದನ್ನು ನಾವು ಕಳೆದುಕೊಂಡಂತಾಗುವುದು. ಶಸ್ತ್ರವೈದ್ಯ ನಿಜವಾದ ಫಲಿತಾಂಶ ಕಾಣುತ್ತಾನೆ. ಈ ಅಂಶದ ಬಗ್ಗೆ ಚರ್ಚೆ ಅನಾವಶ್ಯಕ.

ಫಲಿತಾಂಶ ಕಂಡುಬಂತು ಎಂಬುದು ರೋಗಿಗೆ ಮುಖ್ಯವೇ ವಿನಾ ಅದು ಹೇಗೆ ಯಾವ ರೀತಿ ಎಂಬುದು ಅವನಿಗೆ ಅತ್ಯಗತ್ಯವಾದುದಲ್ಲ.

ಕಚ್ಚಾ ಶಸ್ತ್ರವಿದ್ಯೆ ಎರಡು ಮುಖ್ಯಾಂಶವನ್ನು ಒತ್ತಿ ಹೇಳುತ್ತದೆ. ಈ ಎರಡು ಮುಖ್ಯಾಂಶಗಳೂ ಸುಧಾರಿಸಿದ ಶಸ್ತ್ರಚಿಕಿತ್ಸಾಭಾಗಕ್ಕೆ ಮುಖ್ಯವಾದದ್ದಾಗಿದೆ. ಚಿಕಿತ್ಸೆ ನಡೆಸುವ ವೈದ್ಯನಿಗೂ ಚಿಕಿತ್ಸೆ ಪಡೆಯುವ ರೋಗಿಗೂ ಸಂತೋಷವಿರಬೇಕು. ನಾನು ಅನೇಕವರ್ಷ ಶಸ್ತ್ರಚಿಕಿತ್ಸೆ ನಡೆಸಿದ್ದೇನೆ. ನನಗೆ ಅನೇಕ ಸಮರ್ಥ ಸಹೋದ್ಯೋಗಿಗಳಿದ್ದರು. ನಾನು ಅನೇಕ ಉತ್ತಮ ಶಸ್ತ್ರಚಿಕಿತ್ಸೆಯನ್ನು ಅನುಕೂಲವಿಲ್ಲದ ಸಂದರ್ಭದಲ್ಲಿ ಕಚ್ಚಾ ರೀತಿಯಿಂದಲೇ ನಡೆಸಿಬಿಟ್ಟದ್ದೇನೆ.

ಕಚ್ಚಾ ಶಸ್ತ್ರವೈದ್ಯ ನಡೆಸುವುದಕ್ಕಾಗಿ ನಾನು ತಾಂತ್ರಿಕವನ್ನು ತಿಳಿಯಬೇಕಾಯಿತು. ಹಿಂದೆ ಗಾಯಗೊಂಡವರನ್ನು ಮಾತ್ರ ಶಸ್ತ್ರವೈದ್ಯ ನೋಡುತ್ತಿದ್ದ, ಚಿಕಿತ್ಸೆ ಮಾಡುತ್ತಿದ್ದ. ನಾನು ಶಸ್ತ್ರಚಿಕಿತ್ಸೆ ನಡೆಸುತ್ತಿದ್ದಾಗಲೂ ಏಕಾಣುಜೀವಿಶಾಸ್ತ್ರವನ್ನು (**Bacteriology**) ಬೋಧಿಸುತ್ತಿದ್ದೆ. ಚಿಕಿತ್ಸೆಗೆ ಮೊದಲು ನಾನೇ ಎರಡು ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಿದ್ದೆ. ಕೈಗಳನ್ನು ಶುದ್ಧೀಕರಿಸಿಕೊಳ್ಳುವುದು ಮೊದಲನೆಯದು. ನಿಶ್ವಾಸೋಚ್ಛ್ವಾಸದಿಂದ ಸೋಂಕು ರೋಗದಮೇಲೆ ಆಗುವ ಪರಿಣಾಮವನ್ನು ನೋಡಿಕೊಳ್ಳುವುದು ಎರಡನೆಯದು. ಕೈಗಳನ್ನು ಹೇಗೆ ಶುದ್ಧೀಕರಿಸಿಕೊಳ್ಳುವುದು ಎಂದರೆ, ಕೈಗಳನ್ನು ತೊಳೆದು ರಸಾಯನಿಕ ದ್ರವದಲ್ಲಿ ಅದ್ದಿ ಉಜ್ಜಿ ತೊಳೆದುಕೊಳ್ಳುವುದು. ಇದರಿಂದ ಕೈಚರ್ಮವು ಶುದ್ಧಿಯಾಗುತ್ತಿತ್ತೇ ಎಂದು ತೋರಿಗೊಡಲು ವಿಫಲನಾದೆ. ಕೈಗಳನ್ನು ಉಜ್ಜಿಕೊಂಡಮೇಲೆ, ರಸಾಯನಿಕದಲ್ಲಿ ಅದ್ದುವುದರಿಂದ ಅಲ್ಲಿ ಹೇಗೆ ಸೂಕ್ಷ್ಮಜೀವಿಗಳು ಸಾಯುತ್ತಿದ್ದವೋ ತಿಳಿಯದು. ರಸಾಯನಿಕ ದ್ರವವು ಸೂಕ್ಷ್ಮಜೀವಿಗಳನ್ನು ನಾಶಪಡಿಸದು ಎಂದು ತಿಳಿದಮೇಲೆ ಪ್ರಯೋಗಶಾಲೆಯಲ್ಲಿ ರಸಾಯನಿಕ ಉಪಯೋಗಿಸುವುದನ್ನು ಬಿಟ್ಟುಬಿಟ್ಟೆ.

ಶಸ್ತ್ರಚಿಕಿತ್ಸೆ ಮಾಡುವಾಗ ಉಪಯೋಗಿಸುವ ಮುಖ ಮುಸುಕು (**Mask**) ಸೋಂಕನ್ನು ತಡೆಗಟ್ಟುವುದು. ಹೇಗೆ ಸೋಂಕು ತಡೆಗಟ್ಟುವುದು ಎಂಬ ಬಗೆಯನ್ನು ತಿಳಿಯಲು ನಾನು ಅನೇಕಸಾರಿ ಪ್ರಯೋಗಪರೀಕ್ಷೆ ನಡೆಸಿದೆ.

ಎರಡು ತಟ್ಟೆಗಳಲ್ಲಿ ಅಸ್ಥಿರಜ್ಜನ್ನು (Gelatin) ಗಾಳಿಯಲ್ಲಿ ಆರಲುಬಿಟ್ಟೆ. ಶಸ್ತ್ರ ಚಿಕಿತ್ಸೆ ಮಾಡುವಾಗ ನಿಶ್ವಾಸಗಾಳಿಯನ್ನು ಅಸ್ಥಿರಜ್ಜಿನ ತಟ್ಟೆಯಮೇಲೆ ಬಿಟ್ಟು, ಇನ್ನೊಂದು ಮಾದರಿ ಅಸ್ಥಿರಜ್ಜನ್ನು ಬೇರೆ ತಟ್ಟೆಯಲ್ಲಿಟ್ಟು ನಿಶ್ವಾವು ತಗುಲ ದಂತೆ ಗಾಳಿಯಲ್ಲಿ ದೂರವಾಗಿ ಆರಲುಬಿಟ್ಟೆ. ಈ ಎರಡರಲ್ಲೂ ನನಗೆ ಯಾವ ವ್ಯತ್ಯಾಸವೂ ಕಾಣಬರಲಿಲ್ಲ. ಈ ಬಗ್ಗೆ ಅನೇಕಸಾರಿ ಪ್ರಯೋಗ ಪರೀಕ್ಷೆ ನಡೆಸಿ ವಿಫಲನಾದೆ. ಶಸ್ತ್ರಚಿಕಿತ್ಸೆ ಮಾಡುವಾಗ ಬಾಯಿ ತೆರೆದು ಕೊಂಡಿರಬಾರದು. ಮುಖ ಮುಸುಕು ಹಾಕಿಕೊಳ್ಳಬೇಕಾಗಿಲ್ಲ ಎಂದು ಕಂಡು ಕೊಂಡೆ.

ವಿಷಾಣುರಹಿತ (Aseptic) ಗಾಯಕ್ಕೆ ತಕ್ಷಣ ಶಸ್ತ್ರ ಚಿಕಿತ್ಸೆ ನಡೆಸಿ ದರೆ ಏನೂ ಬಾಧಕವಿಲ್ಲ. ನನ್ನ ವೈದ್ಯಕೀಯ ವೃತ್ತಿಯ ಮೊದಲಲ್ಲಿ ಅನೇಕ ಅದ್ಭುತ ಅನುಭವವನ್ನು ಪಡೆದೆ. ಪರಿಚಿತ ಶಸ್ತ್ರವೈದ್ಯನೊಬ್ಬ ಶರೀರಲಕ್ಷಣ ಶಾಸ್ತ್ರ ಪರಿಣಿತನಾಗಿದ್ದ. ಅವನಿಗೆ ವಿಶೇಷ ಅನುಭವವಿತ್ತು. ಬಹಳ ವರ್ಷ ಗಳ ಮೇಲೆ ಅವನು ಗಾಯ ಕೊಳೆಯದಂತೆ (ನಿರ್ವಿಷೀಕರಣ) ಚಿಕಿತ್ಸೆಯನ್ನು ಅಭ್ಯಾಸಮಾಡಲು ಪ್ರಯತ್ನಿಸಿದ. ಈ ವಿಷಯ ಭಾಗವನ್ನು ಅಷ್ಟು ಉತ್ತಮ ವಾಗಿ ಅವನು ಕಲಿಯಲಾಗಲಿಲ್ಲ. ತಾಂತ್ರಿಕ ಪದ್ಧತಿಯನ್ನು ಉಪೇಕ್ಷಿಸಿ ನಗೆಗೀಡಾದ. ಉಪೇಕ್ಷಿಸಿದುದರಿಂದ ಸೋಂಕು ತಗುಲಿ ಇವನಿಗೆ ಜ್ವರಬಂತು. ಹದಿನೈದು ನಿಮಿಷ ಚಿಕಿತ್ಸೆ ನಡೆಸಿ, ಅನೇಕ ಗಂಟೆಗಳಕಾಲ ವಿಶ್ರಾಂತಿ ಪಡೆಯು ತ್ತಿದ್ದ. ನಿರ್ವಿಷೀಕೃತ ತಂತ್ರ ತಿಳಿಯುವುದರಲ್ಲಿ ನಾವು ಆಸಕ್ತರಾಗಿದ್ದೆವು. ತಂತ್ರವು ಪೂರ್ಣವಾಗಿ ನಮಗೆ ತಿಳಿಯದಿದ್ದರಿಂದ ಚಿಕಿತ್ಸೆ ನಡೆಸಲಾಗಲಿಲ್ಲ.

ನಿರ್ವಿಷೀಕೃತ ಶಸ್ತ್ರಚಿಕಿತ್ಸೆ ಮಾಡುವಾಗ ಕೈಗಳು ಸ್ವಚ್ಛವಾಗಿರಬೇಕು. ಉಪಕರಣಗಳು ಸ್ವಚ್ಛವಾಗಿರಬೇಕು. ಸಿದ್ಧತೆ ಬೇಕಾದಷ್ಟಿರಲಿ, ಶಸ್ತ್ರವೈದ್ಯ ನಿಗೆ ಈ ಬಗ್ಗೆ ಹೆಚ್ಚು ಹೇಳಬೇಕಾದುದಿಲ್ಲ.

ಕಚ್ಚಾ ಶಸ್ತ್ರವೈದ್ಯ ಚಿಕಿತ್ಸೆಯನ್ನು ಮಾಡುವುದಕ್ಕಾಗಿ ದೂರ ಪ್ರಯಾಣ ಮಾಡಿ ಆಯಾಸಗೊಳ್ಳಬೇಕಾಗಿಲ್ಲ. ಆಯಾಸಗೊಂಡವನು ಉತ್ತಮ ಚಿಕಿತ್ಸೆ ಹೇಗೆ ಮಾಡಿಯಾನು ?

ವೇದನ ಪ್ರತಿಬಂಧಿ ಗೊತ್ತಿಲ್ಲದಿದ್ದಲ್ಲಿ ಶಸ್ತ್ರಚಿಕಿತ್ಸೆ ಮಾಡುವುದು ಕಷ್ಟ. ಇದು ಮೊದಲಾಗಿ ಶಸ್ತ್ರವೈದ್ಯನಿಗೆ ಗೊತ್ತಿರಬೇಕು. ಅರೆನಿದ್ರೆಯಲ್ಲಿರುವ

ರೋಗಿಗೆ ಶಸ್ತ್ರಚಿಕಿತ್ಸೆಯನ್ನು ಮಾಡುವುದು ಕಷ್ಟ. ಕಿಬ್ಬೊಟ್ಟೆಯನ್ನು ಕೊಯ್ಯು ವಾಗ ಈ ಕಷ್ಟ ತಿಳಿಯುವುದು. ಉದರದ ಪದರದಲ್ಲಿ ಕಾಣಿಸಿಕೊಳ್ಳುವ ಬಾವು, ಗ್ರಂಥಿಯನ್ನು ಶಸ್ತ್ರಚಿಕಿತ್ಸೆಯಿಂದ ತೆಗೆಯುವುದು ಎಂದರೆ, ನಾಲ್ಕೂ ಕಡೆ ಬಲೆ ಬಿಗಿದಿರುವ ತೋಟದೊಳಗಿನಿಂದ ಕಲ್ಲಂಗಡಿ ಹಣ್ಣನ್ನು ಕದ್ದು ತಂದಂತೆಯೇ ಸರಿ. ಒಂದು ಗಂಟೆ ಅಥವಾ ಹೆಚ್ಚುಹೊತ್ತು ರೋಗಿ ನಿದ್ರಿಸು ತ್ತಿರಬೇಕು. ಶಸ್ತ್ರವೈದ್ಯ, ರೋಗಿಯನ್ನು ಹೆಚ್ಚು ಆಕಾಶದ್ರವ (Ether) ಸುಪ್ತಿಯ ಪ್ರಭಾವಕ್ಕೆ ಒಡ್ಡುತ್ತಾನೆ.

ಶಸ್ತ್ರಚಿಕಿತ್ಸೆಯ ಕಾಲದಲ್ಲಿ ವೈದ್ಯನ ಸಹಾಯಕ್ಕೆ ನುರಿತ ಜನರಿರಬೇಕು. ಸಹಾಯವಿಲ್ಲದಿದ್ದಲ್ಲಿ ತೊಂದರೆಯುಂಟಾಗುವುದು ಖಂಡಿತ. ಬಂಧಿಸಿಯನ್ನು (Clamp) ಹಿಡಿಯಲು ಪಾತ್ರೆಯನ್ನೇ ಹಿಡಿಯಹೋಗುತ್ತಾನೆ. ಉಪಕರಣ ಗಳನ್ನು ಬೇಗ ಎತ್ತಿಕೊಡಲು ಶಸ್ತ್ರವೈದ್ಯನ ನೆರವಿಗೆ ಅಗತ್ಯವಾಗಿ ಜನರಿರಬೇಕು.

ಗಾಯವನ್ನು ಹೊಲಿಯುವಾಗ ಸೂಜಿಯನ್ನು ಆಳವಾಗಿ ಚರ್ಮದೊಳಗೆ ಚುಚ್ಚಬೇಕಲ್ಲದೆ, ತೆಗೆಯುವಾಗ, ಚುಚ್ಚಿದ ಸೂಚಿಯನ್ನು ಎತ್ತುವಾಗ ಮತ್ತು ಕತ್ತರಿಯಿಂದ ಕತ್ತರಿಸುವಾಗ ಶಸ್ತ್ರವೈದ್ಯ ತನ್ನ ಹಸ್ತಕೌಶಲವನ್ನು, ತಂತ್ರ ನಿಪು ಣತೆಯನ್ನು ತೋರಬೇಕು.

ಒಂದಾದಮೇಲೆ ಒಂದು ಉಪಕರಣವನ್ನು ಎತ್ತಿಕೊಡಲು ಶಸ್ತ್ರವೈದ್ಯ ನಿಗೆ ಸಹಾಯಕರೊಬ್ಬರುಬೇಕು. ಹೀಗೆ ಎತ್ತಿಕೊಡುವ ಸಹೋದ್ಯೋಗಿ, ಈ ಕೆಲಸ ತನಗೆ ತಕ್ಕುದಲ್ಲವೆಂದು ತಿಳಿಯುತ್ತಾನೆ. ಸಹೋದ್ಯೋಗಿಗೆ ಎರಡು ಬಗೆಯ ಕಷ್ಟ. ವೈದ್ಯನಿಗೆ ಯಾವ ಉಪಕರಣಬೇಕು, ಯಾವುದನ್ನು ಕೇಳಿ ಯಾನು ಎಂದು ತಿಳಿದಕೂಡಲೇ ಅವನು ಅದನ್ನು ಎತ್ತಿಕೊಡಬೇಕು. ಅಭ್ಯಾಸ ಬಲದಿಂದ ಒಂದಾದಮೇಲೆ ಒಂದು ಉಪಕರಣವನ್ನು ತಡೆಯಿಲ್ಲದೆ ಎತ್ತಿಕೊಡ ಬಹುದು. ಚಿಕಿತ್ಸೆ ಮೊದಲಾದಮೇಲೆ, ಹಂತ ಹಂತವಾಗಿ ಏರಿದಂತೆ ಯಾವ ಉಪಕರಣ ಬೇಕಾಗುವುದು ಎಂಬುದನ್ನು ಅವನು ತಿಳಿಯುತ್ತಾನೆ. ಈ ಕೆಲಸ ತಕ್ಕುದಲ್ಲವೆಂದೂ, ಗೌರವಕ್ಕೆ ಹಾನಿಯೆಂದೂ ತಿಳಿಯಬೇಕಾಗಿಲ್ಲ.

ಶಸ್ತ್ರಚಿಕಿತ್ಸೆಯ ತಂತ್ರ ತಿಳಿಯುವ ವೈದ್ಯ ಮತ್ತು ಸಹೋದ್ಯೋಗಿ, ಕೈ ಚಳಕವನ್ನು ಮತ್ತು ಕುಶಲತೆಯನ್ನು ಪಡೆದುಕೊಳ್ಳದಿದ್ದಲ್ಲಿ, ಚಿಕಿತ್ಸೆಯ ವೇಳೆ ಯಲ್ಲಿ ಧೈರ್ಯದಿಂದ ಕತ್ತರಿಯನ್ನು ಹಿಡಿದು ಉಪಯೋಗಿಸಲಾರನು.

ಕಚ್ಚಾ ಶಸ್ತ್ರಚಿಕಿತ್ಸೆಯಿಂದ ಅನೇಕ ಉಪಯೋಗವಿದೆಯೆಂದು ಹೇಳಬಹುದು. ಬುದ್ಧಿವಂತ ಸಹೋದ್ಯೋಗಿಯೂ ಶಸ್ತ್ರಚಿಕಿತ್ಸೆಯ ವೇಳೆಯಲ್ಲಿ ಶಸ್ತ್ರವೈದ್ಯನಿಗೆ ತೊಡಕಾಗುವನು. ವೈದ್ಯ, ಚಿಕಿತ್ಸೆಯನ್ನು ಕುರಿತು ಯೋಚಿಸುತ್ತಾ ಕಾರ್ಯಮಗ್ನನಾಗಿರುವಾಗ ಅವನ ಸಹೋದ್ಯೋಗಿ ಭಯಂಕರ ಯೋಚನೆಯನ್ನು ಮಾಡುತ್ತಿರುತ್ತಾನೆ. ಅಪಕ್ವ ಶಸ್ತ್ರವೈದ್ಯನಿಗೆ ಸಹಾಯಕನೊಬ್ಬ ಬೇಕಿಲ್ಲ. ಅವನ ಉಪಕರಣಗಳು ಎಲ್ಲಿರುತ್ತವೆಯೋ ಅಲ್ಲಿಯೇ ಇರುತ್ತವೆ. ಅವನ್ನು ಅವನೇ ಎತ್ತಿಕೊಳ್ಳುತ್ತಾನೆ. ಕೆಲಸ ಮುಗಿದಕೂಡಲೇ ತಟ್ಟೆಯಲ್ಲಿಡುತ್ತಾನೆ. ಒಂದೂವರೆ ಅಡಿ ಒಳ ಅಗಲವಿರುವ ಬೋಗುಣಿಯಲ್ಲೇ (Dishpan) ಅವನ ಉಪಕರಣಗಳಿರುವುದು. ಉಪಕರಣಗಳನ್ನು ಎತ್ತಿ, ಉಜ್ಜಿ ತೊಳೆಯಲು ಮತ್ತು ಶಸ್ತ್ರಕ್ರಿಯೆಯಿಂದಾದ ಮತ್ತು ಇಲ್ಲದ ರಕ್ತವನ್ನು ಒರೆಸಲು ದಾದಿಯೇನೂ ಅವನ ಬಳಿ ಇರುವುದಿಲ್ಲ.

ವೈದ್ಯವೃತ್ತಿ ಅನುಸರಿಸುತ್ತಿರುವ ಸಹೋದ್ಯೋಗಿ ಸಾಧಾರಣವಾಗಿ ಭೀರು ಸ್ವಭಾವದವನಿರುತ್ತಾನೆ. ಇಂತಹವನಿಗೆ ವೈದ್ಯನ ಇಕ್ಕುಳ ಕೈಗೆ ಸಿಕ್ಕಿದಲ್ಲಿ ಎಷ್ಟೋ ಆನಂದವಾಗುವುದು. ಬೀರುಸ್ವಭಾವದವನಿಂದ ಏನೂ ಕೆಡಕಾಗದು. ಸಹೋದ್ಯೋಗಿಗೆ ಇಕ್ಕುಳ ಕೊಟ್ಟಲ್ಲಿ ಮಗುವಿನ ಕೈಗೆ ಕಲಕಲ ಸಪ್ಪಳ ಮಾಡುವ ಗಿಲಿಕೆ ಕೊಟ್ಟಂತಾಗುವುದು. ಅಂದರೆ ಹೆದರಲೇನೂ ಕಾರಣವಿರುವುದಿಲ್ಲ.

ಅನುಭವವಿಲ್ಲದ ಸಹಾಯಕನಿಂದ ವೈದ್ಯ ಪ್ರತಿಸಾರಿಯ ಶಸ್ತ್ರಚಿಕಿತ್ಸೆಯ ಸಮಯದಲ್ಲಿ ಹೊಸ ಸಮಸ್ಯೆಯನ್ನು ಎದುರಿಸಬೇಕಾಗುತ್ತಿತ್ತು. ಶಸ್ತ್ರ ಚಿಕಿತ್ಸೆಗೆ ಕೈಹಾಕುವ ಮೊದಲು ಯಾವ ಮಾರ್ಗ ಅನುಸರಿಸಬೇಕು ಎಂದವನು ಯೋಚಿಸಬೇಕಾಗುತ್ತಿತ್ತು. ಕೈಚೀಲ ಬಳಕೆಗೆ ಬಂದಮೇಲೆ, ಅದನ್ನು ತರಲು ಮರೆತವನಂತೆ ನಟಿಸಿ, ಶಸ್ತ್ರಕ್ರಿಯೆಯ ವೇಳೆಯಲ್ಲಿ ಸಹೋದ್ಯೋಗಿಗೆ ಕೈಚೀಲ ಧರಿಸುವಂತೆ ಹೇಳುತ್ತಿದ್ದೆ. ಅದನ್ನು ಮೊದಲಾಗಿ ಧರಿಸುವುವನು ಅಷ್ಟು ಸುಲಭವಾಗಿ ಹಾಕಿಕೊಳ್ಳಲಾಗುತ್ತಿರಲಿಲ್ಲ. ಅವನು ಕೈಚೀಲ ಧರಿಸಿ ಸಿದ್ಧವಾಗುವುದರೊಳಗಾಗಿ ಚಿಕಿತ್ಸೆಮಾಡಿ ಮುಗಿಸಿಬಿಡುತ್ತಿದ್ದೆ.

ಅಪಕ್ವ ಶಸ್ತ್ರಚಿಕಿತ್ಸೆಯಲ್ಲಿ ಬೇರೆಬೇರೆ ವಿಧಗಳಿವೆ. ಹೊಸ ಹೊಸ ಅಭಿರುಚಿ, ಹೊಸ ಹೊಸ ಸಮಸ್ಯೆ-ನವೀನತೆ ಇವುಗಳಲ್ಲಿ ಕಾಣಬರುತ್ತಿತ್ತು. ಒಬ್ಬನು ಅಪಕ್ವ ಶಸ್ತ್ರಚಿಕಿತ್ಸೆಯ ಸಮಯದಲ್ಲಿ ಆಜ್ಞೆಮಾಡಬಹುದು, ಆಜ್ಞೆಮಾಡಿದಂತೆ ತಾನೇ

ನಡೆಯದಿರಬಹುದು. ವೈದ್ಯಶಾಲೆಯ ಅಧಿಕಾರಿಯೆದುರಿಗೆ ಮೌನದಿಂದ ಕೆಲಸ ಮಾಡುವವರು, ಕಚ್ಚಾ ಚಿಕಿತ್ಸೆ ನಡೆಸುವಾತನೆದುರಿಗೆ ತಡೆಯಿಲ್ಲದೆ ಮಾತನಾಡುವರು. ಮಾತು ತಡೆಯಿಲ್ಲದೆ ಹೊರಬೀಳುತ್ತಿರುವುದು. ಆಜ್ಞೆ ಮಾಡುವವನಿಗೂ ತಡೆಯೆನ್ನುವುದು ಇರುವುದಿಲ್ಲ. ಆಧುನಿಕ ವೈದ್ಯಶಾಲೆಯ ಶಸ್ತ್ರಚಿಕಿತ್ಸಾವರಣದಲ್ಲಿ ಮಾತಿಗೆ ಅವಕಾಶವಿರುವುದಿಲ್ಲ, ಅಲ್ಲಿ ಎಲ್ಲರೂ ಮೌನಿಗಳೆ. ಅದೇ ಅಲ್ಲಿ ಕೂಡುವ ವೈದ್ಯಾಧಿಕಾರಿಗಳ ಮಾತಿಗೆ ತಡೆಯೇ ಇರುವುದಿಲ್ಲ. ಕಚ್ಚಾ ಶಸ್ತ್ರ ಚಿಕಿತ್ಸೆಯ ಕಾಲದಲ್ಲಿ ಎಲ್ಲರಿಗೂ ಧೈರ್ಯ ತಾನೇ ತಾನಾಗಿ ಬರುವುದು. ಶಸ್ತ್ರ ಚಿಕಿತ್ಸೆಯಾಗುವುದಕ್ಕಾಗಿ ಸೇರುವ ವೈದ್ಯರೆಲ್ಲರೂ ಜಾಣರೆ.

ಕಚ್ಚಾ ಶಸ್ತ್ರಕ್ರಿಯೆ ನಡೆಸುವವನು ತನ್ನ ತಪ್ಪಿಗೆ ಯಾರನ್ನೂ ದೂಷಿಸುವ ಹಾಗಿಲ್ಲ. ಆದರೆ ದೊಡ್ಡ ವೈದ್ಯಾಲಯದಲ್ಲಿ ಸೋಂಕು ರೋಗಕ್ಕೆ ಕಾರಣವಾಗರೆ ಅದು ಅಲ್ಲಿ ಶಸ್ತ್ರವೈದ್ಯನ ಹೊಣೆಯಾಗದು. ಶಸ್ತ್ರತಂತ್ರವನ್ನು ಮಾತ್ರ ಅಲ್ಲಿ ದೂಷಿಸುತ್ತಾರೆ. ಸೋಂಕುರೋಗ ತಗುಲದಿರಲೆಂದು ಅಲ್ಲಿ ಶುದ್ಧಿ ಮಾಡಿದ ಬಟ್ಟೆಯನ್ನು ರೋಗಿಗೆ ಹೊದ್ದಿಸುತ್ತಾರೆ. ವೈದ್ಯ ಬೆನ್ನಿಗೆ ಸಂಸ್ಕರಿಸಿದ ಚೌಕವನ್ನು ಕಟ್ಟಿಕೊಳ್ಳುವ ಪದ್ಧತಿ ಈಗ ಪ್ರಾರಂಭವಾಗಿದೆ. ಇದರಿಂದಾಗುವ ಪ್ರಯೋಜನವೇನೋ ನನಗೆ ತಿಳಿಯದು. ಗಾಯ ಮತ್ತು ಹುಣ್ಣಿನ ಮೇಲೆ ಯಾವ ವೈದ್ಯರೂ ಕೂಡಲು ಹೋಗುವುದಿಲ್ಲ. ಮುಂದಾಗಿ, ಮುಂಜಾಗ್ರತೆಯಿಂದಿದ್ದಲ್ಲಿ ನಷ್ಟವೇನೂ ಇಲ್ಲ.

ಶಸ್ತ್ರವೈದ್ಯ ಅಂಗರಚನಾರೀತಿಯಲ್ಲಿ ವ್ಯತಿರಿಕ್ತಕ್ರಮ ಕಂಡು ತೊಡಕಿಗೆ ಸಿಕ್ಕಿಕೊಂಡಾಗ, ಅವನು ಹೆಚ್ಚಿಗೆ ಉಪಕರಣವನ್ನು ಶಸ್ತ್ರಕ್ರಿಯಾ ಸಮಯದಲ್ಲಿ ತರಹೇಳಬಹುದು. ಅದು ಅವನಿಗೆ ಬೇಕಾಗದಿರಬಹುದು. ಉಪಕರಣವನ್ನಿಡುವ ಮೇಜನ್ನು ಅವನು ಬದಲಾಯಿಸಿಕೊಳ್ಳಬಹುದು. ಇದೆಲ್ಲಾ ಅವನ ಅನುಕೂಲಕ್ಕೆ ತಕ್ಕಂತೆ ಏರ್ಪಾಡಾಗಬಹುದು. ಶಸ್ತ್ರಕ್ರಿಯೆಗೆ ಹೆಚ್ಚು ಬೆಳಕು ಬೇಕೆಂದು ಕೇಳಬಹುದು. ಈ ಅತಿರೇಕದಿಂದ ಅವನು ಅಂಗರಚನಾರೀತಿಯಲ್ಲಿ ಕಾಣಿಸಿಕೊಂಡ ವ್ಯತಿರಿಕ್ತಕ್ರಮವನ್ನು ಕಂಡುಕೊಂಡಿಲ್ಲ, ತಿಳಿದುನೋಡಿಲ್ಲ, ಎಂದು ಅರ್ಥವಾಗಬಹುದು. ಅಂಗಚ್ಛೇದನ ಶಾಖೆಯಲ್ಲಿ ಚೆನ್ನಾಗಿ ತರಬೇತಿ ಹೊಂದಿದ ಶಸ್ತ್ರವೈದ್ಯ ಅಂಗರಚನೆಯ ವ್ಯತಿರಿಕ್ತಕ್ರಮವನ್ನು ಕಂಡು ಬೆದರುವುದಿಲ್ಲ.

ಕಚ್ಚಾವೈದ್ಯ, ಗಾಯಗೊಂಡ ರೋಗಿಯ ಅಂಗಭಾಗವನ್ನು ಪರೀಕ್ಷಿಸಿ ಶಸ್ತ್ರಕ್ರಿಯೆ ಮಾಡಬೇಕು. ರೋಗಿ ಮತ್ತು ಅವನ ಗಾಯ ಅಂಗಭಾಗವನ್ನು ನೋಡಿ ಪರೀಕ್ಷಿಸಿ, ಯಾವ ಚಿಕಿತ್ಸೆ ಮಾಡಬೇಕು ಎಂದು ತೋರದಿದ್ದಾಗ, ರೋಗಿಯ ಮನೆವೈದ್ಯನ (**Family Doctor**) ಸಹಾಯ ಕೋರಬೇಕು. ಮನೆ ವೈದ್ಯನ ಅನುಭವ ಅಥವಾ ಸಲಹೆ ಶಸ್ತ್ರವೈದ್ಯನಿಗೆ ಸಹಾಯವಾಗಬಹುದು. ಈ ಸಲಹೆ, ಅನುಭವ ಒಂದೊಂದುಸಾರಿ ಪ್ರಯೋಜನಕ್ಕೆ ಬಾರದೆಯೂ ಇರ ಬಹುದು. ಇದು ರೋಗಿಯ ನೈಜ ಪ್ರಕೃತಿಯನ್ನು ಅನುಸರಿಸುವುದು. ಸ್ಥಳೀಯ ವೈದ್ಯನಲ್ಲಿ ಶಸ್ತ್ರವೈದ್ಯನಿಗೆ ನಂಬಿಕೆಯಿರಬಹುದು ಅಥವಾ ಅವನ ಸಾಮರ್ಥ್ಯವನ್ನು ಕಂಡುಕೊಂಡಿರಬಹುದು. ಆದರೂ ಶಸ್ತ್ರಕ್ರಿಯೆ ನಡೆಸುವಾಗ ಮೊದಲು ತನ್ನದೇ ಆದ ತಂತ್ರ ಯೋಜನೆಯನ್ನು ಕುರಿತು ಯೋಚಿಸಬೇಕಾಗು ವುದು.

ಗಾಯಗೊಂಡ ಅಂಗಭಾಗವನ್ನು ಮಾತ್ರ ಚೆನ್ನಾಗಿ ಪರೀಕ್ಷಿಸಿ ಕಚ್ಚಾ ವೈದ್ಯ ಶಸ್ತ್ರಕ್ರಿಯೆ ನಡೆಸುವುದಿಲ್ಲ. ಗಾಳಿಬೆಳಕಿನಲ್ಲಿ ಕಂಡು ಬಂದಷ್ಟನ್ನು ಪರೀ ಕ್ಷಿಸಿ ಶಸ್ತ್ರಕ್ರಿಯೆ ನಡೆಸುತ್ತಾನೆ. ಈ ಕಾರಣದಿಂದ ರೋಗಿ ತನಗೆ ಶಸ್ತ್ರಕ್ರಿಯೆ ಆಗಬೇಕು ಎಂದಾಗ ದೂರದಲ್ಲಿರುವ ವೈದ್ಯಾಲಯಕ್ಕೆ ನಡೆದುಹೋಗುತ್ತಾನೆ ಎಂಬುದು ನಿಜ. ಮನೆಯಲ್ಲಿಯೇ ಶಸ್ತ್ರಕ್ರಿಯೆ ಆಗುವುದಿದ್ದರೆ ಮತ್ತು ಅದು ಉತ್ತಮವಾದುದಾಗಿದ್ದರೆ ಅಷ್ಟು ದೂರದ ವೈದ್ಯಾಲಯಕ್ಕೆ ಹೋಗುತ್ತಿದ್ದನೆ? ದೂರದ ವೈದ್ಯಾಲಯವೆಂದರೆ, ಅಲ್ಲಿಯ ಚಿಕಿತ್ಸೆಯೆಂದರೆ ರೋಗಿಗೆ ಏನೋ ಬೇಸರ, ಒಂದು ತರಹೆಯ ಜಿಗುಪ್ಸೆ.

ಶಸ್ತ್ರ ಚಿಕಿತ್ಸೆಯಾದ ನಂತರ ಭಯಕ್ಕಾಗಲೀ ಪ್ರತಿಫಲಕ್ಕಾಗಲೀ ಚಿಂತಿ ಸಲು ಕಾರಣವಿರುವುದಿಲ್ಲ. ಭಯಕ್ಕೆ ಕಾರಣವೇನು ಎಂದು ತಿಳಿಯಬೇಕಾ ಗಿಯೂ ಇಲ್ಲ. ಎಲ್ಲಾ ಗಾಯ ನೋವುಗಳಿಗೆ ಭಾರಿಯಾದ ಶಸ್ತ್ರಚಿಕಿತ್ಸೆ ಬೇಕಿಲ್ಲ. ಭೀತಿಯಿಂದ ನಡುಗುತ್ತಿರುವ ರೋಗಿಗೆ ಶಸ್ತ್ರಕ್ರಿಯೆ ಮಾಡುವುದಕ್ಕಾಗುವುದಿಲ್ಲ. ಶಸ್ತ್ರಕ್ರಿಯೆಯಾದಲ್ಲಿ ನಾನು ಉಳಿಯುವುದಿಲ್ಲ ಎಂದು ಮುಂದಾಗಿ ಹೇಳಿಕೊಂಡ ರೋಗಿಗಳು, ಶಸ್ತ್ರಕ್ರಿಯೆಯಾದ ಬಳಿಕ ಅವರು ತೀರಿಕೊಂಡಿದ್ದನ್ನು ಕೇಳಿ ದ್ದೇನೆ. ಹೀಗೆ ತೀರಿಕೊಳ್ಳುವವರ ಪಾಲಿಗೆ ಚಿಕಿತ್ಸೆ ಕಾರಣವಲ್ಲ; ಹೆದರಿ ಕೆಯೇ ಮುಖ್ಯಕಾರಣವೆಂದು ಕಂಡುಕೊಂಡಿದ್ದೇನೆ. ಶವ ಪರೀಕ್ಷಿಸಿದಾಗ ಈ

ಅಂಶ ಕಂಡು ತಿಳಿದಿದ್ದೇನೆ. ಅಕ್ಷರಶಃ ಇವರು–ಈ ತರಹೆಯ ಜನರು–ಸಾವಿಗೆ ಹೆದರಿ ಬೆದರುವವರು.

ರೋಗಿಯನ್ನು ಪರೀಕ್ಷಿಸಿ, ರೋಗಮೂಲವನ್ನು ಕಂಡುಕೊಂಡನಂತರ ಕಚ್ಚಾ ವೈದ್ಯ ಉಪಕರಣವನ್ನು ಪಾಕಶಾಲೆಯ ಒಲೆಯಮೇಲಿನ ಪಾತ್ರೆಯಲ್ಲಿ ಹಾಕಿ ಕುದಿಸಲು ಪ್ರಾರಂಭಿಸುವನು. ಉಪಕರಣ ಕುದಿದು ಸಿದ್ಧವಾಗುವುದರೊಳಗೆ ರೋಗಚಾರಿತ್ರ್ಯವನ್ನು ತಿಳಿದು ಪರೀಕ್ಷೆ ಮುಗಿಸುತ್ತಾನೆ. ಮೊದಲೇ ಭಯದಿಂದ ಕಂಗಾಲಾಗಿರುವ ರೋಗಿಗೆ ಧೈರ್ಯಹೇಳಿ, ಅವನು ಯಾವ ರೀತಿಯಲ್ಲಿಯೂ ಭಯಪಡಬೇಕಾದುದಿಲ್ಲವೆಂದು ಹೇಳಿ, ಅವನ ಅಧೈರ್ಯವನ್ನು ಕಳೆಯುವನು. ಉಪಕರಣ ಕುದಿದು ಸಿದ್ಧವಾಗುವವರೆಗೆ ತರುಣಿಯೊಬ್ಬಳು ವೈದ್ಯ ಮತ್ತು ರೋಗಿಯನ್ನು ರಂಜಿಸಲು ಪಿಯಾನೋ ವಾದ್ಯ ನುಡಿಸುತ್ತಿರುತ್ತಾಳೆ. ಒಮ್ಮೆ ತರುಣಿಯೊಬ್ಬಳು ವಾದ್ಯ ನುಡಿಸಿದಳಲ್ಲದೆ ನನಗಾಗಿ ಹಾಡಿದಳು. ವೈದ್ಯನೊಂದಿಗೆ ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ತೋರಿಗೊಂಡಳು. ಕೆಲವುಸಾರಿ ವಿನೋದಪ್ರಕೃತಿಯ ರೋಗಿ ತನ್ನ ಮಸೆಗಲ್ಲನ್ನು (**Whetstone**) ತೋರಿ "ಕತ್ತಿಯನ್ನು ಹರಿತಮಾಡಿಕೊಳ್ಳಿ" ಎಂದು ಹೇಳಿದ್ದುಂಟು. ಈ ಸಲಹೆ ಕೇವಲ ವಿನೋದಕ್ಕಾಗಿ ಅಂದುದಾದರೂ ಆಗಾಗ್ಗೆ ಈ ರೋಗಿಯಿಂದ ನಾನು ಸಹಾಯ ಪಡೆಯುತ್ತಿದ್ದೆ.

ಶಸ್ತ್ರಕ್ರಿಯೆಯಾಗಲಿದೆ, ಶಸ್ತ್ರವೈದ್ಯ ಬರುವವನಿದ್ದಾನೆ ಎಂದು ತಿಳಿದ ಕೂಡಲೇ ಮುಂದಾಗಿ ರೋಗಿಯ ಮನೆಯಲ್ಲಿ ಸಿದ್ಧತೆಯಾಗುತ್ತಲಿತ್ತು. ಉಪಕರಣಗಳನ್ನು ಮುಂದಾಗಿ ಕುದಿಸಲು ಒಲೆಯಮೇಲೆ ಇಡುತ್ತಿದ್ದರು. ಜರೂರಾಗಿ ಅಥವಾ ಅತ್ಯವಸರ ಪರಿಸ್ಥಿತಿಯಲ್ಲಿ ಶಸ್ತ್ರಕ್ರಿಯೆಯಾಗಬೇಕು ಎಂದಾಗ ಮೊದಲೇ ಸಿದ್ಧತೆ ಮಾಡಿಕೊಳ್ಳಲಾಗುತ್ತಿರಲಿಲ್ಲ. ಕೂಡಲೇ ಆಗಬೇಕಾಗಿತ್ತು.

ಆಗಬೇಕು, ಮುಂಚೆಯೇ ತಿಳಿದಿದ್ದು ಸಿದ್ಧತೆಯಾಗಬೇಕು ಎಂದಾಗ, ಹೆಚ್ಚು ಬೆಳಕಿರುವ ಕೋಣೆಯನ್ನು ಆರಿಸುತ್ತಿದ್ದರು. ಆ ಕೋಣೆಯಲ್ಲಿರುತ್ತಿದ್ದ ಎಲ್ಲಾ ಮರದ ಸಾಮಾನುಗಳನ್ನು ಮತ್ತು ಗೋಡೆಗೆ ಅಂಟಿಸಿದ್ದ ಚಿತ್ರಪಟಗಳನ್ನು ತೆಗೆದಿಡುತ್ತಿದ್ದರು. ಗೋಡೆ ಮತ್ತು ನೆಲವನ್ನು ಚೆನ್ನಾಗಿ ಗುಡಿಸಿ ತೊಳೆದು ಸ್ವಚ್ಛಗೊಳಿಸುತ್ತಿದ್ದರು. ಶಸ್ತ್ರಕ್ರಿಯೆ ನಡೆಯುತ್ತಿರುವಾಗ ಕುತೂಹಲಾಸಕ್ತರಾದ ಜನರು, ಕೋಣೆಯಲ್ಲಿ ಏನೋ ಮಾಡುತ್ತಿದ್ದಾರೆ ಎಂದು ಕಿಟಕಿಯಲ್ಲಿ ತಲೆಹಾಕಿ

ನೋಡಿಯಾರು ಎಂದು, ಕಿಟಕಿಗೆ ಕಾಗದ ಅಂಟಿಸಿ ಮೊಳೆ ಬಡಿಯುತ್ತಿದ್ದರು. ಗುಪ್ತದೇಹಭಾಗವನ್ನು ಪರೀಕ್ಷಿಸಿ ಶಸ್ತ್ರಕ್ರಿಯೆ ಮಾಡಬೇಕೆಂದಾಗ, ಇನ್ನೂ ಹೆಚ್ಚು ಎಚ್ಚರಿಕೆಯಿಂದ ಈ ಎಲ್ಲಾ ಸಿದ್ಧತೆಯನ್ನು ಮೊದಲೇ ಮಾಡಿಕೊಳ್ಳಬೇಕಾಗಿತ್ತು. ಕೈಗಳನ್ನು ತೊಳೆದುಕೊಳ್ಳಲು ಅರ್ಧಬೋಗುಣಿ ನೀರನ್ನು ಒಂದು ಗಂಟೆಗಿಂತಲೂ ಹೆಚ್ಚುಹೊತ್ತು ಕಾಯಿಸಿಡುತ್ತಿದ್ದರು. ನೀರು ಚೆನ್ನಾಗಿ ಕಾಯಿಸಿ ಕುದಿಸಿದಮೇಲೆ ಆರಿಸಿ ಕೆಳಗಿಡುತ್ತಿದ್ದರು. ವೈದ್ಯರನೇಕರು ತಮ್ಮಲ್ಲಿ ಮಡಿಸಿಟ್ಟುಕೊಳ್ಳಬಹುದಾದ ಮೇಜನ್ನು ಇಟ್ಟುಕೊಂಡಿರುತ್ತಿದ್ದರು. ಶಸ್ತ್ರವೈದ್ಯ, ರೋಗಿಯನ್ನು ಪರೀಕ್ಷಿಸಿ ಚಿಕಿತ್ಸೆ ನಡೆಸುತ್ತಾನೆ ಎಂದು ಮುಂದಾಗಿ ತಿಳಿಸಿದ ಕೂಡಲೆ, ಹಿಂದಿನ ದಿನವೇ ತನ್ನ ಮಡಿಸು ಮೇಜನ್ನು ರೋಗಿಯ ಮನೆಗೆ ಕಳುಹಿಸಿಕೊಡುತ್ತಿದ್ದ.

ವೈದ್ಯ ರೋಗಿಯ ಮನೆಗೆ ಬಂದ; ಚಿಕಿತ್ಸೆ ನಡೆಸುತ್ತಾನೆ ಎಂದು ತಿಳಿದ ಕೂಡಲೇ ಜನರಲ್ಲಿ ಒಂದು ಹೊಸ ಚಟುವಟಿಕೆ, ಓಡಾಟ ಕಾಣಬರುತ್ತಿತ್ತು. ಮಡಿಸು ಮೇಜನ್ನು ನಿಲ್ಲಿಸಿ, ನಡುಮನೆಯ ವಿಸ್ತರದಲ್ಲಿನ ಮೇಜಿನಮೇಲಿರುತ್ತಿದ್ದ ಧರ್ಮಗ್ರಂಥವನ್ನು ಮತ್ತು ಚಿತ್ರಪಟವನ್ನು ತೆಗೆದಿರಿಸಿ, ಮಡಿಸು ಹಲಗೆಯ ಪಕ್ಕಕ್ಕೆ ಅದನ್ನು ತಂದಿಡುತ್ತಿದ್ದರು. ಶಸ್ತ್ರಕ್ರಿಯೆ ಮಾಡಲು ನಾನು ಹೋಗುತ್ತಿದ್ದಾಗ ವೈದ್ಯರು ಉಪಯೋಗಿಸುವ ನಾರುಬಟ್ಟೆಯನ್ನು (Linen) ಜತೆಯಲ್ಲಿ ತೆಗೆದುಕೊಂಡುಹೋಗುತ್ತಿದ್ದೆ. ಮೇಜಿನಮೇಲೆ ನಾರುಬಟ್ಟೆ ಹೊದ್ದಿಸಿ, ಉಪಕರಣಗಳನ್ನು ಇಟ್ಟುಕೊಳ್ಳಲು ಅನುಕೂಲಪಡಿಸಿಕೊಳ್ಳುತ್ತಿದ್ದೆ. ರೋಗಿಗೆ ಬಟ್ಟೆ, ವೈದ್ಯನಿಗೆ ಮತ್ತು ಸಹೋದ್ಯೋಗಿಗೆ ಧರಿಸಲು ನಿಲುವಂಗಿಗಳು ಅಲ್ಲಿ ಸಿದ್ಧವಾಗಿರುತ್ತಿದ್ದವು. ಸ್ಪಂಜು ಮತ್ತು ಕೈಚೀಲಗಳಿರುತ್ತಿದ್ದವು. ನೀರಿನಲ್ಲಿ ಕುದಿಸಿ ತೆಗೆದ ಉಪಕರಣಗಳನ್ನು ಒಂದೊಂದಾಗಿ ನಾರುಬಟ್ಟೆ ಹೊದಿಸಿದ ಮೇಜಿನಮೇಲೆ ತೆಗೆದಿಡುತ್ತಿದ್ದರು. ನಾಗರಿಕತೆ ಹೆಚ್ಚು ಮುಂದುವರಿದಂತೆ, ಮೋಟಾರು ರೂಢಿಗೆ ಬಂತು. ಮೋಟಾರು ಹತ್ತಿ ಶಸ್ತ್ರವೈದ್ಯ ನೇರವಾಗಿ ಚಿಕಿತ್ಸೆ ನಡೆಸಬೇಕಾದ ಕೊಟಡಿಯ ಕಿಟಕಿಯವರೆಗೂ ಬಂದುಬಿಡುತ್ತಿದ್ದ. ಬಂದವನು, ಮೋಟಾರು ಮುಂಭಾಗದಲ್ಲಿರುವ ಹೆಚ್ಚು ಪ್ರಕಾಶ ಕೊಡುವ ತಲೆ ದೀಪದ (Head Lights) ಗುಂಡಿಯನ್ನು ಒತ್ತಿ, ಈ ಹೆಚ್ಚು ಪ್ರಕಾಶ, ಚಿಕಿತ್ಸೆ ನಡೆಸುವ ಭಾಗಕ್ಕೆ ಬೀಳುವಂತೆ

ಮಾಡಿಕೊಳ್ಳುತ್ತಿದ್ದ. ಆಗ ಮೋಟಾರಿನ ತಲೆದೀಪಕ್ಕೂ ಮೀರಿದ ಹೆಚ್ಚು ಪ್ರಕಾಶವುಳ್ಳ ದೀಪ ಆಗ ದೊರೆಯುತ್ತಿರಲಿಲ್ಲ. ಈ ಹೆಚ್ಚು ಪ್ರಕಾಶವನ್ನು ಕನ್ನಡಿಯ ಮೂಲಕ ಬಿಂಬಿಸಲು ಸ್ನೇಹಿತನ ಸಹಾಯವನ್ನು ಪಡೆಯುತ್ತಿದ್ದ. ಬೆಳಕನ್ನು ಬಿಂಬಿಸಲು ನಿಂತ ಸ್ನೇಹಿತ, ರಕ್ತಸ್ರಾವವನ್ನು ನೋಡಿ ಬವಳಿಬಿದ್ದಲ್ಲಿ, ಬದಲಾಗಿ ಬೇರೊಬ್ಬನನ್ನು ಸಹಾಯಕ್ಕೆ ಕರೆತರುತ್ತಿದ್ದರು. ಗಂಡಸು ರಕ್ತ ಸ್ರಾವವನ್ನು ನೋಡಿ ಬವಳಿಬಿದ್ದು ಶಸ್ತ್ರಕ್ರಿಯೆಗೆ ಅಡ್ಡಿಯಾದಾನು ಎಂದು, ಬೆಳಕನ್ನು ಬಿಂಬಿಸಲು ಹೆಂಗಸನ್ನು ನಿಯಮಿಸುತ್ತಿದ್ದರು. ಏಕೆಂದರೆ, ಹೆಂಗಸು ರಕ್ತ ಸುರುವಿಕೆಯನ್ನು ನೋಡಿ ಹೆಚ್ಚಿಗೆ ಬೆದರಳು ಎಂಬ ಕಾರಣದಿಂದ ನಿಯಮಿಸಿಕೊಳ್ಳುತ್ತಿದ್ದರು.

ಕೆಲವು ಮನೆಗಳಲ್ಲಿ ಚಿಕಿತ್ಸೆಗೆ ಅನುಕೂಲವಾಗುವಂತಹ ಯಾವ ಸಾಧನ ಸಲಕರಣೆಯೂ ಇರುತ್ತಿರಲಿಲ್ಲ. ವೈದ್ಯ, ಚಿಕಿತ್ಸೆಗಾಗಿ ಯಾವ ಸಹಾಯವನ್ನೂ ಪಡೆಯುವಂತಿರಲಿಲ್ಲ. ಕೆಲವುವೇಳೆ ನನ್ನಲ್ಲಿ ಅಲ್ಪಸ್ವಲ್ಪ ಉಪಕರಣಗಳಿರುತ್ತಿದ್ದವು. ನಾರುಬಟ್ಟೆ ಇರುತ್ತಿರಲಿಲ್ಲ.

ಅನೇಕ ಮನೆಗಳಲ್ಲಿ ಮೇಜುಗಳಿರುತ್ತಿರಲಿಲ್ಲ. ಹಲಗೆಗಳನ್ನು ಜೋಡಿಸಿ ರೋಗಿಯನ್ನು ಅದರಮೇಲೆ ಮಲಗಿಸುತ್ತಿದ್ದರು. ಮೇಜುಗಳಿಲ್ಲದ ಕಡೆಯಲ್ಲಿ ಬಾಗಿಲ ಹಲಗೆಯನ್ನು ಬಿಚ್ಚಿ, ಕೆಳಗೆ ಡಬ್ಬಗಳನ್ನು ಜೋಡಿಸಿ, ಅದರ ಮೇಲೆ ಈ ಹಲಗೆಯನ್ನಿಟ್ಟು ರೋಗಿಯನ್ನು ಮಲಗಿಸುತ್ತಿದ್ದರು. ನನ್ನಂತಹ ಎತ್ತರದವನಿಗೆ ಸರಿಹೋಗುವಂತೆ ಕೆಲವುಸಲ ಸೀಪಾಯಿಗಳನ್ನು ಉಪಯೋಗಿಸಲಾಗುತ್ತಿತ್ತು.

ಮನೆಯಲ್ಲಿ ಸಾಧಾರಣವಾಗಿ ಉಪಯೋಗಿಸುವ ಬೋಗುಣಿಯಲ್ಲಿ ಉಪಕರಣಗಳನ್ನು ಕುದಿಸುತ್ತಿದ್ದರು. ಸ್ಪಂಜು ಸಿಕ್ಕದಿದ್ದಾಗ ಚೌಕವನ್ನು ಚೂರು ಚೂರಾಗಿ ಹರಿದು ಉಪಕರಣಗಳೊಂದಿಗೆ ನೀರಿನಲ್ಲಿ ಕುದಿಸುತ್ತಿದ್ದರು. ನೀರಿನಲ್ಲಿ ಕುದಿಸಿದ ಚೌಕವೊಂದನ್ನು ಚಿಕಿತ್ಸೆ ನಡೆಸುವ ಜಾಗದಲ್ಲಿ ಹರಡುತ್ತಿದ್ದರು. ಕ್ಷೌರ ಕತ್ತಿ ಸಿಗುವಂತಿದ್ದರೆ ರೋಗಿಗೆ ಕ್ಷೌರಮಾಡುತ್ತಿದ್ದರು. ಕೆನ್ನೆಗೂದಲನ್ನು ಆಗ ವಿಶೇಷವಾಗಿ ಜನರು ಬೆಳೆಸಿಕೊಳ್ಳುತ್ತಿದ್ದುದರಿಂದ ಕತ್ತಿ ಬೇಕಾಗುತ್ತಿರಲಿಲ್ಲ. ಕತ್ತಿ ಸಿಗದಿದ್ದಾಗ ಕತ್ತರಿಯಿಂದ ಕೆನ್ನೆಗೂದಲನ್ನು ಕತ್ತರಿಸಿ ಮೋಟಕುಮಾಡುತ್ತಿದ್ದರು. ಹೆಚ್ಚು ಕೂದಲು ತೆಗೆದ ಗಡ್ಡಕ್ಕೆ ಮನೆಯಲ್ಲಿ ತಯಾರಿಸಿದ ಸೋಪನ್ನು ಹಚ್ಚಿ

ಉಜ್ಜಿ ತೊಳೆಯುತ್ತಿದ್ದರು. ಕೆಲವು ಮನೆಗಳಲ್ಲಿ ಹಸುರು ಸೋಪನ್ನು ತಯಾರಿಸುತ್ತಿದ್ದರು. ಈ ಸೋಪನ್ನು ಚರ್ಮಕ್ಕೆ ತಗುಲಿಸಿದಲ್ಲಿ ಅತಿಯಾಗಿ ಉರಿಯುತ್ತಿತ್ತು. ಶಸ್ತ್ರಚಿಕಿತ್ಸೆಯ ಕಾಲದಲ್ಲಿ ಈ ಸೋಪಿನಿಂದ ರೋಗಿಯ ಅಂಗಾಂಗವನ್ನು ತೊಳೆಯುವಂತಿರಲಿಲ್ಲ.

ಶಸ್ತ್ರಚಿಕಿತ್ಸೆ ಮಾಡಿದಮೇಲೆ ಗಾಯಕ್ಕೆ ಔಷಧ ಹಚ್ಚಿ, ಬಟ್ಟೆಕಟ್ಟುವ ಕೆಲಸ ಉಳಿಯುತ್ತಿತ್ತು. ಗಾಯಕ್ಕೆ ಬಟ್ಟೆಕಟ್ಟುವ ವಿಧಾನ ದೊಡ್ಡ ವೈದ್ಯಾಲಯದಲ್ಲಿ ಚೆನ್ನಾಗಿ ನಡೆಯುವುದು. ಶಸ್ತ್ರಚಿಕಿತ್ಸೆಮಾಡಿ ಹಾಗೆಯೇ ಬಿಟ್ಟುಕೊಟ್ಟರೆ ಪರಿಣಾಮ ಏನಾಗುವುದೆಂದು ತರುಣ ವೈದ್ಯರು ತಿಳಿದಿದ್ದಾರೆಯೆ ? ಗಾಯ ಏಕೆ ? ಯಾವುದರಿಂದ ? ಎಲ್ಲಿಯಾಯಿತು ? ಎನ್ನುವ ವಿಷಯ ಬೇರೆ. ಹಿಂದಿನಕಾಲದ ತರುಣ ವೈದ್ಯರಿಗೆ ಪ್ರಮಾಣವಾಕ್ಯ ಹೇಳುತ್ತಿದ್ದರು. ಸಂದೇಹ ತೋರಿದಾಗ ರಸವಿರೇಚಕ (Calomel) ಕೊಡು ಎಂದು. ಈಗಿನವರಿಗೆ ಅನುಮಾನ ತೋರಿ ಬಂದಾಗ ರಕ್ತಪೂರಣ ಮಾಡುವುದೊಂದೇ (Transfuse) ಅವರ ಕೆಲಸ. ಅಪಕ್ವ ಶಸ್ತ್ರವೈದ್ಯನಿಗೆ, ಮುಖ್ಯವಾಗಿ ಭ್ರೂಣವಿಚ್ಛೇದ ವೈದ್ಯನಿಗೆ, (Embryo Surgeon) ಶಸ್ತ್ರಚಿಕಿತ್ಸೆಮಾಡಿ ಹಾಗೆಯೇ ಬಿಟ್ಟುಬಿಟ್ಟರೆ ಏನಾಗುವುದು ಎಂಬುದರ ಅನುಭವವಿರುವುದು.

ನನ್ನ ಹಿಂದಿನ ಗ್ರಾಮಾಂತರ ಸಂಚಾರದಲ್ಲಿ ಒಮ್ಮೆ ನಾನು ಒಂದು ಹೊಸದಾದ ಚಿಕಿತ್ಸಾ ವಿಧಾನವೊಂದನ್ನು ಕಂಡುಕೊಂಡೆ. ರೋಗಿಯೊಬ್ಬನ ಕರುಳಿನ ಕೊನೆ ತೂತಾಗಿತ್ತು. ಅದು ತುಂಬಾ ಉದ್ರೇಕ ಸ್ಥಿತಿಯಲ್ಲಿತ್ತು. ಅಲ್ಲದೆ ಅವನ ಹೊಟ್ಟೆಯು ಕುಹಕವಾಗಿ ಉಬ್ಬಿಕೊಂಡಿತ್ತು. ರೋಗಲಕ್ಷಣ ಶಾಸ್ತ್ರ ಮತ್ತು ಶಸ್ತ್ರವಿದ್ಯೆ ಇವುಗಳಲ್ಲಿ ನಾನು ನುರಿತಿದ್ದೆ. ಈ ಬಗೆಯ ರೋಗಕ್ಕೆ ಶಸ್ತ್ರಚಿಕಿತ್ಸೆ ನಡೆಸಿದಲ್ಲಿ ರೋಗಿ ಸಾಯುವುದು ಖಂಡಿತವೆಂದು ಅನುಭವದಿಂದ ತಿಳಿದುಬರುವಂತಿತ್ತು. ಆಗ ನಾನು ಅವನಿಗೆ ಶಸ್ತ್ರಚಿಕಿತ್ಸೆ ಮಾಡಲಿಲ್ಲ. ಮೂರು ತಿಂಗಳ ನಂತರ ಇದೇ ರೋಗಿ ನನ್ನ ಔಷಧಾಲಯಕ್ಕೆ ಬಂದು "ನಿಮ್ಮ ಚಿಕಿತ್ಸೆಗೆ ಹಣವೆಷ್ಟು ? ಚೀಟಿಕೊಡಿ" ಎಂದು ಕೇಳಿದ. "ನೀನೇನೂ ಕೊಡಬೇಕಾದುದಿಲ್ಲ" ಎಂದವನಿಗೆ ಹೇಳಿ ಅವನನ್ನು ಉಪಹಾರಕ್ಕೆ ಮತ್ತು ಕುಣಿತದ ಆಟಕ್ಕೆ ನಾನೇ ಕರೆದುಕೊಂಡುಹೋದೆ. ಶಸ್ತ್ರಚಿಕಿತ್ಸೆ ಯಾವಾಗ ಮಾಡಬಾರದು, ಎಂಬುದನ್ನು ಈ ರೋಗಿ ನನಗೆ ತೋರಿಗೊಟ್ಟ. ಹೊಟ್ಟೆಯು

ಉಬ್ಬಿಕೊಂಡಿತ್ತು ಎಂದು ಹೇಳಿದೆನಲ್ಲವೆ, ಈ ಉಬ್ಬು ಸೋಂಕನ್ನು ಹೆಚ್ಚು ಹರಡದಂತೆ ತಡೆಗಟ್ಟಿತು. ಇಂತಹ ತಡೆಯನ್ನು ಅಲಕ್ಷಿಸಿ ಶಸ್ತ್ರಚಿಕಿತ್ಸೆ ಮಾಡಿದ್ದರೆ ಪ್ರಕೃತಿಗೆ ವಿರೋಧವಾಗಿ ವರ್ತಿಸಿದಂತಾಗಿ ಅವನ ಸಾವಿಗೆ ನಾನು ಕಾರಣನಾಗುತ್ತಿದ್ದೆ.

ಒಂದುಸಾರಿ ನಾನು ರಸ್ತೆಯಲ್ಲಿ ಶಸ್ತ್ರಚಿಕಿತ್ಸೆ ಮಾಡಬೇಕಾಯಿತು. ಶ್ವಾಸರೋಗ ( ಉಬ್ಬಸರೋಗ) ದಿಂದ ತುಂಬಾ ಬಳಲಿ ಅತಿ ದುರವಸ್ಥೆಯಲ್ಲಿದ್ದ ರೋಗಿಯನ್ನು ಕಾಣಲು ನಾನು ದೂರ ಹೋಗಬೇಕಾಗಿತ್ತು. ನನ್ನ ಅನುಭವಶಕ್ತಿಯಿಂದ ಮತ್ತು ಮನೆವೈದ್ಯನ ಹೇಳಿಕೆಯಿಂದ ರೋಗಿಗೆ ಶಸ್ತ್ರಚಿಕಿತ್ಸೆಯಾಗಬೇಕಾಗಿಲ್ಲವೆಂದು ಕಂಡುಕೊಂಡೆ. ರೋಗಿಗೆ ಉಸಿರೆಳೆಯುವುದಕ್ಕೂ ಆ ಗು ತ್ತಿ ರ ಲಿ ಲ್ಲ. ಅತಿಕಷ್ಟವಾಗಿತ್ತು. ಅವನು ಉ ಸಿ ರೆ ಳೆ ಯ ಲು ಸಾಹಸಪಡುತ್ತಿದ್ದುದನ್ನು ನೋಡಿ, ಅವನು ಶ್ವಾಸರೋಗದಿಂದ ನರಳುತ್ತಿಲ್ಲವೆಂದು ಕಂಡುಕೊಂಡೆ. ಪರೀಕ್ಷಿಸಿದ ಮೇಲೆ ಗಳಗಂಡವೊಂದು (Goiter) ಎದೆಯ ಗೂಡಿನಲ್ಲಿರುವ ಶ್ವಾಸಗ್ರಂಥಿಗಳನ್ನೆಲ್ಲಾ ಆವರಿಸಿಕೊಂಡಿರುವುದಾಗಿ ಕಂಡುಬಂತು. ಒಂದೇ ಒಂದು ಕೋಣೆಯಿದ್ದ ರೋಗಿಯ ಮನೆಯಲ್ಲಿ ಚಿಕಿತ್ಸೆಗೆ ಅನುಕೂಲವಾದ ಸ್ಥಳವಿರಲಿಲ್ಲ. ಸೇಬು ಗಿಡದ ಕೆಳಗೆ ಶಸ್ತ್ರಕ್ರಿಯೆಯ ಮೇಜನ್ನು ಇಟ್ಟುಕೊಳ್ಳಬೇಕಾಯಿತು. ಅಡುಗೆ ಕೋಣೆಯ ಬಾಗಿಲ ಹಲಗೆಯನ್ನು ಕಳಚಿ, ಎರಡು ಪೀಪಾಯಿಗಳ ಮೇಲೆ ಹಲಗೆಯನ್ನು ಇಡಿಸಿದೆ. ಎರಡು ಪೆಟ್ಟಿಗೆಗಳನ್ನು ಆರಿಸಿಕೊಂಡೆ. ಒಂದನ್ನು ಉಪಕರಣವಿಟ್ಟುಕೊಳ್ಳುವುದಕ್ಕೆ ಅನುಕೂಲವಾದ ಮೇಜಾಯಿತು. ಇನ್ನೊಂದನ್ನು ಚಿಕಿತ್ಸೆ ಮಾಡುವಾಗ ಕುಳಿತುಕೊಳ್ಳುವುದಕ್ಕಾಗಿ ಅನುಕೂಲಪಡಿಸಿಕೊಂಡೆ. ವೇದನ ಪ್ರತಿಬಂಧಿಯನ್ನು ಉಪಯೋಗಿಸಿ ಶಸ್ತ್ರಕ್ರಿಯೆಮಾಡಿದೆ. ಗಳಗಂಡವು ಎದೆಯ ಗೂಡಿನಿಂದ ಹೊರಬಂದು ಕಾಣಿಸಿಕೊಂಡಾಗ ಅದು ಗಾತ್ರ ಮತ್ತು ತೂಕದಲ್ಲಿ ಲಗ್ಗೆಚಂಡಿನಷ್ಟಿತ್ತು. ಉಸಿರಾಟದಲ್ಲಿ ಒಮ್ಮೆ ಗಳಗಂಡ ಹೊರಗೆ ಬಿದ್ದುಹೋಗುವುದು ಎಂದು ಯಾವಾಗಲೋ ಒಮ್ಮೆ ನಾನು ವೈದ್ಯ ಗ್ರಂಥದಲ್ಲಿ ಓದಿದ್ದ ನೆನಪು. ರೋಗಿಯ ಪಕ್ಕೆಲುಬಿನಮೇಲೆ ಮೊಳಕೈಯಿಂದ ಮೆಲ್ಲಗೆ ತಟ್ಟಿ ರೋಗಿಯನ್ನು ಕೆಮ್ಮುವಂತೆ ಹೇಳಿದೆ. ಗಾಳಿಕೊಳವೆಯ ಮೇಲೆ ಭಾರ ಕಡಿಮೆಯಾಗಲು ಅವನಿಗೆ ಉಸಿರುಬಿಡಲು ಅನುಕೂಲ

ವಾಯಿತು. ಆಗ ಅವನು ದೀರ್ಘವಾಗಿ ಉಸಿರೆಳೆದುಕೊಂಡ. ಆಗವನ ಎದೆಯಗೂಡು ಚಿಕ್ಕದಾಯಿತು. ನಾನು ಗಂಟಲ ಹತ್ತಿರ ಗಾಯಮಾಡಿದ್ದೆ. ಗಾಯಕ್ಕೆ ಹತ್ತಿರವಾಗಿ ಗಳಗಂಡ ಕಾಣಿಸಿಕೊಂಡಿತು. ರಕ್ತನಾಳವನ್ನು ಚಿಪ್ಪಳದಿಂದ ತಡೆಗಟ್ಟಿ ಗಳಗಂಡವನ್ನು ಇಕ್ಕುಳದಿಂದ ಹಿಡಿದು, ಉಪಾಯ ದಿಂದ ಕತ್ತರಿಸಿ ಹೊರಗೆಳೆದುಬಿಟ್ಟೆ. ಮುಂದೆ ಚಿಕಿತ್ಸೆ ಸುಲಭವಾಯಿತು. ರೋಗಿ ಅಪಾಯಸ್ಥಿತಿಯಿಂದ ಪಾರಾದ.

ಇನ್ನೊಂದುಸಾರಿ ನಾನು ನಡೆಸಿದ ಶಸ್ತ್ರಕ್ರಿಯೆಯ ಬಗ್ಗೆ ವಿವರಿಸುತ್ತೇನೆ. ಅದು ಒಂದು ಹಳೆಯ ನಾಣ್ಣುಡಿಯ ಅರ್ಥವಿವರಣೆಯನ್ನು ಮಾಡಿದಂತಾಗು ತ್ತದೆ.— ರೋಗಿಯೊಬ್ಬಳ ಅಂಡಾಶಯದಲ್ಲಿ ಬೆಳೆದ ಗಂತಿಯನ್ನು ತೆಗೆಯು ವುದಕ್ಕಾಗಿ ನಾನು ಶಸ್ತ್ರಕ್ರಿಯೆ ಮಾಡಬೇಕಾಯಿತು. ರೋಗಿ ಹೆಂಗಸು. ಆಕೆ ಮೊದಲಾಗಿ ಹೆಸರಾಂತ ವೈದ್ಯನ ಬಳಿ ಸಲಹೆ ಕೇಳಲು ಹೋಗಿದ್ದಳು. ಆ ವೈದ್ಯ ಶಸ್ತ್ರಕ್ರಿಯೆ ಮಾಡಲು ಸಾಧ್ಯವಿಲ್ಲವೆಂದು ನಿರಾಕರಿಸಿ ಕಳುಹಿಸಿದ್ದ. ಗಂತಿ ಹೆಚ್ಚುತೂಕವಿತ್ತು. ಅಲ್ಲದೆ ರೋಗಿಯ ಎದೆಯ ಗೂಡಿನಲ್ಲಿ ದ್ರವ ತುಂಬಿ ಕೊಂಡಿತ್ತು. ಇದರಿಂದ ಕಾಲುಗಳು ಬಾತುಕೊಂಡಿದ್ದವು. ಈ ಭಾರದಿಂದ ರೋಗಿ ಮಲಗಲಾಗುತ್ತಿರಲಿಲ್ಲ, ನಿದ್ರಿಸುವಂತಲೂ ಇರಲಿಲ್ಲ. ಹಿಂದೆ ಶಸ್ತ್ರ ಚಿಕಿತ್ಸೆ ಸಾಧ್ಯವಿಲ್ಲವೆಂದು ನಿರಾಕರಿಸಿ ಕಳುಹಿಸಿದ್ದ ವೈದ್ಯ, ರೋಗಿ ಹೆಚ್ಚುದಿನ ಬದುಕುವುದಿಲ್ಲವೆಂದು ಬೇರೆ ಹೇಳಿದ್ದ. ರೋಗಿ ತಿಳಿವಳಿಕೆಯುಳ್ಳ ಹೆಂಗಸು. ತಾನು ನೋಡಿಬಂದ ವೈದ್ಯನ ಗುರುತನ್ನೂ ಅವನು ಹೇಳಿದ ವ್ಯಾಧಿಯ ಸ್ಥಿತಿಗತಿಯನ್ನೂ ಚಾಚೂ ತಪ್ಪದೆ ನನ್ನ ಹೇಳಿಕೊಂಡಳು. "ಸಾಯದೆ ಉಳಿಯಲು ಸಾವಿರ ಪ್ರಯತ್ನಗಳಲ್ಲಿ ಒಂದೂ ಸಾಧ್ಯವಿಲ್ಲವೆ?" ಎಂದು ಕೇಳಿ ಕೊಂಡಳು. ಈ ಹೆಂಗಸು ಐದು ಮಕ್ಕಳ ತಾಯಿ. ಐವರನ್ನು ಸಾಕಿ ಸಲುಹಿ ದೊಡ್ಡವರನ್ನಾಗಿ ಮಾಡಬೇಕಾಗಿತ್ತು. "ಗಂತಿಯನ್ನು ತೆಗೆಯಲು ಶಸ್ತ್ರಕ್ರಿಯೆ ಮಾಡಬೇಕು, ಆದರೆ ನಿನ್ನ ಇತರ ಪ್ರಕೃತಿಲಕ್ಷಣ, ಶಸ್ತ್ರಕ್ರಿಯೆಗೆ ಅಷ್ಟು ಚೆನ್ನಾ ಗಿಲ್ಲವಲ್ಲಾ! ಅಪಾಯಕ್ಕೆ ಎಡೆಯಿದೆಯಲ್ಲಾ!" ಎಂದು ಮರೆಮಾಚದೆ ಹೇಳಿದೆ. ಬಹಳವಾಗಿ ಯೋಚಿಸಿ ಆ ಹೆಂಗಸು "ಪ್ರಯತ್ನಿಸಿ,: ಕೈಮೀರಿ ಹೋದರೆ ಉಪಾಯವಿಲ್ಲ" ಎಂದು ಚಿಕಿತ್ಸೆಗೆ ಒಪ್ಪಿಗೆಕೊಟ್ಟಳು. ನಾನು ಚಿಕಿತ್ಸೆ ಮಾಡಲೊಪ್ಪಿದೆ. ಒಪ್ಪಿಕೊಂಡಿದುದೂ ಒಂದು ಕರಾರಿನಮೇಲೆಯೇ.

"ಚಿಕಿತ್ಸೆಮಾಡುವೆ. ಫಲಿತಾಂಶ ಏನೇ ಆಗಲಿ ಈ ಚಿಕಿತ್ಸೆಗಾಗಿ ನೀನು ಹಣ ಕೊಡಬೇಕಾದುದಿಲ್ಲ" ಎಂದು ಹೇಳಿ ಆಕೆ ಒಪ್ಪುವಂತೆ ಮಾಡಿದೆ. ಅಪಾಯ ಕರವಾದ ಚಿಕಿತ್ಸೆಗೆ ನಾನು ಕೈಹಾಕುತ್ತಿದ್ದಾಗ ಈ ಸೂತ್ರವನ್ನೇ ಪಾಲಿಸು ತ್ತಿದ್ದುದು. ಹೀಗೇಕೆ ಮಾಡುತ್ತಿದ್ದೆ ಎಂದರೆ, ರೋಗಿಯ ಪ್ರಕೃತಿಲಕ್ಷಣ ಉತ್ತಮವಾಗಿಲ್ಲ ಎಂದು ಕಂಡಾಗ, ಶಸ್ತ್ರಚಿಕಿತ್ಸೆ ಮಾಡುವುದು ಹಾನಿಕರ ಎಂದು ತೋರಿಬಂದಾಗ ನಾನು ದುಡುಕುತ್ತಿರಲಿಲ್ಲ. ಚಿಕಿತ್ಸೆಯಿಂದ ಫಲಿ ತಾಂಶ ಉತ್ತಮವಾಗದೆ ಹೋದಲ್ಲಿ, ವೈದ್ಯ ಹಣದಾಸೆಗಾಗಿ ಚಿಕಿತ್ಸೆಮಾಡಿ ರೋಗಿಯನ್ನು ಸಾಯಿಸಿದ ಎಂಬ ಅಪಖ್ಯಾತಿಯನ್ನು ಹೊತ್ತುಕೊಳ್ಳಬೇಕಾ ಗಿತ್ತು. ಈ ಅಪಖ್ಯಾತಿ ಪಡೆಯಲಿಚ್ಛಿಸದೆ ನಾನು ಮೇಲೆ ತಿಳಿಸಿದ ನನ್ನ ಸೂತ್ರವನ್ನು ಮೊದಲಿನಿಂದಲೂ ಪಾಲಿಸುತ್ತಿದ್ದೆ.

ನಾನು ರೋಗಿಯ ಚಿಕಿತ್ಸೆಯನ್ನು ಮುಂದೆ ಹೇಳುವಂತೆ ನಡೆಸಿದೆ.— ರೋಗಿಯ ಎದೆಯಗೂಡಿನಲ್ಲಿ ಸೇರಿಕೊಂಡಿದ್ದ ದ್ರವವನ್ನು ಕೊಳವೆಯ ಮೂಲಕ ಹೊರಸೆಳೆದೆ. ಇದರಿಂದ ಕಾಲಿನ ಊದು ಕಡಿಮೆಯಾಯಿತು. ಹೊಟ್ಟೆ ಅತಿಯಾಗಿ ಉಬ್ಬಿಕೊಂಡಿದ್ದುದರಿಂದ ಆಕೆಯನ್ನು ಶಸ್ತ್ರಚಿಕಿತ್ಸೆಮಾಡುವ ಮೇಜಿನಮೇಲೆ ಮಲಗಿಸಲಾಗಲಿಲ್ಲ. ಆಕೆಯನ್ನು ಮೇಜಿನಮೇಲೆ ಕೂಡಿಸಿ ದಾಗಲೂ ಆಕೆಯ ಕಾಲುಗಳು ಜೋಲಾಡುತ್ತಿತ್ತು. ಜಂಘೆಯ ನಡುವೆ ಕುಳಿತು ವೇದನ ಪ್ರತಿಬಂಧಿಯನ್ನು ಉಪಯೋಗಿಸಿ ಶಸ್ತ್ರಕ್ರಿಯೆಮಾಡಿದೆ. ಗಂತಿ ಅರ್ಧಗಟ್ಟಿಯಾಗಿತ್ತಲ್ಲದೆ, ಲೋಳೆಯಂತೆ ಮುದ್ದೆಯಾಗಿತ್ತು. ಈ ಗಂತಿಯನ್ನು ಕತ್ತರಿಸಿ ತೆಗೆಯಲು ಸುಮಾರು ಎರಡು ಗಂಟೆಯಕಾಲ ಹಿಡಿ ಯಿತು. ಶಸ್ತ್ರಕ್ರಿಯೆ ಮಾಡಿದನಂತರ ಆಕೆ, ದೀರ್ಘವಾಗಿ ಉಸಿರೆಳೆದುಬಿಡಲು ಆಗುವುದೆಂದೂ ಕಷ್ಟವಿಲ್ಲದೆ ಮಲಗಿ ಮೇಲೇಳಲು ಸಾಧ್ಯವೆಂದೂ ಹೇಳಿದಳು.

ಮೂರನೆಯ ದಿನ ಆಕೆ ಹೇಗೆ ಚೇತರಿಸಿಕೊಳ್ಳುತ್ತಿದ್ದಾಳೆ ಎಂದು ನೋಡಲು ಹೋದೆ. ಮೇಜಿನ ಬಳಿ ಆಕೆ ಶಾಂತವಾಗಿ ಪತ್ರ ಬರೆಯುತ್ತಾ ಕುಳಿತಿದ್ದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಆಕೆಯನ್ನು ನಿರ್ಬಂಧ ದಲ್ಲಿಡಲು ಅಲ್ಲಿ ಯಾವ ದಾದಿಯೂ ಹತ್ತಿರವಿರಲಿಲ್ಲ. ಆದರೂ ಆಕೆ ವ್ಯತ್ಯಾಸಹೊಂದದೆ ಪಾರಾದಳು.

ಅನೇಕ ಮೂಲತತ್ವವನ್ನೊಳಗೊಂಡ ಒಂದು ಶಸ್ತ್ರಚಿಕಿತ್ಸೆಯ ವಿಚಾರವನ್ನೀಗ ತಿಳಿಸುತ್ತೇನೆ.— ಹೆಸರಾಂತ ಮುಷ್ಟಿ ಕಾಳಗದ ಜೆಟ್ಟಿಯೊಬ್ಬನಿಗೆ ಶಸ್ತ್ರ ಚಿಕಿತ್ಸೆಯಾಗಬೇಕಾಗಿತ್ತು. ಈ ಜೆಟ್ಟಿ ವೈದ್ಯಾಲಯವೆಂದರೆ ಹೆದರುತ್ತಿದ್ದ. ಆದುದರಿಂದ ಮನೆಯಲ್ಲಿಯೇ ಜೆಟ್ಟಿಗೆ ಚಿಕಿತ್ಸೆ ಮಾಡಬೇಕಾಯಿತು. ಹಿಂದೆ ತಿಳಿಸಿದಂತೆ, ಅಡಿಗೆಮನೆಯ ಊಟದ ಮೇಜನ್ನು ತರಿಸಿ, ಅದರಮೇಲೆ ಅವನನ್ನು ಮಲಗಿಸಿದೆ. ವೇದನ ಪ್ರತಿಬಂಧಿಯನ್ನು ಜೆಟ್ಟಿಗೆ ಉಪಯೋಗಿಸು ತ್ತಲೇ ಅವನ ಬಲವಾದ ಶರೀರ ಉದ್ವೇಗದಿಂದ ಜಗ್ಗತೊಡಗಿತು. ಆಗ ದುಂಡು ಮೇಜು ಮುರಿಯಿತು. ಅರೆಪ್ರತಿಬಂಧಿಗೆ ಕಾರಣನಾಗಿದ್ದ ಜೆಟ್ಟಿ ಬಿದ್ದೊಡ ನೆಯೇ ಎಗುರಿ, ಪುಟನೆಗೆದು ಹಾರಿ ನೆಲದಮೇಲೆ ನಿಂತುಕೊಂಡ. ಹೀಗೆ ನಿಂತುಕೊಂಡವ ತನ್ನ ಎದುರಾಳಿಯನ್ನು ಕಂಡು ಸಂಧಿಸುವವನಂತೆ ವರ್ತಿಸಿದ. ವೈದ್ಯನಾದ ನನ್ನನ್ನೇ ಅವನ ಎದುರಾಳಿಯೆಂದು ತಿಳಿದ. ಆಗ ನನಗೆ ಬೇರೆ ಏನೋ ಹೊಳೆಯಿತು. ನನ್ನಹಿಂದೆ ಇದ್ದ ಒಂದು ಕಬ್ಬಿಣದ ಚೌಕಟ್ಟಿಗೆ ಬಂಧಿಸಿದ ತೆರೆಯಿತ್ತು. ಈ ತೆರೆಯನ್ನು ದಾಟಿ ಹೊರಮಂಟಪದ ಬಳಿ ನಾನು ಹೋಗಬಹು ದಾಗಿತ್ತು. ಜೆಟ್ಟಿ ನನ್ನಮೇಲೆ ಎಗುರಿ ಬೀಳುವುದಕ್ಕೆ ಮೊದಲೇ ಕಬ್ಬಿಣದ ಚೌಕ ಟ್ಟನ್ನು ಹಿಡಿದು ಮೇಲೇರಿ ಹಾರಿ ನಾಲ್ಕು ಅಡಿಯಷ್ಟು ಕೆಳಗಿಳಿದುಬಿಟ್ಟೆ. ಸುಪ್ತಿ ಕಾರಿ ದ್ರವವನ್ನು ಕುಡಿದಿದ್ದ ಆ ಜೆಟ್ಟಿ ನನ್ನನ್ನು ಆಗ ಎದುರಿಸುವಂತಿರಲಿಲ್ಲ. ಅನೇಕವೇಳೆ ನಾನು ಹುಚ್ಚೆದ್ದ ಗೂಳಿಗಳನ್ನು ಎದುರಿಸಿದ್ದೇನೆ. ಆ ಜೆಟ್ಟಿ ಹುಚ್ಚೆದ್ದ ಗೂಳಿಗಳಿಗಿಂತಲೂ ಆಗ ಹೆಚ್ಚು ಉಗ್ರವಾಗಿದ್ದ. ಮನೆವೈದ್ಯ, ಎಷ್ಟೋ ಬಗೆಯಲ್ಲಿ ಅವನನ್ನು ಶಮನಗೊಳಿಸಲು ಪ್ರ ಯ ತ್ನಿ ಸಿ ದ. ಮತ್ತಷ್ಟು ಸುಪ್ತಿಕಾರಿ ದ್ರವದ ಪ್ರಯೋಗವಾದಮೇಲೆ ಅವನು ಶಾಂತನಾಗಿ ಪುನಃ ಮಲಗಿದ. ಆಗ ಶಸ್ತ್ರಕ್ರಿಯೆ ಮುಗಿಸಿದೆ. ಮುಗಿಸಿದೊಡನೆಯೇ ನಾನು ಅಲ್ಲಿ ಕೆಲಕ್ಷಣವೂ ನಿಲ್ಲದೆ ಹೊ ರ ಹೊ ರ ಟು ಮಂಟಪದಾಚೆ ನಿಂತು "ಜೆಟ್ಟಿ ಏನು ಮಾಡುತ್ತಿರುವನೋ" ಎಂದು ಇಣಿಕಿ ನೋಡಿದೆ. ಅವನು ಗೊರಕೆ ಹೊಡೆಯುತ್ತಾ ಮಲಗಿದ್ದುದನ್ನು ಕಂಡೆ. ವೇದನಾ ಜಡತೆಯಿಂದ ರೋಗಿ ಮಲಗಿಬಿಟ್ಟಿದ್ದಾನೆಂದು ಆಗ ಅರ್ಥವಾಯಿತು.

ವೈದ್ಯವೃತ್ತಿ ಆರಂಭಿಸುವವರಿಗೆ ಅದೃಷ್ಟವೂ ನೆರವಾಗುವುದು, ಅನು ಕೂಲವೂ ಒದಗಿಬರುವುದು. ನನ್ನ ವಿಚಾರದಲ್ಲಿ ಇದು ಸತ್ಯವಾದದ್ದು, ಎಂದು

ಹೇಳುತ್ತೇನೆ. ನನಗೆ ದೊರೆಯುತ್ತಿದ್ದ ಸೌಲಭ್ಯ ಮತ್ತು ವಾತಾವರಣವನ್ನು ಈಗ ನೆನೆಸಿದರೆ, ನಾನೀಗ ವೈದ್ಯಾಲಯದಲ್ಲಿಯೂ ಸಹ ಅಷ್ಟು ಕಠಿಣವಾದ ಶಸ್ತ್ರಕ್ರಿಯೆ ಮಾಡಲಾರೆನೆಂದು ತಿಳಿಯುತ್ತೇನೆ. ಗಂತಿಯನ್ನು ಕೊಯ್ಯುವಾಗ ನಾನು ಅನುಸರಿಸಿದ ಮಾರ್ಗ ಯಾವ ವೈದ್ಯಶಾಲೆಯಲ್ಲಿಯೂ ಸಾಧ್ಯವಾಗುತ್ತಿರಲಿಲ್ಲ. ಶಸ್ತ್ರಕ್ರಿಯೆಯಾಗಬೇಕು ಎಂದು ಬಂದು ಬೇಡಿದ ರೋಗಿಗಳನ್ನು ನಾನು ಎಂದೂ ಹಿಂದಕ್ಕೆ ಕಳುಹಿಸಿಕೊಡುತ್ತಿರಲಿಲ್ಲ. ಚಿಕಿತ್ಸೆಗೆ ಅವರೇ ಸಿದ್ಧರಾಗಿ ನನ್ನ ಬಳಿ ಬರುತ್ತಿದ್ದರು. ನಾನವರಿಗೆ ಧೈರ್ಯದಿಂದಲೇ ಪರಿಹಾರಮಾರ್ಗ ಸೂಚಿಸುತ್ತಿದೆ.

ರಷ್ಯೆಯಲ್ಲಿ ನಾನು ಮಾಡಿದ ಅನೇಕ ಶಸ್ತ್ರಕ್ರಿಯೆ ಸಾಧಾರಣವಾಗಿ ಬಳಕೆಯಲ್ಲಿರುವ, ವೈದ್ಯಾಲಯದಲ್ಲಿ ಮಾಡುವಂತಹ ಶಸ್ತ್ರಚಿಕಿತ್ಸೆಯೇ ಆಗಿತ್ತು. ಕಿಬ್ಬೊಟ್ಟೆಗೆ ಸಂಬಂಧಿಸಿದ ಮತ್ತು ಅಂಗಾಂಶವನ್ನು ಬಗಿದು ಸರಿಪಡಿಸಿದ ಚಿಕಿತ್ಸೆಯನ್ನೇ ನಾನು ಮಾಡುತ್ತಿದ್ದುದು. ಎದೆಯಲ್ಲಿ ಕಂಡ ಮಾಂಸಾರ್ಬುದ (Cancer) ವನ್ನು ಕತ್ತರಿಸಿ ಚಿಕಿತ್ಸೆ ಮಾಡಿದ್ದೇನೆ. ಮೂತ್ರಾಶಯವು ನೇರ್ಪಡಿಸಿದುದನ್ನು ನೋಡದೆ ಅದೂ ಮಾಂಸಾರ್ಬುದವೆಂದು ತಪ್ಪಾಗಿ ತಿಳಿದುದನ್ನು ಸರಿಪಡಿಸಿದ್ದೇನೆ. ರಷ್ಯೆಯಲ್ಲಿ ನಾಲ್ಕುಬಾರಿ ಮಿದುಳು ವ್ರಣವನ್ನು (Brain Abscesses) ಬಸಿದು ಚಿಕಿತ್ಸೆ ನಡೆಸಿದ್ದೇನೆ. ಅನೇಕ ಎಲುಬು ತೊಟ್ಟುಗಳನ್ನು ಸರಿಪಡಿಸಿದ್ದೇನೆ. ವಿಷಮಶೀತಜ್ವರಕ್ಕೆ ಕಾರಣನಾಗಿದ್ದ ರೋಗಿಯನ್ನು ಹಾಸಿಗೆಯಿಂದಿಳಿಸದೆ ಶಸ್ತ್ರಚಿಕಿತ್ಸೆ ಮಾಡಿದ್ದೇನೆ. ಕಚ್ಚಾ ಶಸ್ತ್ರವೈದ್ಯಕ್ಕೆ ಸಂಬಂಧಪಟ್ಟ ಎಲ್ಲಾ ಚಿಕಿತ್ಸೆಯನ್ನೂ ಮಾಡಿದ್ದೇನೆ. ಮಾಂಸದೊಳಗೆ ಬೆಳೆಯುತ್ತಾ ಹೋಗುವ ಉಗುರನ್ನು ಕತ್ತರಿಸಿ, ಅನಿಲಸ್ವಭಾವಕ್ಕೆ ಕಾರಣವಾಗದೆ ಅಂಗಾಂಶಕ್ಕೆ ಶಸ್ತ್ರಕ್ರಿಯೆ ಮಾಡಿರುವೆ. ನರಗ್ರಂಥಿ ಮತ್ತು ನರವ್ಯೂಹದ ಮೇಲೆ ಕೈಚಳಕ ತೋರಿ ಚಿಕಿತ್ಸೆ ನಡೆಸಿದ್ದೇನೆ. ಈ ಬಗೆಯ ಚಿಕಿತ್ಸೆ ಮಾಡಬೇಕೆಂದು ನಾನು ಹೆದರಲೇನೂ ಕಾರಣವಿರಲಿಲ್ಲ. ವೈಜ್ಞಾನಿಕ ಸಾಧಕಗಳು ಅಷ್ಟು ಮುಂದುವರಿಯದಿದ್ದ ಕಾಲದಲ್ಲಿ ನನಗೆ ಸಿಕ್ಕಿದಷ್ಟು ಉಪಕರಣ ಸೌಲಭ್ಯದಿಂದಲೇ ಚಿಕಿತ್ಸೆ ಮಾಡಿದ್ದೇನೆ. ಚಿಕಿತ್ಸೆ ಕಷ್ಟ ಎಂದು ತೋರಿದಾಗ ನನ್ನೊಂದಿಗೆ ಇಪ್ಪತ್ತು ವರ್ಷಕಾಲ ದುಡಿದ ಸಹೋದ್ಯೋಗಿಯ ಸಹಾಯ

ಪಡೆದಿದ್ದೇನೆ. ಪೂರ್ವ ಸೂಚನೆಯಿಲ್ಲದೆ ಅನೇಕಸಾರಿ ಲೇಖನಿಗಿಂತಲೂ ಹಗುರವಾದ ಸಣ್ಣ ಚೂರಿಯಿಂದ ಶಸ್ತ್ರಚಿಕಿತ್ಸೆ ಮಾಡಿದ್ದೇನೆ.

## ೧೦

ಕಾನ್ಸಾಸ್ ಪ್ರಾಂತ್ಯದಲ್ಲಿ ಖಾಸಗೀ ವೈದ್ಯಾಲಯಗಳು ಹೆಚ್ಚಿನ ವ್ಯವಸ್ಥಿತ ಸಂಸ್ಥೆಗಳಾಗಿದ್ದವು. ಈ ಪ್ರಾಂತ್ಯದಲ್ಲಿ ಅನೇಕ ವೈದ್ಯಶಾಲೆಗಳಿದ್ದವು. ಈ ವೈದ್ಯಶಾಲೆಗಳಲ್ಲಿ ಹೆಚ್ಚಿನ ಅನುಕೂಲತೆ ರೋಗಿಗಳಿಗೆ ದೊರೆಯುತ್ತಲಿತ್ತು. ಈ ಪ್ರಾಂತ್ಯದಲ್ಲಿದ್ದಷ್ಟು ಸುವ್ಯವಸ್ಥಿತ ವೈದ್ಯಾಲಯಗಳು ಪ್ರಪಂಚದಲ್ಲಿ ಬೇರೆ ಎಲ್ಲಿಯೂ ಇರಲಿಲ್ಲ. ಖಾಸಗೀ ವೈದ್ಯಾಲಯಗಳು ಯಥಾರ್ಥವಾಗಿ ತಲೆಯೆತ್ತಿಕೊಳ್ಳುತ್ತಲಿತ್ತು "ವೈದ್ಯಾಲಯಗಳನ್ನೇಕೆ ತೆಗೆದರು" ಎಂದು ಸಂಬಂಧಪಟ್ಟವರನ್ನು ಕೇಳಿದೆ. ಅವರಿಂದ ನನಗೆ ಸದುತ್ತರ ದೊರೆಯಲಿಲ್ಲ.

ನನಗೆ ಮಾತ್ರ ನೇರವಾಗಿ ಉಚಿತ ಉತ್ತರ ಹೊಳೆಯಿತು. ನನಗೆ ಮಾಡಲು ಇನ್ನೂ ಪವಿತ್ರವಾದ ಕೆಲಸವಿದ್ದೇಯಿರುವುದು ಎಂದೆನಿಸಿತು. ಖಾಸಗೀ ವೈದ್ಯಾಲಯಗಳು ವ್ಯವಹಾರಿಕ ದೃಷ್ಟಿಯಲ್ಲಿ ಚೆನ್ನಾಗಿ ನಡೆಯುವುದಲ್ಲದೆ ಉತ್ತೇಜನೀಯವಾಗಿರುವುದು ಎಂದು ಕಂಡುಬಂತು. ಈಗ ವೈದ್ಯ ಪ್ರಯೋಜನವಿಲ್ಲದ ವ್ಯವಹಾರಕ್ಕೆ ಕೈಹಾಕಲಾರ. ವೈದ್ಯಾಲಯದಿಂದ ದೊರೆಯುವ ಆದಾಯ ಅಲ್ಲಿಯ ಖರ್ಚಿಗೆ ಸರಿಹೋಗುವುದು. ಇದರಿಂದ ಉಳಿಕೆಯಾಗುವುದು ಎಂಬ ಮಾತು ನಿಜವಲ್ಲ. ಖಾಸಗೀ ವೈದ್ಯ ಹೆಚ್ಚು ರೋಗಿಗಳನ್ನು ಪರೀಕ್ಷಿಸಿ, ಚಿಕಿತ್ಸೆ ನಡೆಸಿ ತನ್ನ ಆದಾಯವನ್ನು ಹೆಚ್ಚಿಸಕೊಳ್ಳಬಹುದು. ವೈದ್ಯಾಲಯವೇ ಆದಾಯವನ್ನು ಹೆಚ್ಚಿಸಕೊಳ್ಳದಾದ ವೈದ್ಯವೃತ್ತಿಯಲ್ಲಿ ಹಣವೇ ಪ್ರಾಧಾನ್ಯವಲ್ಲ. ಹಣದೊಂದಿಗೆ ಕೀರ್ತಿಯೂ ಬೆಳೆಯಬೇಕು. ಖಾಸಗೀ ವೈದ್ಯಾಲಯ ತೆಗೆದವನು, ಹೆಚ್ಚಿನ ರೀತಿಯಲ್ಲಿ ಜನರಿಗೆ ತಾನು ಕಾಣಿಸಿಕೊಳ್ಳುವನೆಂದು ಭಾವಿಸಿಕೊಳ್ಳುತ್ತಾನೆ. ಅವನು ಕಿರೀಟ ಧರಿಸಿದ ದೊರೆಯೆಂದು ತಿಳಿಯಬಾರದು. ಕಿರೀಟ ಎನ್ನುವುದರಲ್ಲಿ ಮುಳ್ಳು ಸದಾ ಇರುವುದೆಂದು ತಿಳಿಯಬೇಕು. ವೈದ್ಯಾಲಯದಿಂದ ಲಾಭ ಬರಲಿ, ಬಾರದಿರಲಿ, ನಷ್ಟ ಖಂಡಿತವೆಂದು ತಿಳಿಯಬೇಕು.

ನನ್ನ ವಸ್ತುಸ್ಥಿತಿ ಹೀಗಿತ್ತು. ಶಸ್ತ್ರವೈದ್ಯನಿಗೆ ಚಿಕಿತ್ಸೆ ನಡೆಸಲು ರೋಗಿಗಳು ಸಿಕ್ಕದಿದ್ದಲ್ಲಿ ಅವನೇನು ಮಾಡಿಯಾನು ? ಅವನು ಶಸ್ತ್ರವೈದ್ಯನೆಂದೆನಿಸಿಕೊಳ್ಳುವುದಾದರೂ ಹೇಗೆ? ನಾನು ಅನೇಕ ಮನೆಗಳಲ್ಲಿ ಶಸ್ತ್ರಚಿಕಿತ್ಸೆ ಮಾಡಿದ್ದೇನೆ. ನಾನೇ ಒಂದು ಖಾಸಗೀ ವೈದ್ಯಾಲಯ ತೆಗೆದಿದ್ದಲ್ಲಿ ಅಲ್ಲಿ ಶಸ್ತ್ರಚಿಕಿತ್ಸೆಯನ್ನು ಮಾಡಬಹುದಾಗಿತ್ತು. ನನ್ನ ಸಹೋದ್ಯೋಗಿಗಳು ನನ್ನನ್ನು ಖಾಸಗೀ ವೈದ್ಯಾಲಯ ತೆಗೆಯಲು ಸಲಹೆಯಿತ್ತರು. ನಾನು ವೈದ್ಯಾಲಯ ತೆಗೆದು ಅಲ್ಲಿ ನಿಂತುಬಿಟ್ಟಲ್ಲಿ, ನನ್ನ ವೃತ್ತಿಗೆ ಮತ್ತು ಪ್ರಯತ್ನಕ್ಕೆ ಅಡಚಣೆಯಾಗುವುದು ಎಂದು ತಿಳಿದೆ. ವೈದ್ಯಾಲಯದಲ್ಲಿ ಆಡಳಿತ ಮೊದಲಾದುವುಗಳನ್ನು ನೋಡಿಕೊಳ್ಳಲು ನನ್ನ ಇಡೀ ವೇಳೆ ವ್ಯಯವಾಗುವುದು ಎಂದು ತಿಳಿದೆ. ನಗರದಲ್ಲಿ ನನ್ನ ಉತ್ಪತ್ತಿ ಹೆಚ್ಚಿಸಿಕೊಳ್ಳುವವರಿಗೂ ಉದರಂಭರಣ ನಡೆಯುವಹಾಗಿಲ್ಲ ಎಂದು ತಿಳಿದೆ.

ಹಿಂದೆ ಸೋಂಕು ತಡೆಗಟ್ಟಲು ಸಾಧನಗಳೇ ಇರಲಿಲ್ಲ. ವೈದ್ಯಾಲಯ ಸರ್ವತ್ರ ವ್ಯಾಪನೆಗೆ ತಡೆಯೂ ಇರಲಿಲ್ಲ. ಇಪ್ಪತ್ತು ವರ್ಷದ ಹಿಂದೆ ನಗರಗಳಲ್ಲಿ ಮಾತ್ರ ವೈದ್ಯಾಲಯಗಳಿದ್ದವು. ಅಲ್ಲಿ ಆಕಸ್ಮಿಕ ಅಪಾಯ ನೋವುಗಳಿಗೆ ಹಳ್ಳಿ ವೈದ್ಯ ಮದ್ದು ಕೊಡುತ್ತಿದ್ದ. ಆಗ ವಾಹನ ಸೌಕರ್ಯ ಹೇಳಿಕೊಳ್ಳುವಷ್ಟಿರಲಿಲ್ಲ. ದೂರದಿಂದ ರೋಗಿಗಳು ನಡೆದುಕೊಂಡೇ ವೈದ್ಯಾಲಯಕ್ಕೆ ಬರಬೇಕಾಗಿತ್ತು. ಮೂವತ್ತೈದು ಮೈಲಿ ದೂರದಲ್ಲಿದ್ದ ವೈದ್ಯಾಲಯಕ್ಕೆ ರೋಗಿ ಬರಲು ಸುಮಾರು ಐದು ಗಂಟೆಗಳಕಾಲ ಪ್ರಯಾಣಮಾಡಬೇಕಾಗಿತ್ತು. ಈ ದೂರ ಪ್ರಯಾಣ ತುಂಬಾ ದುಸ್ತರವಾಗಿತ್ತು. ರೋಗಿಯನ್ನು ನೋಡಲು ಬಂದ ವೈದ್ಯ, ರೋಗಲಕ್ಷಣವನ್ನು ತಿಳಿದು ಮದ್ದು ಕೊಡುವುದರೊಳಗಾಗಿ ಅವನ ಹೆಚ್ಚುವೇಳೆ ಕಳೆದುಹೋಗುತ್ತಲಿತ್ತು. ಈ ನಿಧಾನದಿಂದ ಶಸ್ತ್ರಕ್ರಿಯಾನಂತರ ಅನೇಕ ರೋಗಿಗಳು ಚೇತರಿಸಿಕೊಳ್ಳದೆ ಸಾಯುತ್ತಿದ್ದರು. ವೈದ್ಯಾಲಯದಲ್ಲಿ ಚಿಕಿತ್ಸೆ ಪಡೆದ ರೋಗಿಗಳು ಸಾಯುತ್ತಿರಲಿಲ್ಲವೆಂದಲ್ಲ. ಸಾವು ಅಲ್ಲಿಯೂ ತಾಂಡವವಾಡುತ್ತಿತ್ತು. ಸಾವಿಗೆ ಕಾರಣ ಮಾತ್ರ ತಿಳಿಯುತ್ತಿರಲಿಲ್ಲ. ಅನೇಕರೋಗ, ರೋಗಲಕ್ಷಣಗಳು ಕಾಣಿಸಿಕೊಂಡಾಗ, ವೈದ್ಯನಿಗೆ ಚಿಕಿತ್ಸೆ ನಡೆಸಲು ಯೋಗ್ಯ ವೈದ್ಯಾಲಯವಿರಬೇಕು ಎಂದೆನಿಸುತ್ತಿತ್ತು. ಖಾಸಗೀ ವೈದ್ಯಾಲಯದಲ್ಲಿ ಚಿಕಿತ್ಸೆ ಪಡೆಯುತ್ತಿರುವೆ ಎಂದು ರೋಗಿ ತಿಳಿಸಿದಾಗ, ಖಾಸಗಿ ಕೀರ್ತಿ

ಸ್ಪೃಹವನ್ನು ಬಯಸುತ್ತಿದ್ದ ವೈದ್ಯನಿಗೆ ಸರಿಯಾದ ರೋಗಿ ಸಿಗುತ್ತಿರಲಿಲ್ಲ. ರೋಗಿ ನಿಜವಾಗಿ ಅಸಮರ್ಥ ವೈದ್ಯನ ಕೈಗೆ ಸಿಕ್ಕುತ್ತಿದ್ದ. ಸುವ್ಯವಸ್ಥಿತ ವೈದ್ಯಾಲಯದಲ್ಲಿ ಚಿಕಿತ್ಸೆ ಪಡೆದ ರೋಗಿ ನಿಜವಾಗಿಯೂ ಧನ್ಯನಾಗುತ್ತಿದ್ದ. ಹೆಚ್ಚು ಉಪಕರಣ ಸೌಲಭ್ಯವಿಲ್ಲದ ಗ್ರಾಮ ವೈದ್ಯನ ಕೈಗೆ ಸಿಕ್ಕಿ, ಪೇಚಾಟ ಪಡುವುದು ಅವನಿಗೆ ತಪ್ಪುತ್ತಿತ್ತು.

ಖಾಸಗೀ ವೈದ್ಯಾಲಯ ಮುಂದೆ ಬಂದ ಉದ್ದೇಶವೇನೇ ಇರಲಿ, ಖಾಸಗೀ ವೈದ್ಯರು ಮುಂದೆ ಬಂದರು. ಅವರು ಹೀಗೆ ಮುಂದೆ ಬಂದುದರಿಂದ ವೈದ್ಯಶಾಸ್ತ್ರಾಭ್ಯಾಸ ಬೆಳವಣಿಗೆಗೆ ಕಾರಣವಾಯಿತು. ಇದರಿಂದ ವೈದ್ಯಜ್ಞಾನ ಬೆಳವಣಿಗೆ ಹೆಚ್ಚಾಯಿತು. ಇದರಿಂದ ವೈದ್ಯರು ತಮ್ಮ ಮಹತ್ವಾಕಾಂಕ್ಷೆ ಯನ್ನು ಮತ್ತು ಸಾಮರ್ಥ್ಯವನ್ನು ತೋರಿಗೊಡಲು ಅವಕಾಶ ಸಿಕ್ಕಿತು. ಅನೇಕ ತರುಣವೈದ್ಯರು ಪ್ರಮುಖವೈದ್ಯರೆನಿಸಿಕೊಂಡರು. ವೈದ್ಯಾಲಯವೆಂದ ಕೂಡಲೇ ಏನೋ ಯಾವುದೋ ಅವ್ಯಕ್ತಭಯದಿಂದ ಅಡಗಿಕೊಳ್ಳುತ್ತಿದ್ದ ರೋಗಿಗಳು, ಭೀತಿ ತೊರೆದು ತಾವೇ ಮುಂದಾಗಿ ಬರಲಾರಂಭಿಸಿದರು. ಸಾಧಾರಣ ಕಾಹಿಲೆ ಮತ್ತು ಶರೀರ ವ್ಯತ್ಯಾಸಕ್ಕೆ ಸಲಹೆ ಕೇಳಲು, ವೈದ್ಯಾಲಯಕ್ಕೆ ಮತ್ತೆ ಮತ್ತೆ ಬರಲಾರಂಭಿಸಿದರು. ತೀರ ಕೈಮೀರುವಂತಿದ್ದ ಉಪದ್ರವಕ್ಕೆ ಮುಂಜಾಗ್ರತೆ ಯಿಂದಲೇ ವೈದ್ಯಾಲಯಕ್ಕೆ ಬಂದು ಸೇರಿಕೊಳ್ಳುತ್ತಿದ್ದರು. ರೋಗಿಗಳು ತಮಗೆ ಹತ್ತಿರವಾಗಿದ್ದ ವೈದ್ಯಾಲಯಕ್ಕೆ ಮತ್ತು ಪರಿಚಿತ ವೈದ್ಯರ ಬಳಿಗೆ ಸ್ನೇಹಿತರ ಎದುರಿನಲ್ಲಿ ಚಿಕಿತ್ಸೆ ಪಡೆಯಲು ಹೋಗುತ್ತಿದ್ದರೇ ಹೊರತು, ದೂರ ದಲ್ಲಿರುವ ಅಪರಿಚಿತ ವೈದ್ಯನ ಬಳಿಗೆ ಹೋಗಲು ಬಯಸುತ್ತಿರಲಿಲ್ಲ. ರೋಗ ಉಲ್ಬಣಗೊಳ್ಳುವುದಕ್ಕೆ ಮುಂಚೆಯೇ ರೋಗಿಗಳು ಶಸ್ತ್ರಚಿಕಿತ್ಸೆಗೆ ಒಪ್ಪಿಕೊಳ್ಳು ತ್ತಿದ್ದುದರಿಂದ ಅವರ ಜೀವಕ್ಕೆ ಭಯವಿರಲಿಲ್ಲ. ವೈದ್ಯಾಲಯವೆಂದರೆ ಮೃತ್ಯು ಭವನ ಎಂಬ ಕೆಟ್ಟ ಹೆಸರು ಇವರಿಂದ ಕಳಚಿತು.

೩೬×೫೦ ಅಡಿ ವಿಸ್ತರಣದಲ್ಲಿ ಸ್ವಂತವಾಗಿ ಮನೆಕಟ್ಟಲು ಯೋಚಿಸಿದೆ. ಈ ವಿಸ್ತರಣದಲ್ಲಿ ಐದು ಕೋಣೆಗಳಿರಬೇಕು. ಶಸ್ತ್ರಚಿಕಿತ್ಸೆ ನಡೆಸಲು ಕೋಣೆ ಯೋಗ್ಯ ವಾಗಿರಬೇಕು. ಅಷ್ಟೇ ವಿಸ್ತಾರವಾಗ ಮೇಲಿನ ಮೂರನೆ ಅಂತಸ್ತಿನಲ್ಲಿ ರೋಗಿ ಗಳನ್ನು ಪರೀಕ್ಷಿಸಿ, ರೋಗಲಕ್ಷಣ ತಿಳಿದು ಸಲಹೆಕೊಡಲು ಅನುಕೂಲಪಡಿಸಿ ಕೊಳ್ಳಬೇಕೆಂದು ಯೋಚಿಸಿದೆ. ಕೇವಲ ಮರದ ಹಲಗೆಗಳಿಂದಲೇ ಕಟ್ಟಲ್ಪಟ್ಟ

ನಿವೇಶನದಲ್ಲಿ, ಧಾರಾಳವಾಗಿ ಗಾಳಿಯಾಡುವಂತೆ ಮಾಡಿಸಿದೆ. ಬಿಸಿಗಾಳಿ (ಸೆಕೆ) ತಡೆಯುವಷ್ಟು ಅನುಕೂಲವಾಗಿ ಕಟ್ಟಡ ಕಟ್ಟಿರಲಿಲ್ಲ. ಕಟ್ಟಿದ ಮನೆಯಲ್ಲಿ ಏನೋ ಲೋಪವಿತ್ತು. ನಾನು ಈ ಮರದ ಮನೆಯನ್ನು ಕಟ್ಟಿ, ಬಿಸಿಯುಸಿರು ಬಿಡುವಂತಾಯಿತು.

ಮನೆಯ ತಳಭಾಗದಲ್ಲಿ ನೀರನ್ನು ಶೇಖರಿಸಲು, ನೀರು ಕೊಟ್ಟಡಿ ಕಟ್ಟಿಸಿದೆ. ನೀರನ್ನು ಕೈಪಂಪುಗಳ ಸಹಾಯದಿಂದ ಒತ್ತಿ ತೆಗೆಸಿ ಶಸ್ತ್ರಚಿಕಿತ್ಸೆಯ ಸ್ಥಳಕ್ಕೆ ನೀರಿನ ಸರಬರಾಯಿ ಧಾರಾಳವಾಗಿರುವಂತೆ ಮಾಡಿಕೊಂಡೆ.

ಕೆಳನಿವೇಶನದಲ್ಲಿ ಶಸ್ತ್ರಚಿಕಿತ್ಸೆಯ ಪ್ರದರ್ಶನಾಲಯವಲ್ಲದೆ, ಅಡಿಗೆಮನೆ, ಊಟದಮನೆ, ನೀರಿನಮನೆ ಮತ್ತು ಒಂದೆರಡು ಮಲಗುವ ಕೋಣೆಯನ್ನು ಕಟ್ಟಿಸಿದೆ. ಶಸ್ತ್ರಚಿಕಿತ್ಸೆಯ ಪ್ರದರ್ಶನಾಲಯದ ಮೇಲ್ಗಡೆಗೆ ಹೆಂಚು ಹೊದ್ದಿಸಿದೆ. ಹೀಗೆ ಕಟ್ಟಿಸಿದ ಮನೆಯನ್ನು ನೋಡಲು ಹೆಮ್ಮೆಯಾಗಿತ್ತು. ಕೆಲಸವೂ ಹೆಮ್ಮೆಪಡುವಂತಹ ಕೆಲಸವಾಗಿತ್ತು. ಹೀಗೆಯೇ ಕಟ್ಟಿಸಿದ್ದ ಇತರ ವೈದ್ಯಾಲಯಕ್ಕೆ ಹೆಂಚು ಹೊದ್ದಿಸಿರಲಿಲ್ಲ. ಗ್ರಾಮಾಂತರದ ಕೆಲಸಗಾರನು ಹೊದ್ದಿಸಿದ ಹೆಂಚು ಸರಿಯಾಗಿ ನಿಲ್ಲದು, ವರಾಂಡದಲ್ಲಿ ತಿರುಗಾಡುತ್ತಿರುವಾಗ ಹೆಂಚು ಕಳಚಿಕೊಂಡು ತಲೆಯಮೇಲೆ ಬೀಳುವ ಸಂಭವ ಉಂಟೆಂದು ತಿಳಿದ ನಾನು, ನಗರದಿಂದ ನಿಪುಣನಾದ ಕೆಲಸಗಾರನನ್ನು ಕರೆಯಿಸಿ, ಸರಿಯಾದ ರೀತಿಯಲ್ಲಿ ಹೆಂಚು ಹೊದ್ದಿಸಿದೆ.

ಅರವತ್ತು ಡಾಲರ್ ಖರ್ಚುಮಾಡಿ ಶಸ್ತ್ರೋಪಕರಣಗಳನ್ನು ಸಂಸ್ಕರಿಸಲು ಹೆಚ್ಚು ಎತ್ತರವಿಲ್ಲದ ಲೋಹದ ಪಾತ್ರೆಯನ್ನು ಕೊಂಡೆ. ಆಳವಿಲ್ಲದ ಅಗಲವಾದ ಬಾಯುಳ್ಳ ನೀರು ಕುದಿಸುವ ಪಾತ್ರೆಯನ್ನು ಕಲಾಯಿ ಮಾಡುವವನೊಬ್ಬ ಮಾಡಿಕೊಟ್ಟ. ಈ ಪಾತ್ರೆ ಉಪಕರಣ ಮತ್ತು ಕೈಚೀಲವನ್ನು ಹಬೆಯಲ್ಲಿ ಕುದಿಸಲು ಅನುಕೂಲವಾಯಿತು. ಈ ಕುದಿಪಾತ್ರೆಗೆ ಎರಡು ಡಾಲರ್ ಕೊಟ್ಟೆ. ಸಂಸ್ಕರಣ ಶಾಲೆಯಲ್ಲಿ ಇದ್ದ ವಸ್ತುಗಳು ಎಂದರೆ ಇಷ್ಟುಮಾತ್ರವೆ. ಒಟ್ಟು ಸಂಸ್ಕರಣ ಶಾಖೆಗಾಗಿ ಅರವತ್ತೆರಡು ಡಾಲರ್ ಖರ್ಚುಮಾಡಿದೆ. ಇತರ ವೈದ್ಯಾಲಯದಲ್ಲಿ ಸಂಸ್ಕರಣಕ್ಕಾಗಿ ಖರ್ಚುಮಾಡಿ ಸಿದ್ಧಪಡಿಸಿಕೊಂಡಂತೆ ನಾನೂ ಸಿದ್ಧಪಡಿಸಿಕೊಂಡಿದ್ದೆ. ಇಷ್ಟು ಸಾಧನಸಾಮಗ್ರಿ ಶಸ್ತ್ರಚಿಕಿತ್ಸೆಗೆ ಸಾಲದು ನಿಜ. ಸಮರ್ಥವೈದ್ಯನಿಗೆ ಈ ಅನುಕೂಲತೆ ಖಂಡಿತ ಸಾಲದು.

ನಿವೇಶನದಲ್ಲಿ ಒಂದುಭಾಗವನ್ನು ಮೇಲಕ್ಕೆ ಎತ್ತುವ ಯಂತ್ರ (Lift) ಸ್ಥಾಪಿಸುವುದಕ್ಕಾಗಿ ಜಾಗಬಿಟ್ಟೆ. ಇದು ಮುಂದೆ ನನ್ನ ಕನಸು ನೆನೆಸಾಗಲು ಬಿಟ್ಟು ಜಾಗವಾಗಿತ್ತು. ಮೇಲಕ್ಕೆತ್ತುವ ಜಾಗ ಸ್ಥಾಪಿಸದಿದ್ದಲ್ಲಿ, ರೋಗಿಗಳನ್ನು ನಡೆಸಿಕೊಂಡು ಅಥವಾ ಹೊತ್ತುಕೊಂಡು ಹೋಗಬೇಕಾಗಿತ್ತು. ಒಟ್ಟು ವೈದ್ಯಾಲಯ ಸ್ಥಾಪನೆಗೆ ನನ್ನಿಂದ ನಾಲ್ಕು ಸಾವಿರ ಡಾಲರ್ ಖರ್ಚಾಯಿತು. ಇನ್ನೂ ಅರ್ಧದಷ್ಟು ಖರ್ಚಿನ ಬಾಬತ್ತು ಉಳಿದುಕೊಂಡಿತ್ತು.

ನಿವೇಶನ, ಕಟ್ಟಿಸಿದ ವೈದ್ಯಾಲಯ, ಇವು ಸಿದ್ಧವಾದೊಡನೆಯೇ ನಾನಲ್ಲಿ ನಿಂತು ಹಲವಾರು ವರ್ಷ ವೃತ್ತಿ ನಡೆಸಿದೆ. ಆಗ ನನಗೆ ಹಣಕಾಸಿನ ಮುಗ್ಗಟ್ಟು ಹೇಳತೀರದಷ್ಟಾಯಿತು. ಮುಂದೆ ನನಗೇನು ತೊಡಕು ಕಾದಿರುವುದೋ ಎಂದು ತಿಳಿಯದೆ ಹೆದರಿ ಒದ್ದಾಡಿದೆ. ನಾನು ಎಲ್ಲಕ್ಕೂ ಯಾವುದಕ್ಕೂ ಪೇಚಾಡಬೇಕಾಯಿತು. ಈ ಎಲ್ಲಾ ಕಾರಣದಿಂದ, ಚಿಂತೆಗೀಡಾದ ನಾನು ಆರೋಗ್ಯ ಕೆಡಿಸಿಕೊಂಡೆ. ಆಗ ತಲೆಹಾಕದ ಅನೇಕ ಬೇನೆಗಳು ನನ್ನಲ್ಲಿ ಕಾಣಿಸಿಕೊಂಡವು. ನನಗೇನಾಯಿತೋ ಅಂತೆಯೇ ವೈದ್ಯಾಲಯಕ್ಕೂ ಧಕ್ಕೆ ತಗುಲಿತು. ನನ್ನ ಎಡಗೈ ನಡುಬೆರಳ ಮಧ್ಯೆ ಬುಗಟೆ (Tumor) ಯೆದ್ದು ಕಾಣಿಸಿಕೊಂಡಿತು. ನಾನೇ ಇದನ್ನು ಕತ್ತರಿಸಿ ತೆಗೆದುಹಾಕಿದೆ. ಈ ಬುಗಟೆ ನಡುಬೆರಳ ಕೆಳಭಾಗದಲ್ಲಿ ಒಂದೂವರೆ ಅಂಗುಲದಷ್ಟು ವ್ಯಾಪಿಸಿಕೊಂಡಿತ್ತು. ಸೂಕ್ಷ್ಮದರ್ಶಕ ಫಲಕದಲ್ಲಿ ಪರೀಕ್ಷಿಸಿದಾಗ, ಅದು ಕ್ಷಯಚಿಹ್ನೆಯೆಂದು ಕಂಡುಬಂತು. ಈ ಪರೀಕ್ಷಾಭಾಗ, ಒಳಪದರ ಕಾಣುವಿಕೆ ನಿಜವಾಗಿಯೂ ನನಗೆ ಭಯಂಕರವಾದ ನೋವಿನ ಅನುಭವವನ್ನು ತಂದಿತು. ಬೆರಳನ್ನಾಡಿಸಿದಲ್ಲಿ ವಿದ್ಯುತ್ ಹರಿದಂತಾಗಿ ಸಹಿಸಲಾರದೆ ಹೋದೆ. ಹೀಗೆ ಸಹಿಸಲಾರದ ವೇದನೆಯನ್ನು ಅನುಭವಿಸಿದೆ. ಬುಗಟೆಯನ್ನು ತೆಗೆದುಹಾಕಿದ ಜಾಗಕ್ಕೆ ಎರಡುವಾರಕೊಮ್ಮೆ ಪೂತಿನಾಶಕ ದ್ರವವನ್ನು (Iodoform-Glycerine) ಹಚ್ಚುತ್ತಿದ್ದೆ. ಸೂಜಿಮದ್ದು ಬೇರೆ ಚುಚ್ಚಿಸಿಕೊಂಡೆ. ಪ್ರತಿ ಎರಡು ವಾರಗಳಿಗೂ ಹನ್ನೆರಡುಸಾರಿ ಸೂಜಿಮದ್ದು ಚುಚ್ಚಿಸಿಕೊಂಡೆ. ಒಂದುಸಾರಿ ಚುಚ್ಚಿಸಿಕೊಂಡಮೇಲೆ ನಾನು ಇಡೀ ದಿನ ಕೈ ಬೆರಳನ್ನು ಹಿಡಿದು ಸುತ್ತಾಡುತ್ತಲೇ ಇರಬೇಕಾಗಿತ್ತು. ಈ ಗಾಯ ಮಾಗಿ ಎಂದಿನಂತೆ ನೋವಿಲ್ಲದಂತೆ ಎರಡು ಕೈಗಳಿಂದ ಕೆಲಸಮಾಡಲು ಒಂಬತ್ತು ತಿಂಗಳು ಕಾಲಾವಕಾಶ ಬೇಕಾ

ಯಿತು. ಒಂದೇ ಕೈಯಿಂದ ಶಸ್ತ್ರಚಿಕಿತ್ಸೆ ಮಾಡಲಾಗುತ್ತಿರಲಿಲ್ಲ. ಒಂದು ಕೈಯಿಂದಲೇ ಸಾಧ್ಯವಾದಷ್ಟು ಶಸ್ತ್ರಚಿಕಿತ್ಸೆ ಮಾಡುತ್ತಿದ್ದೆ. ಇದರಿಂದ ವೈದ್ಯಾಲಯದ ಉತ್ಪತ್ತಿ ತೀರ ಕಡಿಮೆಬಿದ್ದು ಕೊನೆಗೆ ಆದಾಯವೇ ಇಲ್ಲವೆನ್ನುವಂತಾಯಿತು.

ನೋವಿನಿಂದ ಸುಧಾರಿಸಿಕೊಂಡಮೇಲೆ ಕೆಲವು ತಿಂಗಳಕಾಲ ಕೆಲಸ ಮಾಡಿದೆ. ಪುನಃ ಇನ್ನೂ ಗುರುತರವಾದ ಕಾಹಿಲೆಗೆ–ಅತಿ ಕೀಲುನೋವಿನ ಬಾಧೆಗೆ ಗುರಿಯಾದೆ. ಇದು ಅತ್ಯಂತ ವಿನಾಶಕಾರಿ ರೋಗವೆಂದು ತಿಳಿಯಿತು. ಎಲ್ಲಾ ನೋವಿಗೂ ಮಾಂಸಖಂಡವೇ ಹೆಚ್ಚು ಮೂಲಾಧಾರವಾದದ್ದು. ಈ ಕೀಲುನೋವಿನ ಬಾಧೆಯನ್ನು ಹೆಚ್ಚು ಅನುಭವಿಸಿದೆ. ಮೊದಲ ಇಪ್ಪತ್ತು ನಾಲ್ಕು ಗಂಟೆಯಲ್ಲಿ ಈ ನೋವು ಅತಿಯಾತನೆಯನ್ನುಂಟುಮಾಡುವುದೆಂದು ನನಗೆ ಮೊದಲೇ ತಿಳಿದಿತ್ತು.

ನಾನು ಬಹಳ ಕಷ್ಟದೆಶೆಗೆ ಸಿಕ್ಕಿಕೊಂಡೆ. ನನ್ನಿಂದ ಕೆಲಸವೇ ಆಗುವಂತಿರಲಿಲ್ಲ. ನನ್ನ ಆದಾಯ ಬೇರೆ ಕಡಿಮೆಯಾಗುತ್ತಿತ್ತು. ಸಂಪಾದಿಸಿದುದರಲ್ಲಿ ಉಳಿಯುವ ಭಾಗವೇ ಇಲ್ಲವೆನ್ನುವಂತಾಯಿತು. ರೋಗಾವಸ್ಥೆಯಲ್ಲಿದ್ದ ನಾನು, ವೈದ್ಯಾಲಯದಲ್ಲಿ ನನ್ನದೆನ್ನುವ ಭಾಗವನ್ನು ಬಿಟ್ಟುಕೊಡಲು ಒಪ್ಪಿ ಸಹಿಹಾಕಿದೆ. ನನ್ನದೆನ್ನುವ ಭಾಗವೂ ಅತಿ ಅಲ್ಪವೇ ಆಗಿತ್ತು. ನನ್ನ ಬಾಗಸ್ಥನಿಗೆ, ಹೆಚ್ಚು ಹಣವನ್ನು ವೆಚ್ಚಮಾಡಿದವನಿಗೆ, ನನ್ನಿಂದ ನಷ್ಟವೈ ಆಯಿತು ಎಂದು ನೆನೆದು ನನಗೆ ದುಃಖವಾಯಿತು. ಇನ್ನು ನಾನು ಹೆಚು ದಿನ ಬದುಕುವುದಿಲ್ಲವೆಂದು ನನ್ನಲ್ಲಿದ್ದುದನ್ನೆಲ್ಲಾ ಕೊಟ್ಟುಬಿಟ್ಟೆ. ಅನೇಕ ವರ್ಷ ಸಂಗ್ರಹಿಸಿಟ್ಟ ಪುಸ್ತಕ–ಸಂಗ್ರಹ ಮೊದಲಾದುವನ್ನೆಲ್ಲಾ ಎಲ್ಲರಿಗೂ ಹಂಚಿಬಿಟ್ಟೆ.

ನನ್ನ ಈ ದೀರ್ಘವಾದ ಕಷ್ಟದಾಯಕ ವೇಳೆಯಲ್ಲಿ ನನ್ನ ಬಳಿ ನಿಂತವಳು ಎಂದರೆ, ಸ್ಥಾಯಿಭಕ್ತಿ ದಾದಿಯೊಬ್ಬಳೆ. ನಾನು ಕೀಲುನೋವು ರೋಗದಿಂದ ಪಾರಾಗಿ ಉಳಿದರೂ ತನಗೆ ವೇತನ ಸಿಗುವುದೆಂಬ ಧೈರ್ಯವಿರಲಿಲ್ಲ; ತೀರಿಕೊಂಡಲ್ಲಿ ನನ್ನಂತಹ ವೈದ್ಯ ತನಗೆ ಸಿಗುವುದಿಲ್ಲ ಒಂದು ಚೆನ್ನಾಗಿ ತಿಳಿದೇ ಈಕೆ ನನ್ನನ್ನು ವಿಚಾರಿಸಿಕೊಳ್ಳುತ್ತಿದ್ದಳು.

ಸಂಧಿವಾತದಿಂದ ನಾನು ಪಾರಾದೆ. ಆದರೆ, ನನ್ನ ಎಡ ಶ್ವಾಸ ಕೋಶಕ್ಕೆ ಕ್ಷಯ ಅಂಟಿತು. ನನ್ನ ಹಳೆಯ ಅಧ್ಯಾಪಕರೊಬ್ಬರು "ನೀನು ನೈರುತ್ಯಭಾಗಕ್ಕೆ ಹೋಗಿ ವಾಸಿಸು, ಮೇಲಾಗುವುದು" ಎಂದು ಹೇಳಿದರು. "ಅಲ್ಲಿಗೆ ಹೋಗದೇ ಇರಬೇಡ, ಇಲ್ಲಿ ನಿನ್ನ ಸ್ಥಿತಿ ವಿಷಮಿಸುವುದು" ಎಂದು ಬೇರೆ ಎಚ್ಚರಿಕೆಕೊಟ್ಟರು. ಸ್ಥಿತಿ ವಿಷಮಿಸಲಿ, ನಾನು ಎದುರಿಸಿಯೇ ಎದುರಿಸುವೆ ಎಂದು ಧೈರ್ಯದಿಂದ ಹೋರಾಡಲು ಸಿದ್ಧನಾದೆ.

"ಹಠ ಮಾಡಬೇಡ, ನೀನು ನೈರುತ್ಯಭಾಗಕ್ಕೆ ಹೋಗು" ಎಂದು ಜನರು ಒತ್ತಿ ಹೇಳುತ್ತಿದ್ದರೂ ನಾನು ಅದನ್ನು ಲಕ್ಷ್ಯಕ್ಕೆ ತಾರದೆ ಎಂದಿನಂತೆ ವೃತ್ತಿಗೆ ಗಮನವಿಡುತ್ತಿದ್ದೆ. ನನ್ನ ಆದಾಯ ಹೆಚ್ಚಿತು. ೧೯೧೬ರಲ್ಲಿ ಅಂದವಾದ ನಮೂನೆಯಲ್ಲಿ ಅಗ್ನಿ ನಿರೋಧಕ ಮನೆಯನ್ನು ಕಟ್ಟಿದೆ. ಕಟ್ಟಿ ಮುಗಿಸಿದ ಈ ಮನೆಯಲ್ಲಿ ರೋಗಿಗಳು ಚಿಕಿತ್ಸೆಗಾಗಿ ಹೆಚ್ಚುಮಂದಿ ಸೇರಬಂದರು. ಆದುದರಿಂದ ನಾನು ಇನ್ನೊಂದು ಮನೆಯನ್ನು ಕಟ್ಟಲು ಪ್ರಾರಂಭಿಸಬೇಕಾಯಿತು. ನನ್ನ ಅದೃಷ್ಟ ಏರಿಕೆಯಲ್ಲಿತ್ತು. ಅನೇಕ ಸಣ್ಣಸಣ್ಣ ರೋಗಗಳಿಗೆ ಚಿಕಿತ್ಸೆ ಮಾಡುತ್ತಿದ್ದೆ. ಹಲವು ಬಗೆಯ ಕೇಡು ಕೆಡಕುಗಳು ನನ್ನಿಂದ ದಾರಿಕಂಡು ನಿವಾರಣೆಯಾಗುತ್ತಲಿತ್ತು. ನನ್ನ ಸಹವಾಸಿ ಜನರು ನನ್ನನ್ನು ಕೆಣಕಿ ಬೆದರಿಸುವ ಸಾಹಸ ಮಾಡಿದರು.

ಹೊಸ ಮನೆಯನ್ನು ಕಟ್ಟಿ ಮುಗಿಸಿದುದಲ್ಲದೆ ದಾದಿಯರು ವಾಸಿಸುವುದಕ್ಕೆ ಉಚಿತ ಗೃಹವನ್ನೂ ಕಟ್ಟಿಸಿದೆ. ಸುಮಾರು ೫೦೬ ಅಡಿ ವಿಸ್ತರಣ ಉಳ್ಳ ಆ ಮನೆಯಲ್ಲಿ ಒಂದು ಭಾಗದಿಂದ ಇನ್ನೊಂದು ಭಾಗ ಸೇರುವ ಒಳಜಾಗದಲ್ಲಿ ಒಂದು ಅಂಗಳ ಕಟ್ಟಿಸಿದೆ. ಒಟ್ಟು ನಿವೇಶನ ವೈದ್ಯಾಲಯವೆನಿಸಿ ಪೂರೈಸಿದುದಾಯಿತು. ೨೦೦ ರೋಗಿಗಳು ಮಲಗಲು ತಕ್ಕುದಾಗಿ ೧೦೦ ದಾದಿಗಳು ವಾಸಿಸಲು ಅನುಕೂಲವಾಯಿತು.

ರೋಗಗಳ ಲಕ್ಷಣ ಮತ್ತು ವಿಧಾನಗಳನ್ನು ಕಂಡುಹಿಡಿಯಲು ಅನೇಕ ಆಧುನಿಕ ಉಪಕರಣಗಳನ್ನು ತರಿಸಬೇಕಾಯಿತು." ಎಕ್ಸರೇ ಕಿರಣ ಶೋಧನೆಯಿಂದ, ರಸಾಯನಿಕ ದ್ರವ ಪರೀಕ್ಷಣದಿಂದ ರೋಗ ಲಕ್ಷಣವನ್ನು ತಿಳಿಯಲು ಹೆಚ್ಚು ಪರಿಣಿತರನ್ನು ಗೊತ್ತುಮಾಡಿಕೊಳ್ಳಬೇಕಾಯಿತು. ಅಂದರೆ ತಜ್ಞಮಂಡಳಿಯನ್ನು ಹೆಚ್ಚುಮಾಡಿಕೊಳ್ಳಬೇಕಾಯಿತು. ರೋಗಲಕ್ಷಣ, ಚಿಕಿತ್ಸಾ

ರೂಪವನ್ನು ತಿಳಿದು, ಪ್ರಯೋಜನ ಪಡೆಯಲು ಅನುಕೂಲವಾಯಿತು. ರೋಗಿಗಳು ಅನೇಕ ಕಡೆ ಅವೇಳೆಯಲ್ಲಿ ತಜ್ಞರನ್ನು ಹುಡುಕಿಕೊಂಡು ಹೋಗುವುದು ತಪ್ಪಿತು. ಪ್ರಯೋಗಶಿಕ್ಷಣಸಂಸ್ಥೆ ಮತ್ತು ತರಗತಿಯನ್ನು ಬೇಕಾದಾಗ ತೆರೆಯಬಹುದು ಬಿಡಲೂಬಹುದು. ಪ್ರಯೋಗ ಶಾಲೆಯಿಂದ ರೋಗಿಗಳಿಗೆ ಹೆಚ್ಚು ಪ್ರಯೋಜನ. ಈ ಪ್ರಯೋಗಶಾಲೆಗಳು ಸ್ವತಂತ್ರವಾಗಿಯೇ ನಿಲ್ಲಬಹುದಾಗಿವೆ.

ಮೊದಲು ವೈದ್ಯಾಲಯ ತೆರೆದಾಗ ನನ್ನ ಸಹಾಯಕ್ಕೆ ಒಬ್ಬನೇಯಿದ್ದ. ಕ್ರಮೇಣ ಸಹೋದ್ಯೋಗಿಗಳು ಹೆಚ್ಚಾದರು. ಕೊನೆಗೆ ನನ್ನೊಂದಿಗೆ ಹದಿನೆಂಟು ಜನ ಕೆಲಸದಲ್ಲಿ ನಿಂತರು. ನಿರ್ದಿಷ್ಟಕಾಲ ಮತ್ತು ಪೂರ್ಣವೇಳೆ ಕೆಲಸಮಾಡುವ ಉದ್ಯೋಗಿಗಳು ಬೇರೆಕಡೆ ತಮಗೆ ಹೆಚ್ಚು ಸಂಭಾವನೆ ದೊರೆಯುವ ಸಂದರ್ಭದಲ್ಲಿ ಹೇಳದೆ ಕೇಳದೆ ತಮ್ಮ ಕೆಲಸ ಬಿಟ್ಟು ಬೇರೆಕಡೆ ಹೋಗುವ ಸಂಭವವುಂಟು. ಕೆಲವು ದಿನಗಳವರೆಗೆ ಕೆಲಸಕ್ಕೆ ಬಾರದೆ ನಿಲ್ಲುವುದೂ ಉಂಟು. ಈ ಸೂಕ್ಷ್ಮವನ್ನು ತಿಳಿದು ಎಂಟು ಜನ ವೈದ್ಯಪರಿಣಿತರನ್ನು ಹೆಚ್ಚುಮಂದಿ ದಾದಿಗಳು, ಸೇವಕರನ್ನು ಪೂರ್ಣವೇಳೆ ಕೆಲಸಮಾಡುವುದಕ್ಕಾಗಿ ನಿಯಮಿಸಿಕೊಂಡೆ. ವೈದ್ಯರು ಪರಿಣಿತರು ಎಂದರೆ, ನನ್ನೊಂದಿಗೆ ನಿಂತು ಕೆಲಸಮಾಡುವಂತಹ ಸತ್ಯವಂತರು–ಸಮರ್ಥರು ಎಂದರ್ಥ.

ನನ್ನ ವೈದ್ಯಾಲಯವು ಇತರ ವೈದ್ಯಾಲಯಗಳಂತಿರಲಿಲ್ಲ. ವೈಶಿಷ್ಟ್ಯವೇ ಬೇರೆಯಾಗಿತ್ತು. ವ್ಯವಸ್ಥೆ ಮತ್ತು ಇತರ ಚಿಕಿತ್ಸಾ ಸಲಹೆ ಇತರ ವೈದ್ಯಾಲಯಗಳ ಮಾದರಿಯಂತಿರಲಿಲ್ಲ. ಶಕ್ತಿಗುಂದಿದವರು, ನಡೆಯಲಾರದವರು ಇತರ ವೈದ್ಯಾಲಯದಲ್ಲಿ ರೋಗ ಪರೀಕ್ಷಣಕ್ಕೆ ಮತ್ತು ಚಿಕಿತ್ಸಾ ಸೌಲಭ್ಯಕ್ಕಾಗಿ ಗಂಟೆಗಟ್ಟಲೆ ಕಾಯಬೇಕಾಗಿತ್ತು. ನನ್ನ ವೈದ್ಯಾಲಯದಲ್ಲಿ ನಿತ್ರಾಣಿಗಳನ್ನು ನೇರವಾಗಿ ರುಗ್ಣಾಲಯಕ್ಕೆ (Ward) ಸೇರಿಸಿಕೊಳ್ಳುತ್ತಿದ್ದೆನಲ್ಲದೆ, ಅಲ್ಲಿಯೇ ಪ್ರಯೋಗ ಪರೀಕ್ಷೆ ನಡೆಸಿ ಔಷದೋಪಚಾರ ಮಾಡುತ್ತಿದ್ದೆ. ತಾಳಬಲ್ಲರು, ತಡೆಯಬಲ್ಲರು ಆದ ರೋಗಿಗಳು ಪರೀಕ್ಷೆಗಾಗಿ ಸ್ವಲ್ಪಹೊತ್ತು ನಿಲ್ಲಬೇಕಾಗುತ್ತಿತ್ತು. ಈ ಬಗೆಯ ರೋಗಿಗಳನ್ನು ಸಂಚಾರಿ ರೋಗಿಗಳೆಂದು ನಾವು ಕರೆಯುತ್ತಿದ್ದೆವು. ಇಂತಹವರನ್ನು ಪರೀಕ್ಷಿಸಿ, ಅನುಪಾನ ಚೀಟಿ ಕೊಟ್ಟು

ಕಳುಹಿಸಿಕೊಡುತ್ತಿದ್ದೆ. ಈ ಬಗೆಯ ಜನರನ್ನು ನೋಡಲು ತಜ್ಞವೈದ್ಯ ವಿಶೇಷ ಶ್ರಮ ತೆಗೆದುಕೊಳ್ಳಬೇಕಾಗಿರಲಿಲ್ಲ.

ವೈದ್ಯಾಲಯ ಕಟ್ಟಿಸಿ ನಡೆಸಿಕೊಂಡು ಬಂದುದರಿಂದ ನನಗೊಂದು ಬಗೆಯ ಆನಂದವಾಯಿತು. ರೋಗಿಗಳನ್ನು ಉಪಚರಿಸುವ ದಾದಿಯರನ್ನು ಕಂಡರೆ ಜನರಿಗೆ ಹೆಚ್ಚು ಅಲಕ್ಷ್ಯ. ದಾದಿಯರು ಅನೇಕವೇಳೆ ನನ್ನ ವೈದ್ಯಶಿಕ್ಷಣ ಕಾಲದಲ್ಲಿ ನಿಂದನೆಗೂ ಅಲಕ್ಷ್ಯಕ್ಕೂ ಕಾರಣರಾಗಿದ್ದುದನ್ನು ನೋಡಿದ್ದೆ. ಇಂತಹ ಬಡ ದಾದಿ ಸೇವಕರನ್ನು, ಉಪಚಾರಕರನ್ನು ನಿಂದಿಸುವುದು, ಅಲಕ್ಷ್ಯ ದಿಂದ ಕಾಣುವುದು ಒಳ್ಳೆತಲ್ಲವೆಂದು ತಿಳಿದುಕೊಂಡಿದ್ದೆ. ನಾನು ನಡೆಸಿಕೊಂಡು ಬರುವ ವೈದ್ಯಾಲಯದಲ್ಲಿ ದಾದಿಯರ ಕ್ಷೇಮಚಿಂತನೆಯಾಗಬೇಕೆಂದು ಹೆಚ್ಚು ಗಮನಕೊಟ್ಟೆ. ಉಚಿತರೀತಿಯಲ್ಲಿ ಅವರ ರಕ್ಷಣಾವ್ಯವಸ್ಥೆ ಮಾಡಿದೆ. ದಾದಿ ಯರ ತರಬೇತಿಗಾಗಿ ಶಿಕ್ಷಣಾಲಯವನ್ನು ಬೇರೆ ತೆಗೆದು, ಮೇಲ್ವಿಚಾರಣೆಗಾಗಿ ಒಬ್ಬಳನ್ನು ನಿಯಮಿಸಿದೆ. ತರಬೇತಿ ಪಡೆಯಲು ಬಂದ ಅಭ್ಯರ್ಥಿಗಳಾದ ಹೆಣ್ಣು ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳುವಂತೆ ಒತ್ತಾಯಪಡಿಸಿದೆ. ಕೆಲಸದಲ್ಲಾ ಗಲೀ ಇತರ ವ್ಯವಹಾರದಲ್ಲಾಗಲೀ ಅಭ್ಯರ್ಥಿಗಳು ತಪ್ಪಿನಡೆದಲ್ಲಿ, ನಯವಾಗಿ ಅವರಿಗೆ ತಿಳಿಯುವಂತೆ ಬೋಧಿಸಬೇಕಲ್ಲದೆ, ಇತರರೆದುರಿಗೆ ನಿಂದಿಸಬಾರದೆಂದು ಕಡ್ಡಾಯವಾಗಿ ತಿಳಿಸಿದೆ. ಅಭ್ಯರ್ಥಿಗಳು ಯಾವುದನ್ನಾದರೂ ಹೇಳುವುದಿದ್ದರೆ, ಅವರನ್ನು ನನ್ನ ಕಾರ್ಯಾಲಯಕ್ಕೆ ಬರಮಾಡಿಕೊಂಡು ವಿಚಾರವನ್ನು ತಿಳಿದು ಕೊಳ್ಳುತ್ತಿದ್ದೆ. ಯಾರಾದರೂ ಸರಿಯೆ ಯೋಗ್ಯರೀತಿಯಲ್ಲಿ ವರದಿಮಾಡಿ ಕೊಳ್ಳಬಹುದು ಎಂಬ ಸೂಚನೆ ಬೇರೆ ಕೊಟ್ಟಿದ್ದೆ. ಹೀಗೆ ತರಬೇತಾದ ದಾದಿಗಳು ಎಷ್ಟು ಕರುಣಾಳುಗಳು! ಎಷ್ಟು ದಯೆಯಿಂದಲೂ ವಿನಯದಿಂದಲೂ ಕಾಣು ತ್ತಾರೆ! ಎಂದು ರೋಗಿಗಳು ಎಷ್ಟೋಬಾರಿ ಹೇಳಿಕೊಂಡುದುದನ್ನು ಕೇಳಿ ನಾನು ಆನಂದಪಟ್ಟಿದ್ದೇನೆ. ನಾನು ತಿನ್ನುವುದನ್ನು ಅವರಿಗೆ ಕೊಟ್ಟು, ನಾನು ವಾಸಮಾಡುವ ಜಾಗದಷ್ಟೇ ಸೌಲಭ್ಯ ಕಲ್ಪಿಸಿಕೊಟ್ಟು, ಅವರು ಸಂತೋಷದಿಂದ ತಮ್ಮ ದಿನಚರಿಯ ಕೆಲಸವನ್ನು ಸುಗಮವಾಗಿ ನಡೆಸಿಕೊಂಡು ಹೋಗುವಷ್ಟು ಅನುಕೂಲಪಡಿಸಿಕೊಟ್ಟಿದ್ದೆ. ನಾನು ಎಷ್ಟು ಅನುಕೂಲಪಡಿಸಿಕೊಟ್ಟಿದ್ದೆನೋ ಅವಷ್ಟೂ ಅತ್ಯಲ್ಪವೇ ಎಂದು ನನ್ನ ಭಾವನೆ. ದಾದಿಗಳ ಪೈಕಿ ಈಗ ಕೆಲವರು ಅಜ್ಜಿಗಳಾಗಿದ್ದಾರೆ. ಅವರು ವೃದ್ಧೆಯರೇ ಆದರೂ ಪ್ರಾಮಾಣಿಕರೂ ನಿಷ್ಠೆ

ಯರೂ ಆಗಿದ್ದಾರೆ. ಇವರೇ ನನ್ನ ವೃತ್ತಿ ಪರೀಕ್ಷೆಯ ಕಾಲದಲ್ಲಿ ಜೀವದುಸಿರಾಗಿದ್ದರು ಎಂದು ಹೇಳುತ್ತೇನೆ.

ಈ ಪಳಗಿದ ಬಾಲೆಯರು ಮೂರು ವರ್ಷ ವೈದ್ಯಾಲಯದಲ್ಲಿ ತರಬೇತಿ ಪಡೆದು ನಂಬಲರ್ಹರಾದ ಹೆಂಗೆಳೆಯರೆನಿಸಿ ಮುಂದೆ ಉದ್ಯೋಗಕ್ಕೆ ಸೇರಿದುದನ್ನು ನೆನೆಸಿದರೆ ಉಂಟಾಗುವ ಆನಂದಕ್ಕೆ ಪಾರವೇ ಇರಲಿಲ್ಲ.

ಮೂವತ್ತು ವರ್ಷಕ್ಕೂ ಮೀರಿ ಖಾಸಗೀ ವೈದ್ಯಶಾಲೆಯನ್ನು ನಡೆಸಿಕೊಂಡುಬಂದೆ. ಅನುಭವಿಕರ ಮತ್ತು ತಜ್ಞರ ನೆರವು ನನಗೆ ದೊರೆಯಿತು. ಆದಾಯ ತೆರಿಗೆ ಇಲಾಖೆಯವರಿಗೆ ಉತ್ಪತ್ತಿ ವೆಚ್ಚದ ಬಗ್ಗೆ ವಿವರ ಕೊಡಲು ಸಾಧ್ಯವಿಲ್ಲ ಎಂದು ಕಂಡಕೂಡಲೇ ಈ ಹೊರೆಯನ್ನು ಇಳಿಸಿಕೊಳ್ಳಲು ಸಿದ್ಧನಾದೆ. ಕೆಲಸಮಾಡಿ, ಕೆಲಸಕ್ಕೆ ತಕ್ಕ ಪ್ರತಿಫಲ ದೊರೆಯಲಿ, ದೊರೆಯದಿರಲಿ, ಮೂಕರಂತೆ ದುಡಿಯುವ ಕೆಲಸಗಾರರಿದ್ದಾರೆ. ಹೀಗೆ ದುಡಿಯಲು ಮನಸ್ಸಿಲ್ಲದೆ ಬಿಡುಗಡೆ ಹೊಂದಲು ನಾನು ಸಿದ್ಧನಾದೆ. ವೈದ್ಯಾಲಯ ನಡೆಸಿಕೊಂಡು ಬರುವುದು ನನ್ನಿಂದಾಗದು ಎಂದು ಕಂಡುಕೊಂಡಾಗ, ಸೆಂಟ್ ಜೋಸೆಫ್ ಸಹೋದರಿಯರಿಗೆ (Sisters of St. Joseph) ಕೇವಲ ಅತ್ಯಲ್ಪ ಮೌಲ್ಯಕ್ಕೆ (ಒಂದು ಡಾಲರಿಗೆ) ಮಾರಿಬಿಟ್ಟೆ. ಡಾಲರ್ ಬೆಲೆ ಆಗ ೬೯ ಸೆಂಟುಗಳು. ಆ ಹಣ ಈಗಲೂ ನನ್ನಲ್ಲಿದೆ.

ಸಹೋದರಿಯರಿಗೆ ಸಾಲದ ಭಾರ ಹೊರಿಸದೆ, ನನ್ನ ವೈದ್ಯಾಲಯವನ್ನು ತುಂಬಿದ ಉಗ್ರಾಣದೊಂದಿಗೆ ಒಪ್ಪಿಸಿಬಿಟ್ಟೆ. ಹೀಗೆ ಒಪ್ಪಿಸಿ ಹೊರೆ ಇಳಿಸಿಕೊಂಡೆ ಎಂದು ಹೇಳಲು ಹೆಮ್ಮೆಪಡುತ್ತೇನೆ. ನಾನು ವೈದ್ಯಾಲಯವನ್ನು ಮಾರಬೇಕಾದ ಅಗತ್ಯವಿರಲಿಲ್ಲ. ಆರೋಗ್ಯಕರವಾದ ಮತ್ತು ರುಚಿಕರವಾದ ಹಾಲನ್ನು ಕೊಡುವ ಮೂಕ ಹಸುವಿನಂತೆ ಇರಲೊಪ್ಪಿಕೊಳ್ಳದೆ, ಆದಾಯ ತೆರಿಗೆ ಅಧಿಕಾರಿಗಳ ವಿಧಾಯಕ ಶಿಸ್ತಿಗೆ ಒಳಪಡಲಿಚ್ಛಿಸದೆ ವೈದ್ಯಾಲಯ ಬಿಟ್ಟುಕೊಟ್ಟೆ. ಹೀಗೆ ಒಪ್ಪಿಸಿ, ಒಬ್ಬನು ತನ್ನ ಜೀವಂತಕಾಲದಲ್ಲಿ ಸೂಕ್ಷ್ಮ ತಿಳಿದು ವರ್ತಿಸಬಹುದು ಎಂಬುದನ್ನು ತೋರಿಗೊಟ್ಟೆ. ಸೆಂಟ್ ಜೋಸೆಫ್ ಸಹೋದರಿಯರು ಎಂತಹ ಸೇವಾಕಾರ್ಯ ನಡೆಸುತ್ತಿದ್ದಾರೆ ಎಂದರೆ, ಈ ತರಹೆಯ ಸೇವೆಯನ್ನು ಯಾರೂ ಹಣವನ್ನು ಖರ್ಚುಮಾಡಿಯೂ ಪಡೆಯಲಾರರು ಎಂದು ತೋರಿಗೊಟ್ಟು ಶ್ರಮಿಸುತ್ತಿದ್ದಾರೆ. ಇವರ ಸೇವೆ,

ಮಾರ್ಗಾನ್ವೇಷಣೆ, ಬಂಗಾರದಂತಹದು. ಸೇವೆಯಲ್ಲಿ ಸ್ವಾಮಿತ್ವವಿದೆಯೆಂದು ತಿಳಿದುಕೊಂಡತಹ ಮಾನಿನಿಯರಿವರು. ಇದರಿಂದ ಇವರು ನನ್ನ ನಂಬಿಕೆಗೆ ಚೇತನವಿತ್ತಿದ್ದಾರೆಂದು ಹೇಳಬಲ್ಲೆ. ರೋಗಿಗಳಿಂದ ಪಡೆದ ದ್ರವ್ಯದಿಂದ ವೈದ್ಯಾಲಯ ಕಟ್ಟಿಸಿದೆ. ಇತರರು ಯಾರೂ ಒಂದು ಚಿಕ್ಕ ಕಾಸನ್ನೂ ನನಗೆ ಕೊಡಲಿಲ್ಲ. ಶ್ರಮಪಟ್ಟು ವೈದ್ಯಾಲಯ ಕಟ್ಟಿಸಿ ಅದರ ಹೆಚ್ಚಳ ಬೆಳೆಸಿದೆ. ಸೆಂಟ್ ಜೋಸೆಫ್ ಸಹೋದರಿ ವರ್ಗದವರು ಈ ಹೆಚ್ಚಳವನ್ನು ಮುಂದೆ ಪಾಲಿಸಿಕೊಂಡು ಬಂದರು.

ಖಾಸಗೀ ವೈದ್ಯಶಾಲೆಯದ ಆನಂದಪ್ರಕರಣ ಇಲ್ಲಿಗೆ ಮುಗಿಯಿತು. ವೈದ್ಯಾಲಯವನ್ನು ತೆರೆದು ಅದರಿಂದ ಪ್ರಯೋಜನ ಪಡೆದಂತಾಯಿತು. ಸಾರ್ವಜನಿಕರಿಗೆ ವೈದ್ಯಾಲಯಬೇಕು. ಈಗ ವೈದ್ಯಾಲಯದಿಂದೇನು ಪ್ರಯೋ ಜನ? ವೈದ್ಯಾಲಯ ಕಟ್ಟಿ ಹೇಗೆ ನಡೆಸಿಕೊಂಡು ಬರಬೇಕು ಎಂಬುದನ್ನು ಜನರು ತಿಳಿದುಕೊಂಡಿದ್ದಾರೆ. ಅವರ ಆರೋಗ್ಯ ಕೆಟ್ಟಾಗ, ಕೆಡಕು ಕಾಣಿಸಿ ಕೊಂಡಾಗ ಕೂಡಲೇ ಚೇತರಿಸಿಕೊಳ್ಳಲು ಭರವಸೆಯಿಂದ ಅಲ್ಲಿಗೆ ಹೋಗು ತ್ತಾರೆ.

## ೧೧

ಜೀವದ ದಃಖಾಂತವನ್ನು ವೈದ್ಯರು ಗುರಿತಿಸಿಟ್ಟುಕೊಳ್ಳುವುದಿಲ್ಲ. ಏಕೆಂ ದರೆ, ದುಃಖಕರವಾದ ವಿಷಯವನ್ನು ಕುರಿತು ಮಾತನಾಡುವುದು ಮತ್ತು ಬರೆ ದಿಟ್ಟುಕೊಳ್ಳುವುದು ಅಪ್ರಿಯ ಕೆಲಸವೆಂದು ಬಿಟ್ಟುಬಿಡುತ್ತಾರೆ. ಸತ್ಯವನ್ನು ಸಾರುವದಿನ ಬಂದೇಬರುವುದು. ಆದರೆ ಆ ಸುದಿನ ಇನ್ನು ಹತ್ತಿರವಾಗಿಲ್ಲ ಮಾತ್ರ. ನಾನು ಮತ್ತು ನನ್ನ ರೋಗಿಗಳನ್ನು ಕುರಿತು ಈವರೆಗೆ ರೂಪರೇಖೆ ಯನ್ನು ತೋರಿಸಿ ಪ್ರಸ್ತಾಪಿಸಿದ್ದೇನೆ.

ಆವೇಶಪೂರ್ಣನಾದವನು ಒಂದು ಬಗೆಯ ಮೂಲತತ್ವವನ್ನು ಹೊರ ಗೆಡಹುತ್ತಾನೆ. ಇದು ಮಾನವಸ್ವಭಾವ. ಮಾನವನು ತೋರುವ ಆವೇಶ ಭರದಲ್ಲಿ ಭೀತಿ, ದ್ವೇಷ, ಸಂಕಟ ಇವುಗಳ ಛಾಯೆಯಿರುತ್ತವೆ. ಪ್ರಕೃತಿಯ ಏರಿಳಿತದಲ್ಲಿ ಈ ಭಾವನೆಗಳಿಗೆ ಅವಕಾಶವಿದೆಯೆಂದು ತಿಳಿಯುತ್ತೇನೆ. ರೋಗಿ ತನ್ನ ಸಂಕಟವನ್ನು ಹೇಳಿಕೊಳ್ಳುವಾಗ ವೈದ್ಯ, ಶರೀರಲಕ್ಷಣ ಸ್ವಾಭಾವಿಕ

ವ್ಯತ್ಯಾಸ ಹೊಂದಿದೆಯೋ ಭಾವಾತಿರೇಕದಿಂದ ವ್ಯತ್ಯಾಸ ಹೊಂದಿದೆಯೋ ಎಂದು ತಿಳಿಯಲು ಪ್ರಯತ್ನಿಸುತ್ತಾನೆ.

ರೋಗಿ ತನ್ನ ಕಾಹಿಲೆಯ ಬಗ್ಗೆ ಬಹಳ ಹೆದರಿದ್ದಾನೆಯೇ ಎಂದು ವೈದ್ಯ ತಿಳಿಯಲು ಪ್ರಯತ್ನಿಸುತ್ತಾನೆ. ಅನೇಕವೇಳೆ ರೋಗಿಗಳು ತಮ್ಮ ಬೇನೆ, ನೋವಿನಿಂದ ಬಹಳ ಹೆದರುವುದುಂಟು. ಇದರಿಂದ ದೇಹಸ್ಥಿತಿಯೂ ಬದಲಾಯಿಸುವುದುಂಟು. ಈ ಬದಲಾವಣೆಗೆ ಹೆದರಬೇಕಾದುದೇ ನಿಜ. ವೈದ್ಯನನ್ನು ಕಂಡ ರೋಗಿ ಇದ್ದಕ್ಕಿದ್ದ ಹಾಗೆಯೇ "ನನ್ನ ಹೊಟ್ಟೆಯಲ್ಲಿ ವ್ರಣವಾಗಿದೆ" ಎಂದು ಹೇಳಿಕೊಳ್ಳುವುದುಂಟು. ಕಾನ್ಸಾಸ್ ನಗರದವನೊಬ್ಬ, "ವೈದ್ಯರೆ ? ನಾನು ಉದರ ಸಂಬಂಧವಾದ ನೋವಿನಿಂದ ಹಿಂಸೆಪಡುತ್ತಿದ್ದೇನೆ" ಎಂದು ಭಯದಿಂದ ಹೇಳಿಕೊಂಡಿದುದನ್ನು ಕೇಳಿರುವೆ. ಈ ಹೇಳಿಕೆ ತಲ್ಲಣಿಸುವಂತೆ ಮಾಡುವುದು ನಿಜ. ಇದೆಲ್ಲಾ ವಿಚಿತ್ರಾನುಭವವೇ ಸರಿ. ಆದರೂ ಇದರಲ್ಲಿ ಸತ್ಯವಡಗಿದೆ. ರೋಗಿಯೊಬ್ಬ ಕ್ಷಯವಿಕಾರದಿಂದ ಕಾಣಿಸಿಕೊಳ್ಳುತ್ತಾನೆ. ಅವನನ್ನು ಅಲಕ್ಷ್ಯದಿಂದ ನಾವು ಕಾಣಬಹುದು. ಈ ರೋಗದಿಂದ ಕೊನೆಗೆ ಪಾರಾಗಿ ಉಳಿದುಕೊಳ್ಳುವೆ ಎಂಮ ಅವನು ನಂಬಿಕೊಂಡಿರಬಹುದು. ಅದು ನಿಜವಾಗಿಯೂ ಕ್ಷಯರೋಗಕ್ಕೆ ಗುರಿಯಾದ ರೋಗಿಗಳಲ್ಲಿ ಅನೇಕರಿಗೆ ಈ ನಂಬಿಕೆಯಿರುವುದಿಲ್ಲ.

ಹೆದರಿಕೆ ಮತ್ತು ಕೋಪಲಕ್ಷಣವನ್ನು ಸುಲಭವಾಗಿ ಗುರಿತಿಸಬಹುದು. ಈ ಲಕ್ಷಣವನ್ನು ಸ್ಪಷ್ಟವಾಗಿ ಕಂಡುಕೊಳ್ಳಬಹುದು. ಈ ಎರಡು ಲಕ್ಷಣಗಳ ಗತಿ ಮತ್ತು ಉತ್ಕರ್ಷದ ಕಡೆಯ ಓಘವನ್ನು ತಿಳಿಯಬಹುದು. ಒಬ್ಬನ ದುಃಖಾನುಭವವನ್ನು ಕೇಳಿ ತಿಳಿಯುವುದಕ್ಕಾಗುವುದಿಲ್ಲ. ಮಾನವಸ್ವಭಾವವನ್ನು ಸುಲಭವಾಗಿ ಅರ್ಥಮಾಡಿಕೊಳ್ಳುವುದಕ್ಕಾಗುವುದಿಲ್ಲ. ದುಃಖಕ್ಕೆ ಸ್ಪಷ್ಟಾರ್ಥವಿಲ್ಲ. ದುಃಖವನ್ನು ಅನುಭವಿಸಿಯೇ ತೀರಬೇಕು. ಅತಿದುಃಖವನ್ನೂ ಅನುಭವಿಸಿಯೇ ತಿಳಿಯಬೇಕು. ಅತಿದುಃಖ ಸಮಯದಲ್ಲಿ ಕಂಬನಿಗೂ ಎಡೆಯಿರುವುದಿಲ್ಲ, ತಪ್ಪು ಹೊರುವಿಕೆಯೂ ಇಲ್ಲ.

ದುಃಖದ ಬಗೆ ಮತ್ತು ಬೇಗೆ ಇವು ವಯಸ್ಸಿಗೆ ತಕ್ಕಂತೆ ಹೆಚ್ಚೂ ಕಡಿಮೆಯಾಗುವುದು. ಜೊತೆಗಾರನ ದುಃಖ ಹೆಚ್ಚಿನದು, ಏಕೆಂದರೆ, ಬೆಳೆದ ಸಂಸಾರ ಬೇರೆಯಾಗಿ ಬದುಕಬೇಕಲ್ಲದೆ ಬೇರೆ ದಾರಿಯಿಲ್ಲ. ಗಂಡು ಹೆಣ್ಣಿ

ನೊಂದಿಗೆ ಬಾಳ್ವೆ ನಡೆಸಲೇಬೇಕು. ಆಗಲೂ ಗಂಡಸು ಬೇರೆಯಾಗಿ ಉಳಿದವನೇ ಆಗುವನು. ಅವನ ಮುಂದೆ ಅವನ ಮಕ್ಕಳು ಬೇರೆ. ಅವರಿಗೂ ಸಹಪಾಠಿಗಳಿರುತ್ತಾರೆ. ಮಕ್ಕಳು ದೊಡ್ಡವರಾಗಿ ಜೊತೆಗಾತಿಯೊಂದಿಗೆ ಬೇರೆ ಸಂಸಾರ ಹೂಡುತ್ತಾರೆ. ವಯಸ್ಸಾದವರು ಸಾಯುತ್ತಾರೆ. ಅವರ ಪೀಳಿಗೆಯವರು ಸಂಸಾರದ ಹೊರೆಯನ್ನು ಹೊರುತ್ತಾರೆ. ಇದು ಪ್ರಪಂಚದ ಜೀವಶಾಸ್ತ್ರದ ಮೂಲತತ್ವವಾಗಿದೆ.

ವೈದ್ಯನು ಈ ತರಹೆಯ ಸಮಸ್ಯೆಯನ್ನು ಎದುರಿಸಬೇಕಾಗುವುದು. ಅವನ ಸಮಸ್ಯೆ ಜಟಿಲ ಸಮಸ್ಯೆ. ರೋಗ ವಿವರವನ್ನು ತಿಳಿದು ಅವನು ಗುಣಪಡಿಸಬೇಕು, ಶಸ್ತ್ರಚಿಕಿತ್ಸೆಗಾಗಿ ಪಾಡು ಪಡಬೇಕು, ಸಹೋದ್ಯೋಗಿಯನ್ನು ಗೊತ್ತುಮಾಡಿಕೊಳ್ಳಬೇಕು. ಹೀಗೆ ಎದ್ದು ಮುಗ್ಗರಿಸಿ ಸಾಹಸಪಡಲೇಬೇಕು. ವೃದ್ಧನ ಜೀವ ಉಳಿಸುವುದಕ್ಕಾಗಿ ಪ್ರಾಣಾಂತ ಶಸ್ತ್ರಚಿಕಿತ್ಸೆಯನ್ನು ಮಾಡಬೇಕಾಗುವುದು. ವೃದ್ಧನನ್ನು ಶಸ್ತ್ರಚಿಕಿತ್ಸೆಗೆ ಒತ್ತಾಯಪಡಿಸುವಹಾಗಿಲ್ಲ, ಮೃತ್ಯಭಯಕ್ಕೆ ಇದನ್ನು ಮಾಡುವಹಾಗಿಲ್ಲ, ಅಮೂಲ್ಯ ತತ್ವವನ್ನು ಎದುರಿಸಿ ವೈದ್ಯ ಕೆಲಸಮಾಡುವ ಹಾಗಿಲ್ಲ.

ರೋಗಿಯ ದುಃಖವನ್ನು ಅವನು ನಿದ್ರಿಸದೆ ಉಳಿದಿದ್ದಾಗ ಕಾಣಬಹುದು. ರೋಗಿಗೆ ದೈಹಿಕ ಬಾಧೆಯೇನೂ ಇರುವುದಿಲ್ಲ. ಆದರೂ ಅವನಿಗೆ ನಿದ್ರೆ ಬಾರದು ಎಂದರೆ, ಅವನಲ್ಲಿ ದುಃಖಛಾಯೆ ಅಡಗಿದೆಯೆಂದು ತಿಳಿಯಬೇಕು. ವೈದ್ಯನಿಗೆ ರೋಗಿಯ ನಿಜಸ್ಥಿತಿ ತಿಳಿಯದೆ ಹೋಗಬಹುದು. ಆದರೂ ಅವನು ಪರಹಿತನಿಷ್ಠೆಯನ್ನು ಪಾಲಿಸಬೇಕಾದುದು ಧರ್ಮ. ರೋಗಿಯ ಯಾವ ಬಾಧೆಯ ನೋವಿಗೂ ನಾನು ಕನಿಕರಪಡುವುದಿಲ್ಲ. ಅವನಿಗೆ ನಿದ್ರೆ ಬಾರದು ಎಂದಾಗ ಮಾತ್ರ ಮರುಗುತ್ತೇವೆ. ರೋಗಿ ಚೆನ್ನಾಗಿ ರಾತ್ರಿ ನಿದ್ರಿಸಿದ ಎಂದರೆ ವೈದ್ಯ ನಿಜವಾಗಿಯೂ ಅವನನ್ನು ಉದ್ಧಾರಮಾಡಿದ ಎಂದರ್ಥ. ಇದರಿಂದ ಮಾನವನ ಉದ್ಧಾರವಾಯಿತು ಎಂದು ತಿಳಿಯಬಹುದು. ಉದಾಹರಣೆಗೆ ನಡೆದ ಒಂದು ಸಂಗತಿಯನ್ನು ತಿಳಿಸುತ್ತೇನೆ–ತಾಯಿಯೊಬ್ಬಳು ಹಿಂದೆ ನನ್ನಿಂದ ಚಿಕಿತ್ಸೆ ಪಡೆಯುತ್ತಿದ್ದಳು. ಮಗ ಯುದ್ಧಕ್ಕೆ ಹೋಗುತ್ತಾನೆ, ಯುದ್ಧವನ್ನು ಕೊನೆಗಾಣಿಸುವುದಕ್ಕೆ ಹೋಗುತ್ತಾನೆ ಎಂದು ಚಿಂತಿಸುತ್ತಾ, ಇದ್ದಕ್ಕಿದ್ದ ಹಾಗೆಯೇ ನಿದ್ರೆ ಕಾಣದೆ ಸಂಕಟಪಡಲಾರಂಭಿಸಿದಳು. ಕೆಲವು ದಿನಗಳಲ್ಲಿ

ಆಕೆಯ ಮಗ ಫ್ರಾನ್ಸಿನಲ್ಲಿ ಸತ್ತುಹೋದ. ಈ ವಾರ್ತೆಯನ್ನು ಮಾತ್ರ ಅವಳು ತಿಳಿಸಲಿಲ್ಲ. ಈಕೆಯ ಎಂದಿನ ಅನಿದ್ರೈತೆ ಮುಂದುವರಿಯಿತು. ಅನೇಕ ವರ್ಷಗಳ ಮೇಲೆ ಮಹತ್ತರವಾದ ಕಾಹಿಲೆಗೆ ಈಕೆ ಗುರಿಯಾಗಿದ್ದಳೆಂದು ನಾನು ಹೇಳಲೇ ಬೇಕಾಯಿತು. ಆಗ ಆಕೆಯ ಕಣ್ಣುಗಳಲ್ಲಿ ವಿಲಕ್ಷಣ ಆನಂದವನ್ನು ಕಂಡೆ. ಯಾವ ಮಾತನ್ನೂ ನಾವು ಇಬ್ಬರೂ ಆಡಲಿಲ್ಲ. ಈ ನನ್ನ ಹೇಳಿಕೆಯ ಪರಿಣಾಮವೇನು ಎಂದು ನನಗೆ ಗೊತ್ತಿತ್ತು. ಈಕೆಯ ಪಕೃತಿಯನ್ನು ನೋಡಿಯೇ ನೇರವಾಗಿ ನಾನು ಈ ಅಂಶವನ್ನು ಹೇಳುತ್ತಿರುವುದು. ಇಲ್ಲದಿದ್ದಲ್ಲಿ ಸ್ಪಷ್ಟವಾಗಿ ಹೇಳುತ್ತಿರಲಿಲ್ಲ.

ಇಂತಹ ರೋಗಿಗಳನ್ನು ನೋಡುವಾಗ ವೈದ್ಯ, ವಿಲಕ್ಷಣ ವ್ಯಕ್ತಿಗಳೊಂದಿಗೆ ವ್ಯವಹಾರ ಮಾಡುತ್ತಿದ್ದೇನೆ ಎಂದು ತಿಳಿಯಬೇಕು. ವೈದ್ಯ ಮತ್ತು ಅವನ ರೋಗಿ, ವೈದ್ಯರು ಮತ್ತು ಅವರ ರೋಗಿಗಳು ಈ ಬಗೆಯಿಂದ ಬೇರೆಯಾದವರು. ವೈದ್ಯ ತನ್ನ ರೋಗಿಯನ್ನು ಪರೀಕ್ಷಿಸುವಾಗ ಯಾವ ಶಾಸ್ತ್ರಾಧಾರವನ್ನೂ ಲೆಕ್ಕಿಸದೆ ನೋಡುತ್ತಾನೆ. ಅದೇ ವೈದ್ಯರ ಗುಂಪು ರೋಗಿಗಳನ್ನು ನೋಡುವಾಗ ಲಕ್ಷಣಭಾಗ ಮತ್ತು ಚಿಕಿತ್ಸಾಭಾಗವನ್ನು ಅನುಸರಿಸುತ್ತಾರೆ. ವೈದ್ಯ ಮತ್ತು ರೋಗಿ ಈ ಸಮಯದಲ್ಲಿ ಅರ್ಥಪೂರ್ಣವಾಗಿ ಸಂಬಂಧಿಗಳೆ. ಅನೇಕ ಸಂದರ್ಭಗಳಲ್ಲಿ ಈ ಸಂಬಂಧ ಮೀರಿರುವುದು. ಆಗ ವೈದ್ಯ ಎಚ್ಚರಿಕೆಯಿಂದ ರೋಗಿಯ ಸಹಾಯಕನಾಗುತ್ತಾನೆ.

ಸಕಾರಣವಾಗಿ ಸಂದರ್ಭಗಳನ್ನು ತಿಳಿಸಿ, ಈ ಮಾರ್ಮಿಕ ಸಮಸ್ಯೆಯನ್ನು ವಿವರಿಸುತ್ತೇನೆ. ಸುಖಾಂತವೂ ದುಃಖಾಂತವೂ ಬಹು ಕಟುವೆ. ಮಾಡಲು ಕೆಲಸವೇ ಇಲ್ಲದ ಹೆಂಗಸರ ತೊಂದರೆಗಳೂ ವಿಚಿತ್ರವೆ. ಅವರ ಸಂಸರ್ಗಕ್ಕೆ ತಕ್ಕಂತೆ ತಮ್ಮ ನೋವು ಬೇನೆಗಳನ್ನು ಹೇಳಿಕೊಳ್ಳುತ್ತಾರೆ. ಸಾಹಿತ್ಯ ಸಂಸ್ಥೆಯ ವರ್ಗದವರು ತಲೆನೋವು ಎಂದು ಸಾಧಾರಣವಾಗಿ ಹೇಳಿಕೊಳ್ಳುವುದುಂಟು. ಚದುರಂಗ ಅಥವಾ "ಬ್ರಿಡ್ಜ್" ಆಡುವವರು ತಮಗೆ ಅಜೀರ್ಣವಾಗಿದೆಯೆಂದು ಹೇಳಿಕೊಳ್ಳುವುದುಂಟು. ಈ ಬಗೆಯವರಿಗೆ ಮರುಕ ತೋರಿ ಪ್ರಯೋಜನವಿಲ್ಲ. ಏಕೆಂದರೆ ಈ ದೋಷಕ್ಕೆ ಅವರು ಆಗಾಗಲೇ ಚಿಕಿತ್ಸೆ ಪಡೆದಿರುತ್ತಾರೆ. ಗೊತ್ತುಹಚ್ಚುವ ದೃಷ್ಟಿಯುಳ್ಳ ವೈದ್ಯ ಇಂತಹವರ ಮೇಲೆ ತನ್ನ ಸಾಮರ್ಥ್ಯವನ್ನು ತೋರಬೇಕು. ರೋಗಿ ಹೇಳುವುದೇನು ಎಂಬುದನ್ನು

ಮೊದಲು ಅವನು ತಿಳಿದಿದ್ದಾನೆಯೇ ಎಂದು ಗ್ರಹಿಸಬೇಕು. ರೋಗಿಗೆ ತನ್ನ ಹೇಳಿಕೆಯ ಅರ್ಥ ಆಗದಿದ್ದಲ್ಲಿ ಅವನಿಗೆ ಪರಿಹಾರಮಾರ್ಗ ಸೂಚಿಸುವುದು ಸುಲಭವಲ್ಲ. ವೈದ್ಯ, ರೋಗಿಯನ್ನು ದ್ವೇಷಿಸಿ, ಅವನನ್ನು ಅವನೇ ತಿಳಿಯು ವಂತೆ ಪರಿವರ್ತಿಸಿದಲ್ಲಿ, ಅದನ್ನೇ ಮನೆಯ ಇತರ ಜನರು ವೈದ್ಯ ನೀಡಿದ ಸಹಾಯವೆಂದು ಮೆಚ್ಚಿಗೊಳ್ಳುವರು.

ಒಮ್ಮೆ ನಲವತ್ತು ವರ್ಷ ವಯಸ್ಸು ಮೀರಿದ ಮಕ್ಕಳಿಲ್ಲದ ಹೆಂಗ ಸೊಬ್ಬಳು, ವೈದ್ಯ ಪುಸ್ತಕದಲ್ಲಿರುವ ಎಲ್ಲಾ ರೋಗಗಳೂ ತನ್ನಲ್ಲಿವೆಯೆಂದು ಹೇಳಿಕೊಂಡಳಲ್ಲದೆ, ತಾನು ಹೆಚ್ಚು ಉದರಬೇನೆಗೆ ಈಡಾಗಿದ್ದೇನೆ ಎಂದಳು. ಈ ಹೆಂಗಸು ಒಂದು ಸಂಸ್ಥೆಗೆ ಮುಖ್ಯಸ್ಥಳಾಗಿದ್ದಳು. "ನಿಮ್ಮ ಎಲ್ಲಾ ಬೇನೆಗೂ ಅಶಕ್ತತೆ ಮತ್ತು ಮನೋದಾರ್ಢ್ಯವಿಲ್ಲದಿರುವಿಕೆಯೇ ಕಾರಣ"ವೆಂದು ನಾನು ಹೇಳಿದೆ. ಅಲ್ಲದೆ, "ನೀವು ಅನುಭವಿಸುತ್ತಿರುವ ರೋಗ, ನಿಜವಾದ ರೋಗ ವಲ್ಲ; ಮನೋದಾರ್ಢ್ಯ ಬೆಳೆಸಿಕೊಂಡಷ್ಟೂ ಉತ್ತಮ. ಈ ರೋಗಕ್ಕೆಲ್ಲಾ ಇದೇ ಮದ್ದು. ಅಶಕ್ತರು ಮತ್ತು ಬಲಹೀನರು ಲೋಕದಲ್ಲಿ ಸಾಧಿಸಬೇಕಾ ದುದನ್ನೆಲ್ಲಾ ಸಾಧಿಸಿದ್ದಾರೆ" ಎಂದು ಹೇಳಿದೆ. ನನ್ನ ಈ ಹೇಳಿಕೆಯನ್ನು ಕೇಳಿ ರೇಗುತ್ತಾ ಆಕೆ, "ನಾನೇಕೆ ಇತರರಂತೆ ಆರೋಗ್ಯದಿಂದಿರಬಾರದು ? " ಎಂದು ಕೇಳಿದಳು. ಇದಕ್ಕೆ ನಾನು, "ಬರೀ ಒಂದು T ಅಕ್ಷರವನ್ನು ತಿದ್ದಿ ಬರೆದು, ಮುಗಿಸಿದೆ ಎಂದು ಹೇಳಿದರೆ ಸತ್ಯವಾದೀತೆ ? " ಎಂದು ಕೇಳಿದೆ. ನಾನು ಕೊಟ್ಟ ವಿವರಣೆಯನ್ನು ಕೇಳಿ ಅವಳು ಚಕಿತಳಾಗಿ ಮಾರ್ಪಾಡು ಹೊಂದಿದಳು. ತನ್ನನ್ನು ತಾನೇ ತಿದ್ದಿಕೊಂಡಳು. ನನ್ನ ಪ್ರಶ್ನೆಗೆ ಆಕೆ ಕೋಪಗೊಂಡಳು ನಿಜ. ಆದರೆ ಆ ಹೆಂಗಸಿನ ಪತಿ ನನ್ನ ಉತ್ಸಾಹೀ ಗೆಳೆಯ ನಾಗಿದ್ದ.

ಈ ತರಹೆಯ ಉತ್ಪ್ರೇಕ್ಷೆ ತರಹೆಯ ಕಾಹಿಲೆಗಳನ್ನು ಪ್ರಾಯೋಗಿಕ ರೀತಿ ಯಲ್ಲಿ ಪರೀಕ್ಷಿಸಲಾಗದು. ಪರೀಕ್ಷೆಯಿಂದ ಉತ್ತಮ ಪರಿಣಾಮ ಫಲಿತಾಂಶ ದೊರೆಯುವುದೂ ಇಲ್ಲ. ಈ ಆಂತರಿಕ ಮಾನಸಿಕ ಬಾಧೆಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಪರಿಹಾರ ಕಂಡುಕೊಳ್ಳಬೇಕು. ಪ್ರಯೋಗ ಪರೀಕ್ಷೆಯಿಂದ ಏನೂ ತಿಳಿ ಯುವಹಾಗಿಲ್ಲ. ಪ್ರಾಯೋಗಿಕ ಶಾಲೆಯಲ್ಲಿ ರೋಗಲಕ್ಷಣವನ್ನು, ಅಂಗಾಂಗ ಬೇಧವನ್ನು ಕಂಡು, ರೋಗ ಯಾವ ದೋಷದಿಂದ ಕಾಣಬರುತ್ತಿದೆಯೆಂದು

ಕಂಡುಕೊಳ್ಳುತ್ತೇವೆ. ಈ ದೋಷ ಪರೀಕ್ಷೆಯು ರೋಗಿಗೆ ತಿಳಿಯಬಾರದು. ನಾನು ನನ್ನ ವೈದ್ಯಕೀಯ ಚಿಕಿತ್ಸಾಕಾಲದಲ್ಲಿ ರೋಗಿಗಳು ಹೇಳಿಕೊಳ್ಳುವಂತಹ ಬೇನೆ ಬೇಸರವನ್ನು ಕೂಲಂಕಷವಾಗಿ ತಿಳಿದು, ನಿಜವಾಗಿ ಅವರ ದೋಷಕ್ಕೆ ಕಾರಣ ವೇನೆಂದು ತಿಳಿದುಕೊಳ್ಳುವಷ್ಟು ಸಹನೆಯಿಂದಿರಲು ಪ್ರಯತ್ನಿಸಲಿಲ್ಲವಲ್ಲ ಎಂದೀಗ ಮರುಗುತ್ತೇನೆ.

ಪ್ರತಿಸಾರಿಯೂ ರೋಗಿಗಳನ್ನು ನೋಡಿ ತೀರ ಹತ್ತಿರದ ಪರೀಕ್ಷೆ ಮಾಡು ವುದಕ್ಕಾಗುವುದಿಲ್ಲ. ಹೊಟ್ಟೆಯಲ್ಲಿ ಹುಣ್ಣಾಗಿದೆ ಎಂದು ಹೇಳಿಕೊಂಡ ರೋಗಿ ಯನ್ನು ಒಮ್ಮೆ ಪರೀಕ್ಷಿಸಿದೆ. ವ್ರಣಬಾಧೆಗಳಿಗೊಳಗಾಗಿದ್ದೀಯೆ ಎಂದು ಅವನಿಗೆ ತಿಳಿಸಿದೆ. ಈ ಉಗ್ರ ಬೇನೆಗೆ ಕಾರಣನಾಗಿದ್ದಾನೆಂದು ತಿಳಿದವನ ಮುಖ ಬಣ್ಣ, ಚಿಂತೆಯಿಂದ ಕೊರಗುತ್ತಿರುವಂತೆ ಕಂಡಿತು. ಈ ರೋಗಿಯನ್ನು ಬೇರೆ ವೈದ್ಯಾಲಯಕ್ಕೆ ಕಳುಹಿಸಿಕೊಟ್ಟೆ. ಅಲ್ಲಿ ಹೇಗೆ ಇವನು ಸುಧಾರಿಸಿಕೊಳ್ಳು ತ್ತಿದ್ದಾನೆ ಎಂದು ತಿಳಿಯಲು ಹೋದೆ. ನಾನು ಚಿಕಿತ್ಸೆ ಮಾಡಲು ಒಪ್ಪ ದಿದ್ದಾಗ, ಅದೇ ರೋಗಿಗೆ ಬೇರೊಬ್ಬ ವೈದ್ಯ ಒಪ್ಪಿ ಚಿಕಿತ್ಸೆಮಾಡುವುದಿಲ್ಲವೆ ? ಮುಂದಿನ ದಿನ, ಈ ರೋಗಿಯ ಮಗ ನಗರದಿಂದ ಬಂದ. ತಂದೆಗೆ ಶಸ್ತ್ರಕ್ರಿಯೆ ನಡೆಸುತ್ತಾರೆ, ಹತ್ತಿರದಲ್ಲಿ ನಾನಿರಬೇಕು ಎಂದು ಉದ್ದೇಶಿಸಿ ಅವನು ಬಂದುದು. "ನಿಜವೇನು ಹೇಳು ? ನಿನ್ನ ತಂದೆಗೆ ಏನಾಗಿದೆ ? " ಎಂದು ಕೇಳಿದಾಗ, "ತಂದೆಗೆ ವ್ರಣಬಾಧೆಯಲ್ಲ ಖಂಡಿತ. ನನ್ನ ತಾಯಿ ಸತ್ತು ಮೂರು ತಿಂಗ ಳಾಯಿತು. ಅಂದಿನಿಂದ ತಂದೆ ಆಹಾರ ಸ್ವೀಕರಿಸುತ್ತಿಲ್ಲ" ಎಂದ. ರೋಗಿಯ ಮಗನೊಂದಿಗೆ ಶಸ್ತ್ರಕ್ರಿಯಾಗಾರಕ್ಕೆ ಬಂದೆ. ಅಲ್ಲಿ ರೋಗಿಯನ್ನು ಕಂಡು "ನಿನಗೆ ಶಸ್ತ್ರಕ್ರಿಯೆ ಆಗಬೇಕಾದುದಿಲ್ಲ" ಎಂದು ಹೇಳಿ ಮಗನನ್ನು ಉದ್ದೇ ಶಿಸಿ, "ನೀನು ನಿನ್ನ ತಂದೆಯನ್ನು ಹಾರ್ವೆ ಮನೆಗೆ ಕರೆದುಕೊಂಡುಹೋಗು, ಅಲ್ಲಿ ಅವರಿಗೆ ಆಹಾರ ಸಿಗುವುದು" ಎಂದು ಹೇಳಿ ಮುಗಿಸಿದೆ. ಮುಂದೇ ನಾಯಿತೋ ನನಗೆ ತಿಳಿಯದು. ಮುಂದಿನದಿನ ತಂದೆಮಕ್ಕಳು ನನ್ನನ್ನು ನೋಡಲು ಬಂದರು. ಏಕೆ ಬಂದರೋ ತಿಳಿಯದು. ತಿಂದು ಕೆರಳಿದ ವ್ಯಾಘ್ರ ನಂತೆ ಆ ಮನುಷ್ಯ ನನ್ನನ್ನು ನೋಡಲು ಬಂದಿದ್ದ. ಮಗನು ತನ್ನ ನಿಜಸ್ಥಿತಿ ಯನ್ನು ಹೇಳಿಬಿಟ್ಟನೋ ಏನೋ ಎಂಬ ಕಳವಳದಿಂದ ಅವನು ಕೂಡಿದ್ದ. "ನೀನು ಆಹಾರ ಸ್ವೀಕರಿಸಿದೆಯ ? " ಎಂದು ನಾನವನನ್ನು ಪ್ರಶ್ನಿಸಲಿಲ್ಲ.

ಹಾಗೆ ಕೇಳಿ ನಾನು ತಿಳಿಯಬೇಕಾಗಿರಲಿಲ್ಲ. ಈ ಮನುಷ್ಯ ಮುಂದೆ ಮೂರು ವರ್ಷ ಬದುಕಿದ್ದ. ಆಹಾರವನ್ನು ಸ್ವೀಕರಿಸಿದಂದಿನಿಂದ ಅವನು ಕಳೆದು ಕೊಂಡಿದ್ದ ದೇಹತೂಕ ಸರಿತೂಗತೊಡಗಿತು. ಮೂರು ವರ್ಷಗಳ ನಂತರ ಅವನು ವೈದ್ಯಾಲಯವೊಂದರಲ್ಲಿ ಸತ್ತುಹೋದ.

ಎಲ್ಲಾ ಬಗೆಯ ರೋಗವಿವರಣೆ ದುಃಖಾಂತವಾಗಿರುವುದಿಲ್ಲ. ವಿನೋದ ಕರವಾಗಿಯೂ ಇರುವುದುಂಟು. ಒಬ್ಬನು ನೇರವಾಗಿ ನನ್ನಲ್ಲಿ ಹೇಳಿಕೊಂಡ ವಿವರಣೆಯನ್ನು ಕೇಳಿ—ಒಬ್ಬ ರೈಲ್ವೆ ಯಂತ್ರ ಚಾಲಕನು ನೇರವಾಗಿ ನನ್ನಲ್ಲಿಗೆ ಬಂದು, ತನ್ನ ಹೆಸರನ್ನು ಸಹಾ ತಿಳಿಸದೆ "ನಾನು ನಗರಕ್ಕೆ ಹೋಗಿದ್ದೆ. ನನ್ನ ಹೊಟ್ಟೆಯಲ್ಲಿ ವ್ರಣವಿದೆಯೆಂದು ಶಸ್ತ್ರವೈದ್ಯನೊಬ್ಬ ನನ್ನನ್ನು ಪ್ರಧಾನ ವೈದ್ಯನ ಬಳಿಗೆ ಕಳುಹಿಸಿದ. ಆಗ ಬಿರುಗಾಳಿ ಬಿರುಸಿನಿಂದ ಬೀಸುತ್ತಿತ್ತು. ನನಗೆ ಪ್ರಜ್ಞೆಯೇ ಇರಲಿಲ್ಲ. ನನ್ನ ಸಹೋದ್ಯೋಗಿಯ ಸಹಾಯದಿಂದ ವೈದ್ಯಶಾಲೆ ಯಲ್ಲಿ ನನ್ನ ಪ್ರಕೃತಿ ಪರೀಕ್ಷೆ ಮಾಡಿದರು. ನನಗಾಗ ಹಸಿವೇ ಆಗುತ್ತಿರಲಿಲ್ಲ. ನನ್ನನ್ನು ನೋಡಲು ಗುಂಪು ಕಟ್ಟಿಕೊಂಡ ವೈದ್ಯರು ಹೊಟ್ಟೆಯಲ್ಲಿ ವ್ರಣ ವಿದೆಯೆಂದು ಕೆಲವರೂ, ಇಲ್ಲ ಎಂದು ಮತ್ತೆ ಕೆಲವರೂ ವಾದವಿವಾದ ಮಾಡಲು ಹತ್ತಿದರು. ಮೂರನೆಯ ವೈದ್ಯತಂಡ ಹೊಟ್ಟೆಯನ್ನು ಬಗೆದು ತಿಳಿಯ ಬೇಕೆಂದು [illegible]ವರು. ಅವರ ಗದ್ದಲ ತಪ್ಪಿಸಿಕೊಂಡು ನಾನಿಲ್ಲಿಗೆ ಬಂದಿದ್ದೇನೆ" ಎಂದು [illegible]ಕೊಂಡ. ಮುಂದುವರಿಸುತ್ತಾ "ನನಗೇನಾಗಿದೆ ಎಂಬುದು ನನಗೇ ತಿಳಿಯದ ವಿಷಯವಾಗಿದೆ. ಧೂಳುಗಾಳಿ ಬೀಸುತ್ತಿದ್ದಾಗ ನಾನು ವೈದ್ಯರಿ[illegible] ವಿವರಿಸುತ್ತಿದ್ದೆ. ಬಹುಶಃ ನಾನು ಹೇಳುತ್ತಿದ್ದುದು ಅವರಿಗೆ ಕೇಳಿಸ ಲಿಲ್ಲವೆಂದು ಕಾಣುವುದು" ಎಂದು ಮುಗಿಸಿದ. ಇಷ್ಟು ಹೇಳಿ ಮುಗಿಸಿದ ಯಂತ್ರಜ್ಞ ತುಂಬಾ ನಕ್ಕುಬಿಟ್ಟ. ಮೂರು ವಾರಗಳನಂತರ ಪುನಃ ಅವನು ಎಂದಿನಂತೆ ಚಾಕರಿಗೆ ಹೋದ.

ಅಂತರವಯವಗಳ ಸುವ್ಯವಸ್ಥೆಯು ತಪ್ಪಿ ವ್ಯತ್ಯಾಸಗೊಂಡಾಗ (ಮನೋರೋಗಕ್ಕೆ ಗುರಿಯಾದಾಗ) ರೋಗ ಚಾರಿತ್ರ್ಯವನ್ನು ವೈದ್ಯರೊಂದಿಗೆ ಹೇಳಿಕೊಳ್ಳುತ್ತಾರೆ. ವ್ಯತ್ಯಾಸವೇನು? ಕಾರಣವೇನು? ಎಂದು ವೈದ್ಯನಿಗೆ ತಿಳಿಯದೆ ಹೋಗುವುದು. ಮಗುವನ್ನು ಕಳಕೊಂಡಾಕೆ, ಸತ್ತ ಮಗುವನ್ನು ನೆನೆದು ಹಂಬಲಿಸುತ್ತಾ ಅತಿದುಃಖಕ್ಕೆ ಈಡಾಗಿರುತ್ತಾಳೆ. ಈ

ಅತಿ ಸಂಬಂಧ ಪರಿಹಾರಕ್ಕೆ ವೈದ್ಯಗ್ರಂಥದಲ್ಲಿ ಏನೂ ಸೂಚಿಸಿಲ್ಲ. ಈ ತರ ಹೆಯ ಸಮಸ್ಯೆಯನ್ನು ಎದುರಿಸುವುದಕ್ಕಾಗುವುದಿಲ್ಲ. ಶಸ್ತ್ರವೈದ್ಯ ಇಂತಹ ಅತಿ ದುಃಖಕ್ಕೆ ಯಾವ ಚಿಕಿತ್ಸೆ ಮಾಡಿಯಾನು ? ಈ ಲಕ್ಷಣ ವಿಕಾರಗಳಿಗೆ ಮದ್ದಿಲ್ಲ. ಇದಕ್ಕೆ ಶಸ್ತ್ರಚಿಕಿತ್ಸೆ ತಕ್ಕುದಲ್ಲ.

ಗ್ರಾಮಾಂತರ ವೈದ್ಯ ಹೇಗೆ ಜನಸೇವೆ ಮಾಡಿದ್ದಾನೆಂದರೆ ವಯಸ್ಸು ಮೀರಿದ ವೃದ್ಧರ ಕಾಹಿಲೆಗಳಿಗೆ ಪರಿಹಾರ ಸೂಚಿಸಿ ಸಹಾಯ ಮಾಡಿದ್ದಾನೆ. ವೈದ್ಯರಿಗೆ ಬೇಕಾದುದು ಅನುಕೂಲ ಮಾತ್ರ. ಒಬ್ಬನಿಗೆ ಕೆಟ್ಟಚಟ ಅಂಟಿ ಕೊಂಡಿರಬಹುದು. ಅಂಟಿಕೊಂಡಿರಲಿ ಚಿಂತೆಯಿಲ್ಲ. ವೃತ್ತ ಪತ್ರಿಕೆಯವರು ದೀರ್ಘಾಯುಷ್ಯವನ್ನು ಕುರಿತು ಚುಚ್ಚುಮಾತಿನಿಂದ ವರ್ಣಿಸಬಹುದು. ಒಬ್ಬ ನನ್ನು ನಿನ್ನ ದೀರ್ಘಾಯುಷ್ಯಕ್ಕೆ ಕಾರಣವೇನು ಎಂದು ಕೇಳಿದಾಗ, "ನಾನು ಚಿಕ್ಕಂದಿನಿಂದ ಬಿಡದೆ ಹೊಗೆಸೊಪ್ಪನ್ನು ಸೇದುತ್ತಿದ್ದೇನೆ. ಈ ಸೇವನೆಯೇ ಇದಕ್ಕೆ ಕಾರಣ" ಎಂದ. ಇನ್ನೊಬ್ಬ ಇನ್ನೊಂದು ಕಾರಣವನ್ನು ಹೇಳಿಕೊಂಡ. ಇದೆಲ್ಲಾ ನಿಜವಾಗಿ ದೀರ್ಘಾಯುಷ್ಯಕ್ಕೆ ಕಾರಣವೇನು ?

ನಿದ್ರೆಬಾರದು ಎಂದು ಹೇಳಿಕೊಳ್ಳುತ್ತಾ ನನ್ನ ಹಳೆಯ ಸ್ನೇಹಿತನೊಬ್ಬ ನನ್ನ ಬಳಿಗೆ ಬಂದ. ಇವನ ಶರೀರವನ್ನು ಪರೀಕ್ಷಿಸಿದ ವೈದ್ಯ, "ಶರೀರದಲ್ಲಿ ಏನೋ ವ್ಯತ್ಯಾಸವಿದೆ" ಎಂದು ಹೇಳುತ್ತಾ ಮುಗಿಸಿದನೇ ವಿನಾ ನಿದ್ರೆ ಬರು ವಂತಹ ಚಿಕಿತ್ಸೆ ಅಥವಾ ಉಪಾಯ ಯಾವುದನ್ನೂ ಸೂಚಿಸಲಿಲ್ಲ. ವೈದ್ಯ ತಕ್ಕ ಔಷಧಿ ಕೊಡಲಿಲ್ಲವೆಂದು ಕೆರಳಿದ ಸ್ನೇಹಿತ ವೈದ್ಯಶಾಲೆ ಬಿಟ್ಟುಹೋದ. ಹೀಗಾಗಿ ನಲವತ್ತು ವರ್ಷದ ಗೆಳೆತನ ಮುರಿದುಬಿತ್ತು. ಈ ತಪ್ಪು ನನ್ನದೇ ಎಂದು ತಿಳಿದು ವ್ಯಸನಪಟ್ಟೆ. ಈ ಸ್ನೇಹಿತ ಪುನಃ ನನ್ನ ಬಳಿಗೆ ಬಂದು, ನಾನವನ ವಿಚಾರವನ್ನು ಚೆನ್ನಾಗಿ ತಿಳಿಯುವಂತೆ ಹೇಳಿದ. ಶಾಸ್ತ್ರವಿಜ್ಞಾನ ಇವಕ್ಕೇನು ಹೇಳುವುದು ಎಂದವನಿಗೆ ಸೂಚಿಸಿದೆ. ಈ ಸ್ನೇಹಿತನಿಗೆ ಸಮಂ ಜಸವಾಗಿ ಹೇಳುವುದಕ್ಕೆ ಬೇರೆ ನನಗೇನೂ ತೋರಲಿಲ್ಲ. ಪರಿಹರಿಸಬಹು ದಾದ ಕಾಹಿಲೆಗಳಿಗೆ ನಾನು ಹೆಚ್ಚು ಗಮನಕೊಡುತ್ತಿದ್ದೆನಾದಕಾರಣ, ನನಗೆ ಬೇರೆ ವ್ಯವದಾನಕ್ಕೆ ಬಿಡುವಿರಲಿಲ್ಲ.

ಇನ್ನೊಂದು ಬಗೆಯಲ್ಲಿ ವೈದ್ಯ, ಜನರಿಗೆ ಸಹಾಯ ಮಾಡಬಹುದು. ಸಾಯುವವನ ಹತ್ತಿರ ವೈದ್ಯರಾರೂ ಈಗ ನಿಲ್ಲಹೋಗುವುದಿಲ್ಲ. ರಾತ್ರಿಹೊತ್ತು

ರೋಗಿಯನ್ನು ದಾದಿಯ ಪಾಲಿಗೆ ಬಿಟ್ಟುಹೋಗುತ್ತಾರೆ. ರೋಗಿಯನ್ನು ಬಂದುನೋಡಿ ಹೋಗುವ ಬಂಧುಗಳೂ ಅಷ್ಟೆ. ಮನಸ್ಸಿರಲಿ, ಇಲ್ಲದಿರಲಿ ರೋಗಿಯನ್ನು ನೋಡಿ ಹೊರಟುಹೋಗುತ್ತಾರೆ. ವೈದ್ಯನೂ ಹಾಗೆಯೇ.. ನಿತ್ಯವಿಧಿಯಂತೆ ಒಂದು ಎರಡು ಗಂಟೆಗಳನಂತರ ರೋಗಿಯನ್ನು ನೋಡಿ ಹೊರಟು ಹೋಗುತ್ತಾನೆ.

ಮನೆ ವೈದ್ಯ ಹೀಗೆ ಮಾಡುವುದಕ್ಕಾಗುವುದಿಲ್ಲ. ಮನೆಯವರೊಂದಿಗೆ ರೋಗಿಯ ಬಳಿ ಕೂಡುತ್ತಾನೆ. ಕೊನೆಯ ಘಳಿಗೆಯಲ್ಲಾದರೂ ರೋಗಿ ನೋವನ್ನು ಅನುಭವಿಸದೆ ಕಣ್ಣು ಮುಚ್ಚಲಿ ಎಂದು ಪ್ರಯತ್ನಿಸುತ್ತಾನೆ. ಅಫೀಮಿನ ಸತ್ವ ನೋವನ್ನು ಮರೆಸುತ್ತದೆ. ಈ ಅಫೀಮಿನ ಸತ್ವವನ್ನು ರೋಗಿಗಳಿಗೆ ಕೊಟ್ಟು ಅವರು ನೋವನ್ನು ಅನುಭವಿಸದಂತೆ ಮಾಡಿದ್ದೇನೆ. ಈ ಪ್ರಯತ್ನ ನಡೆಸಿ ಪ್ರತಿಫಲ ಪಡೆದಿದ್ದೇನೆ.

ವೈದ್ಯ, ರೋಗಿಯನ್ನು ಪರೀಕ್ಷಿಸಿ, ರೋಗಲಕ್ಷಣ ಕಂಡುಕೊಂಡಮೇಲೆ, ರೋಗ ಪರಿಹರಿಸುವುದಕ್ಕಾಗುವುದಿಲ್ಲ ಎಂದು ರೋಗಿಗೆ ತಿಳಿಸಬೇಕೇ ಬೇಡವೆ ಎಂಬುದೊಂದು ಸಮಸ್ಯೆ. ಧರ್ಮಾಧಿಕಾರಿ ನನಗೆ ಇದನ್ನು ಪದೇ ಪದೇ ಒತ್ತಿ ಹೇಳುತ್ತಿದ್ದ. "ಪ್ರಾಣಾಂತಕ ಬೇನೆಗೆ ತುತ್ತಾಗಿದ್ದ ಪಾಪಾತ್ಮರಿಗೆ, ಮೊದಲಾಗಿ ನೀನು ಅವರಿಗೆ ಬೇನೆ ಪರಿಹಾರವಾಗದೆಂದು ಹೇಳಿಬಿಡು. ಆಗಲಾದರೂ ಅವರು ದೈವವನ್ನು ನೆನೆಯಲು ಇಷ್ಟಪಟ್ಟಾರು "ಎಂದು ಹೇಳುತ್ತಿದ್ದ. ವೈದ್ಯರಲ್ಲಿ ಅನೇಕರು ರಸ್ಕಿನ್ನನ ಹೇಳಿಕೆಯನ್ನು ಅನುಮೋದಿಸುವವರು ಎಂದು ತಿಳಿಯುತ್ತೇನೆ.— "ಮರಣಶಯ್ಯೆಯಲ್ಲಿರುವಾಗ ಬುದ್ಧಿವಂತನಾದವನು ಯೋಚನಾಪರನಾಗಿರುವುದಿಲ್ಲ" ಎಂದು. ಮರಣಶಯ್ಯೆಯಲ್ಲಿರುವ ರೋಗಿ ಯಾವ ಬಗೆಯ ಯೋಚನೆಯನ್ನೂ ಮಾಡದೆ ಇರುವುದು ಒಳ್ಳೆಯದು.

ವೈದ್ಯ, ಆದಷ್ಟುಮಟ್ಟಿಗೆ ರೋಗಿಯನ್ನು ಲೌಕಿಕ ವ್ಯವಹಾರದಲ್ಲಿಯೇ ಇಟ್ಟಿರಬೇಕು. ಈ ವ್ಯವಹಾರದಿಂದ ರೋಗಿಯನ್ನು ದೂರ ಎಳೆಯಬಾರದು. ಮುಖ್ಯವಾಗಿ ಹೃದ್ರೋಗದ (ಹೃದಯರೋಗ) ರೋಗಿಗಳ ಬಗ್ಗೆ ಇನ್ನೂ ಎಚ್ಚರಿಕೆಯಿಂದಿರಬೇಕು. ಅವರ ಕಾಹಿಲೆಯ ಬಗ್ಗೆ ಮಾತನಾಡುತ್ತಾ "ಪರಿಸ್ಥಿತಿ ತೀವ್ರವಾಗಿದೆ" ಎಂದು ಹೇಳಿ ಗಾಬರಿಪಡುವಂತೆ ಮಾಡಬಾರದು. ನಿಜಸ್ಥಿತಿಯನ್ನು ಈ ರೋಗಿಗಳಿಗೆ ತಿಳಿಸಿದಲ್ಲಿ ಕೆಡಕು ಸಂಭವಿಸುವುದುಂಟು.

ಕೆಲವು ರೋಗಿಗಳು ತಮ್ಮ ರೋಗದ ನಿಜಸ್ಥಿತಿಯನ್ನು ತಿಳಿಯಲು ಅಪೇಕ್ಷಿಸುತ್ತಾರೆ. ನೈರುತ್ಯ ಭಾಗಕ್ಕೆ ಸೇರಿದ ಒಬ್ಬ ದೃಢಾಂಗ ರೋಗಿಯಿದ್ದ. ಇವನು ಮೂವತ್ತು ವರ್ಷ ಷರೀಫನಾಗಿ ಕೆಲಸಮಾಡಿ ಪ್ರಸಿದ್ಧನಾದವನು. ಇವನು ಮೊದಲಾಗಿ "ನೀವು ನಿಜವನ್ನೇ ನುಡಿಯುವಿರಂತೆ ನನಗೆ ತಿಳಿದುಬಂತು.— ನನ್ನ ಹೊಟ್ಟೆಯಲ್ಲಿ ವ್ರಣವಿದೆಯೆ ? ಈ ವ್ರಣ ಬಾಧೆಗೆ ಏನಾದರೂ ಚಿಕಿತ್ಸೆ ಇದೆಯೆ ತಿಳಿಸಿರಿ" ಎಂದು ನೇರವಾಗಿ ಕೇಳಿದ. "ನಿನ್ನ ಹೊಟ್ಟೆಯಲ್ಲಿ ವ್ರಣವಿದೆ, ಅದನ್ನು ಶಸ್ತ್ರಚಿಕಿತ್ಸೆಯಿಂದ ಗುಣಪಡಿಸುವುದಕ್ಕಾಗುವುದಿಲ್ಲ" ಎಂದು ನಾನವನಿಗೆ ತಿಳಿಸಿದೆ. ಆಗವನು "ನಿಮ್ಮ ಶುಲ್ಕವೇನು ?" ಎಂದು ಕೇಳಿದ. "ಶುಲ್ಕ ಏನನ್ನೂ ಕೊಡಬೇಕಾದುದಿಲ್ಲ" ಎಂದು ಪ್ರತಿಯಾಗಿ ಅವನಿಗೆ ಹೇಳಿದೆ. "ಹೀಗೆ ನಡೆದುದಾದರೆ ನಿಮ್ಮ ವ್ಯವಹಾರ ಸಾಗದು" ಎಂದವನು, ಹತ್ತು ಡಾಲರನ್ನು ಮೇಜಿನಮೇಲಿಟ್ಟು, ತಲೆಯೆತ್ತಿ ಕೈಗಳನ್ನು ಹಿಂದಕ್ಕಿಟ್ಟುಕೊಂಡು ಗಂಭೀರವಾಗಿ ಹೊರಟುಹೋದ. ಅವನ ಮೂವತ್ತು ವರ್ಷದ ದುಡಿಮೆಯಲ್ಲಿ ಅನೇಕ ಕಳ್ಳಕಾಕರ ಸಾವನ್ನು ನೋಡಿದ್ದ. ಇಂತಹವನು ವ್ರಣಬಾಧೆಯಿಂದ ತನ್ನ ಪ್ರಾಣ ಹೋಗುವುದು ಎಂದು ತಿಳಿದು ಹೆದರಲಿಲ್ಲ. ಈ ಷರೀಫನ ವ್ಯಕ್ತಿತ್ವವೇ ಅದ್ಭುತವಾದುದು. ಇವನು ನಿಜವಾಗಿಯೂ ಮನುಷ್ಯನೆ!

ಇಲ್ಲಿ ವಿವರಿಸಿದ ವೈದ್ಯ ಮತ್ತು ರೋಗಿ ಇವರಲ್ಲಿದ್ದ ನಿಕಟ ಸಂಬಂಧ ಈಗ ಕಡಿಮೆಯಾಗುತ್ತಿದೆ. ವೈದ್ಯ ತನ್ನ ವೃತ್ತಿಜೀವನದ ಗಡಿಬಿಡಿಯಲ್ಲಿ ರೋಗಿಯ ಮೇಲಿನ ಹತೋಟಿ ಮತ್ತು ಮನೆಯವರ ಮೇಲಿನ ತನ್ನ ವರ್ಚಸ್ಸನ್ನು ಕಳೆದುಕೊಳ್ಳುತ್ತಾನೆ. ಮನೆ ವೈದ್ಯನಿಗೆ ಇರುವಂತೆ ಹತೋಟಿ ಬೇರೆ ಯಾರಿಗೂ ಇರುವುದಿಲ್ಲ. ಹತೋಟಿಯನ್ನು ಹೀಗೆ ವೈದ್ಯ ಯಾವಾಗಲೂ ಇಟ್ಟುಕೊಂಡಿರಲಾರ. ರೋಗಿಗಳನ್ನು ಅವನು ಕಾಯ್ದುಕೊಂಡಿರಲಾರ, ಅವನಿಂದ ಕಾಯುವಿಕೆಯ ಕೆಲಸವೂ ಆಗುವುದಿಲ್ಲ.

ಕೆಲವು ಕಾಹಿಲೆಗಳ ಪ್ರವರ್ತನೆ ವೈದ್ಯನಿಗೆ ಚೆನ್ನಾಗಿ ತಿಳಿಯುವುದು. ರೋಗಿಗೆ ಇದು ಅಷ್ಟಾಗಿ ಗೊತ್ತಾಗದು. ದುಃಖ, ವಿಯೋಗ, ನಷ್ಟ ಈ ಬಗೆಯ ಚಿತ್ರಗಳು ವೈದ್ಯನಿಗೆ ಸ್ಪಷ್ಟವಾಗಿ ಕಾಣುವಂತೆ ರೋಗಿಗೆ ಕಾಣುವುದಿಲ್ಲ. ಮನೆ ವೈದ್ಯರೊಂದಿಗೆ ರೋಗಿಗಳು ತಮ್ಮ ಗೃಹಕೃತ್ಯಕ್ಕೆ ಸಂಬಂಧಿಸಿದ ಗೌಪ್ಯ

ವನ್ನೂ ಹೇಳಿಕೊಳ್ಳುತ್ತಾರೆ. ಅದೇ ವೈದ್ಯಶಾಲೆಯಲ್ಲಿನ ವೈದ್ಯನ ಎದು ರಿಗೆ ಮೂಕರಂತೆ ವರ್ತಿಸುತ್ತಾರೆ. ವೈದ್ಯನ ವ್ಯಕ್ತಿತ್ವ ಬಹು ಮುಖ್ಯವಾ ದುದು. ಹೆಚ್ಚು ಪರಿಚಯವಿಲ್ಲದ ತರುಣ ವೈದ್ಯ, ರೋಗಿಗೆ ಔಷಧ ಕೊಟ್ಟಲ್ಲಿ ಪರಿಣಾಮವೇನೂ ಆಗದು. ಅದೇ ಔಷಧವನ್ನು ಸ್ವಲ್ಪ ಬದಲಾಯಿಸಿ ಪರಿಚಿತ ಹಳೆಯ ವೈದ್ಯ ಕೊಟ್ಟರೆ ಪರಿಣಾಮ ಉತ್ತಮವಾಗುವುದು. ಹೀಗಾಗುವುದು ಜನರ ನಂಬಿಕೆಯಿಂದ. ಈ ನಂಬಿಕೆಯಲ್ಲಿ ಹುರುಳಿಲ್ಲ.

ಈಗ ಈ ಬಗೆಯ ಔಷಧೋಪಚಾರಕ್ಕೆ ವೇಳೆಯಿಲ್ಲ. ಅನೇಕ ಸಂದರ್ಭ ದಲ್ಲಿ ಈ ಬಗೆಯ ಉಪಚಾರ ನಡೆಯುವುದಿಲ್ಲ. ವೈದ್ಯ ಪ್ರತ್ಯೇಕವಾಗಿ ಒಬ್ಬನ ವಿಚಾರದಲ್ಲಿ ಇಷ್ಟು ಆಸಕ್ತಿ ವಹಿಸುವುದಕ್ಕೂ ಆಗುವುದಿಲ್ಲ. ಅನೇಕ ಸಹೋ ದ್ಯೋಗಿಗಳ ಸಮೂಹದಲ್ಲಿ ಒಬ್ಬನನ್ನು ವಿಶೇಷ ಆಸಕ್ತಿಯಿಂದ ನೋಡುವು ದಾದರೂ ಹೇಗೆ ? ಇದೆಲ್ಲಾ ಸ್ವಕೀಯ ವಿಚಾರಕ್ಕೆ ಸಂಬಂಧಪಟ್ಟದುದು. ಅವರ ಅನುಕೂಲಕ್ಕೆ ತಕ್ಕಂತೆ ನಡೆಯುವ ವಿಚಾರವಿದು. ಹೇಗಾದರಿರಲಿ, ರೋಗಿಯ ನೋವು ಬಾಧೆಗಳನ್ನು ಕಡಿಮೆಮಾಡಲು ಸೂಚಿಸುವುದೇ ವೈದ್ಯನ ಮುಖ್ಯ ಕರ್ತವ್ಯವಾಗಿದೆ. ಸಾವಿನಲ್ಲಿ, ನೋವಿಲ್ಲದಿರಬಹುದು, ಜೀವಿತದಲ್ಲಿ ಘೋರವಡ ಗಿರಬಹುದು. ಶಾಸ್ತ್ರದ ಅನಿವಾರ್ಯ ಆತಂಕಗಳನ್ನು ಎದುರಿಸಿ, ಸೂಕ್ಷ್ಮದರ್ಶಕ ಯಂತ್ರ ಮತ್ತು ಪರೀಕ್ಷಾಪ್ರನಾಳ (Test Tube) ಇವುಗಳನ್ನು ದೂರೀಕರಿಸಿ, ಯುಕ್ತಿಯಿಂದ ರೋಗಿಯನ್ನು ಪಾರುಮಾಡುವುದು ವೈದ್ಯನ ಕೆಲಸ.

## ೧೨

ಐವತ್ತು ವರ್ಷದಿಂದೀಚೆಗೆ ವಿಜ್ಞಾನ ಮತ್ತು ಔಷಧಿವಿಜ್ಞಾನದ ಉನ್ನತಿ ಹೇಗಾಯಿತು ಎಂದು ಹಿಂದಿನ ಅಧ್ಯಾಯಗಳಲ್ಲಿ ತಿಳಿಯಬಹುದಾಗಿದೆ. ಸ್ಥಿತಿ ಹೇಗೆ ಸುಧಾರಿಸಿದೆಯೆಂದು ಈಗ ತಿಳಿಯೋಣ–ಉನ್ನತಿ ಎರಡು ವಿಧದಲ್ಲಾಗಿವೆ. ವಿದ್ಯಾಭ್ಯಾಸ ಮತ್ತು ವೃತ್ತಿಜೀವನದಲ್ಲಿ ವಿಜ್ಞಾನದೇಳಿಗೆಯಾಗಿದೆ. ವಿಜ್ಞಾನ ಮೇಲಾಗಿ ವೈದ್ಯವಿಜ್ಞಾನ ಎಲ್ಲಕ್ಕಿಂತಲೂ ಹೆಚ್ಚಾಗಿ ಉನ್ನತಿ ಹೊಂದಿದೆ. ವೈದ್ಯವಿಜ್ಞಾನ ಜನಾದರಣೀಯವೂ ಆಗಿದೆ.

ವೈದ್ಯವಿದ್ಯಾಭ್ಯಾಸದಲ್ಲೂ ಮಾರ್ಪಾಡಾಗಿವೆ. ವೈದ್ಯವಿಜ್ಞಾನವನ್ನು ಕಲಾಶಾಲೆಯಲ್ಲಿ ಕಲಿಯಬೇಕೆನ್ನುವವನು ಮೊದಲು, ಮೂಲಶಿಕ್ಷಣವನ್ನು

ಪಡೆದು ನಂತರವೇ ವೈದ್ಯವಿಜ್ಞಾನ ಶಾಲೆ ಸೇರಬೇಕು. ಮೊದಲಿಗಿಂತಲೂ ಈಗ ಹೆಚ್ಚುಕಾಲ ಒಬ್ಬನು ಕಲಿಯಬೇಕು. ಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸ ಮಾಡಲಿ, ತಿಳಿಯಲಿ ಎನ್ನುವ ಉದ್ದೇಶದಿಂದಲೇ ಈ ಕಾಲಪ್ರಮಾಣವನ್ನು ಹೆಚ್ಚಿಸಿರುವುದು. ಸಾಧಾರಣ ವಿದ್ಯಾರ್ಥಿ, ವೈದ್ಯವಿಜ್ಞಾನ ಮತ್ತು ವೈದ್ಯ ಪಾಠಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲಾರ. ಬುದ್ಧಿವಂತನೂ ಕುಶಲನೂ ಆದ ವಿದ್ಯಾರ್ಥಿಯು ಮಾತ್ರ ಪಾಠಗಳನ್ನು ಸುಲಭವಾಗಿ ಗ್ರಹಿಸುತ್ತಾನೆ.

ವೈದ್ಯವಿದ್ಯಾಬೋಧಕಶಾಲೆಯಲ್ಲಿ ಮಾರ್ಪಾಡಾಗಬೇಕೆ ? ಎಂದು ಕೇಳ ಬಹುದು. ಇದಕ್ಕೆ ಉತ್ತರ ಸುಲಭವಾದದ್ದೆ. ಮಾನವತೆಯೇ ಇದಕ್ಕೆ ಕಾರಣ. ವೈದ್ಯರು ಇತರ ಹೆಚ್ಚಿನ ಮಾನವರಂತೆ ನೋವು, ಸೋಲು ಇವುಗಳಿಂದ ತಪ್ಪಿಸಿಕೊಳ್ಳಲು ಯೋಚಿಸುತ್ತಾರೆ. ನೋವು, ಸೋಲು ಯಾರಿಗೂ ಬೇಡ ವಾದದ್ದೇ ಸರಿ! ರೋಗಿ ಚಿಕಿತ್ಸೆ ಪಡೆಯುತ್ತಾ ತೀರಿಕೊಂಡ ಎಂದು ಕೇಳಿದ ವೈದ್ಯನಿಗೆ ಹೇಗಾಗುವುದು ? ನೋವು, ಸೋಲು ಎಂದಲ್ಲವೆ ? ವೈದ್ಯವಿಜ್ಞಾನ ದಲ್ಲಿ ಉನ್ನತಿ ಎಂದರೇನು ? ರೋಗ ಉಲ್ಬಣಗೊಳ್ಳುವುದಕ್ಕೆ ಅವಕಾಶಕೊಡದೆ, ಪರಿಹಾರಗಳ ಮೂಲಕ ಕಡಿಮೆ ಮಾಡುವುದು, ಪೂರ್ಣ ವಾಸಿಮಾಡುವುದು ಉನ್ನತಿಯಲ್ಲವೆ ? ವೈದ್ಯವಿಜ್ಞಾನದಲ್ಲಿ ಉನ್ನತಿ ಎಂದರೆ ಮಾನವ ಜನಾಂಗಕ್ಕೆ ಗುಣವಿರೋಧಿಯಾಗಿ ಹಗೆಯಾಗಿ ನಿಂತಿರುವ ರೋಗ ರೋಗಿಗಳನ್ನು ಮತ್ತು ಮಾನವನ ಸೋಲು ನೋವನ್ನು ಜಯಿಸುವಿಕೆಯೇ ಎಂದರ್ಥ. ಇದಕ್ಕೇ ಸಿದ್ಧಿ ಯೆಂದು ಹೆಸರು.

ಹಿಂದೆ ಬೋಧಿಸುತ್ತಿದ್ದ ವೈದ್ಯಬೋಧನೆಗೂ ಇಂದಿನ ವಿದ್ಯಾಭ್ಯಾಸ ಕ್ರಮಕ್ಕೂ ಇರುವ ವ್ಯತ್ಯಾಸ ಬಹಳ. ೧೮೮೬ರಲ್ಲಿ ವೈದ್ಯವಿದ್ಯಾಬೋಧನೆ ೧೦ ತಿಂಗಳಕಾಲ ನಡೆಯುತ್ತಿತು. ಐದು ತಿಂಗಳ ಎರಡು ವ್ಯಾಸಂಗಾವಧಿಯಿತ್ತು. ಈಗಿನ ಕ್ರಮ ವರ್ಷವೊಂದಕ್ಕೆ ಒಂಬತ್ತು ತಿಂಗಳು ವ್ಯಾಸಂಗಾವಧಿಯ ನಾಲ್ಕು ವರ್ಷಗಳು ನಡೆಯುವುದು. ಅಲ್ಲದೆ ನಿರ್ಬಂಧ ಶಿಕ್ಷಣವನ್ನು ವಿದ್ಯಾರ್ಥಿ ಒಂದು ವರ್ಷ ಪಡೆಯಬೇಕು. ಇಷ್ಟು ದೀರ್ಘಕಾಲದ ವಿದ್ಯಾರ್ಜನೆ ಅತ್ಯಗತ್ಯವೇ ಆಗಿದೆ.

ಇಷ್ಟು ದೀರ್ಘಕಾಲ ವ್ಯಾಸಂಗಮಾಡಿ, ಒತ್ತಾಯ ಶಿಕ್ಷಣ ಪಡೆದ ತರುಣ ವೈದ್ಯ ನಿಜವಾಗಿಯೂ ಪರಿಣಿತನಾಗುತ್ತಾನೆ. ಸಾರ್ವಜನಿಕರು ಇಂತಹವನಲ್ಲಿ ಸಂದೇಹವಿಲ್ಲದೆ ವೈದ್ಯಸಲಹೆ ಕೇಳಬಹುದು. ಹೀಗೆ ಶಿಕ್ಷಣ ಪಡೆದ ತರುಣ ವೈದ್ಯರಲ್ಲಿ ದೃಢಶಕ್ತಿ ಇರುವುದು ಎಂದು ನಂಬಬಹುದಾಗಿದೆ. ಐವತ್ತು ವರ್ಷದ ಹಿಂದಿನ ಕುಶಲವೈದ್ಯರಿಗಿಂತಲೂ ಈ ತರುಣ ವೈದ್ಯ ಸಮರ್ಥನೇ ಎನ್ನಬಹುದು. ಇದರಲ್ಲಿ ಸಂದೇಹವಿಲ್ಲ. ಈಗಿನ ಕುಶಲಿಗಳು ತಾಂತ್ರಿಕ ಚಿಕಿತ್ಸಾರೂಪವನ್ನು ಕಂಡುಕೊಂಡಿದ್ದಾರೆ. ವೈದ್ಯಶಾಸ್ತ್ರವೇ ಒಂದು ಕಲೆ. ಈ ಕಲೆಯನ್ನು, ವಿಜ್ಞಾನವನ್ನು ಅರಿತು, ಏಕೀಭಾವದಿಂದ ಮಾನವ ಪ್ರಾಣಿಯ ಭ್ರಾಂತಿ ಮತ್ತು ವಿಚಿತ್ರ ವರ್ತನೆಗಳನ್ನು ತಿಳಿದುಕೊಳ್ಳಬೇಕು.

ವೈದ್ಯಶಾಸ್ತ್ರವನ್ನು ಅಭ್ಯಾಸಮಾಡಿ, ಶಾಲಾ ಶಿಕ್ಷಣ ಪಡೆದು, ಪ್ರಾಯೋಗಿಕ ಶಿಕ್ಷಣವನ್ನು ಮುಗಿಸಿ ಖಾಸಗೀ ವೈದ್ಯಾಲಯ ತೆರೆದು ಸಂಪಾದಿಸುವ ಬದಲು, ತರುಣ ವೈದ್ಯ, ತಜ್ಞರ ಸಹೋದ್ಯೋಗಿಯಾಗಿ ನಿಲ್ಲಬಾರದೇಕೆ ? ಇದರಿಂದವನು ಹೆಚ್ಚಿನ ಶಾಸ್ತ್ರಾಭ್ಯಾಸ ಮಾಡಿದಂತಾಗುವುದಿಲ್ಲವೆ ? ಹೀಗೆ ಎರಡು ವರ್ಷದಿಂದ ಐದು ವರ್ಷಕಾಲ ಹೆಚ್ಚಿನ ಜ್ಞಾನಪಡೆದ ತರುಣನೂ ವಿಶೇಷತಜ್ಞನೆನಿಸಿಕೊಳ್ಳಬಹುದಲ್ಲ ! ಒಂದು ವರ್ಷ ಸಹೋದ್ಯೋಗಿಯಾಗಿ ನಿಂತು ಕೆಲಸ ಮಾಡಿದ ತರುಣ ವೈದ್ಯ "ಸ್ಥಳವೈದ್ಯ" ಎನಿಸಿಕೊಳ್ಳುತ್ತಾನೆ. ವೈದ್ಯಾಲಯಕ್ಕೆ ಬಂದ ರೋಗಿಯನ್ನು ಈ ಸ್ಥಳವೈದ್ಯ ಪೀಠಿಕಾರೂಪವಾಗಿ ರೋಗನಿದಾನವನ್ನು ಮತ್ತು ಚಾರಿತ್ರಿಕ ಅಂಶವನ್ನು ಗುರುತಿಸಿ, ಮುಖ್ಯ ವೈದ್ಯನಿಗೆ ಕೂಲಂಕಷವಾಗಿ ತಿಳಿಯುವಂತೆ ಟಿಪ್ಪಣಿ ಬರೆದಿಡುತ್ತಾನೆ. ಕ್ರಮೇಣ ಈ ತರುಣ ವೈದ್ಯನೇ ರೋಗನಿದಾನವನ್ನು ಹಂತಹಂತವಾಗಿ ತಿಳಿಯುತ್ತಾನೆ.

ತರುಣ ವೈದ್ಯ ಯಾವಯಾವ ಹಂತವೇರಿ ಪರಿಣಿತನಾಗುತ್ತಾನೆಂದು ತಿಳಿದಹಾಗಾಯಿತು. ಈ ಲೇಖನದ ಮೊದಲನೆಯ ಅಧ್ಯಾಯದಲ್ಲಿ ವಿವರಿಸಿರುವ ಭಯಂಕರ ವಿವರಗಳೆಲ್ಲಾ ಈಗ ಮಾಯವಾಗಿವೆ. ಶಾಸ್ತ್ರೀಯ ರೋಗನಿದಾನ ಮಾರ್ಗ, ಪರಿಹಾರಮಾರ್ಗ, ಚಿಕಿತ್ಸಾ ಮಾರ್ಗಗಳು ಐವತ್ತು ವರ್ಷದಿಂದೀಚೆಗೆ ಬಹುಮುಂದುವರಿದಿದೆಯೆಂದು ಹೇಳಬಹುದು. ಸತ್ಯಾಂಶವಿಷ್ಟೆ: ಈಗಲೂ ಕೆಲ ವಡೆಗಳಲ್ಲಿ ಸಿಡುಬು, ವಿಷಮ ಶೀತಜ್ವರ ಕಾಣಿಸಿಕೊಳ್ಳುತ್ತಲಿರುತ್ತದೆ. ಹೀಗೆ ಕಾಣಿಸಿಕೊಳ್ಳುವುದು ಅಲಕ್ಷ್ಯದಿಂದ, ಅಜಾಗರೂಕತೆಯಿಂದ ಮಾತ್ರ ಎಂದು

ತಿಳಿಯಬೇಕು. ಜಾಗರೂಕತೆಯಿಂದಿದ್ದಲ್ಲಿ ಈ ರೋಗದ ಸೋಂಕನ್ನು ತಡೆಗಟ್ಟ ಬಹುದಾಗಿದೆ. ಸರ್ಕಾರದ ಆರೋಗ್ಯ ಇಲಾಖೆ, ಆರೋಗ್ಯ ರಕ್ಷಣಾಸಂಸ್ಥೆ, ಪ್ರಾಂತೀಯ ಆರೋಗ್ಯಾಧಿಕಾರಿ ಆರೋಗ್ಯ ನಿಯಮಗಳನ್ನು ಎಲ್ಲರೂ ಪಾಲಿಸು ವಂತೆ ನೋಡಿಕೊಳ್ಳುತ್ತಾರೆ. ಸಾರ್ವಜನಿಕರನ್ನು ಆಗಾಗ್ಗೆ ಎಚ್ಚರಿಸಿ ಅಜಾಗರೂ ಕತೆಯಿಂದಿರಬೇಡಿ. ಸೋಂಕು ತಡೆಗಟ್ಟಿ ಎಂದು ಒತ್ತಿ ಹೇಳುತ್ತಿರುತ್ತಾರೆ. ಒಂದುವೇಳೆ ಸೋಂಕು ಹರಡಿದೆ ಎಂದು ಕಂಡುಬಂದಲ್ಲಿ, ಅದನ್ನು ನಿವಾರಿಸಲು ಸಾಹಸಪಡುತ್ತಾರೆ. ಹಿಂದೆ ಒಂದು ಸೋಂಕು ರೋಗದಿಂದ ಇಡೀಗ್ರಾಮ ಅಥವಾ ನಗರವೇ ಹಾಳಾಗುತ್ತಿತ್ತು. ಈಗ ಈ ಬಗೆಯ ಭಯವಿಲ್ಲ. ಜನ ವಿಜ್ಞಾನಮಾರ್ಗ ಕಂಡುಕೊಳ್ಳುತ್ತಿದ್ದಾರೆ. ಪರಿಣಿತ ವೈದ್ಯರಿದ್ದಾರೆ. ಆರೋಗ್ಯ ನಿಯಮವನ್ನು ಅಲಕ್ಷಿಸಬಾರದು ಎಂದವರು ಒತ್ತಿಒತ್ತಿ ಹೇಳುತ್ತಿದ್ದಾರೆ. ವೃತ್ತಿಜೀವನದಲ್ಲಿ ಎಲ್ಲರೂ ಎಚ್ಚರಿಕೆಯಿಂದಿರಬೇಕು. ಹೀಗೆ ಎಚ್ಚರಿಕೆಯಿಂ ದಿದ್ದರೆ ಮಾತ್ರ ಭಯಂಕರ ಸೋಂಕನ್ನು ತಡೆಗಟ್ಟಬಹುದು,

ಸೋಂಕು ತಡೆಗಟ್ಟುವ ಈಗಿನ ವಿಧಾನ ನಿಯಮಗಳು ಮೆಚ್ಚತಕ್ಕವಾಗಿವೆ. ರೋಗ ಪರಿಹಾರಕ್ಕೆ ಸಾಧಾರಣ ಚಿಕಿತ್ಸೆಗಿಂತಲೂ ಶಸ್ತ್ರಚಿಕಿತ್ಸೆ ಮೇಲು ಎಂದು ಸುಲಭೋಪಾಯ ಕಂಡುಕೊಂಡಿದ್ದಾರೆ. ಪ್ರಾಣನಾಶಕ ಮತ್ತು ವಿಷಪೂರಿತ ವೆಂದು ತಿಳಿದ ಉದರಭಾಗವನ್ನು ಸುಲಭ ಶಸ್ತ್ರಚಿಕಿತ್ಸೆಯಿಂದ ವಾಸಿಮಾಡು ತ್ತಾರೆ. ಮೂತ್ರಾತಿಸಾರ (Diabetes)ವನ್ನು ಈಗ ಹತೋಟಿಗೆ ತಂದುಕೊಂಡಿ ದ್ದಾರೆ. ಕ್ಷಯರೋಗಕ್ಕೆ ಅನೇಕ ಕಾರಣಗಳನ್ನು ಈಗ ಕಂಡುಹಿಡಿದಿದ್ದಾರೆ. ಇದಕ್ಕೆ ಪರಿಹಾರಮಾರ್ಗವನ್ನು ಕಂಡುಕೊಂಡಿದ್ದಾರೆ. ಇನ್ನೂ ಕೆಲವು ರೋಗ ಗಳು ಆಧುನಿಕ ವೈದ್ಯರಿಗೆ ಸಮಸ್ಯೆಯಾಗಿಯೇ ಉಳಿದಿವೆ. ಆಧುನಿಕ ವೈದ್ಯ ವಿಜ್ಞಾನ ಪರಿಣಿತನು ಇನ್ನೂ ಕೆಲವು ರೋಗಗಳ ಕಾರಣ ಪರಿಹಾರಗಳಲ್ಲಿನ ತೊಡಕು, ಸಮಸ್ಯೆಗಳನ್ನು ಬಿಡಿಸಿ ಬೆಳಕು ಕಾಣಬೇಕಾಗಿದೆ.

ಸಾವಿರಾರು ಜನರ ಆರೋಗ್ಯರಕ್ಷಣೆಗೆ ಸಾಕಷ್ಟು ಅವಕಾಶವಿರುವುದಿಲ್ಲ. ಅವರಿಗೆ ಈ ಸೌಲಭ್ಯ ಸಿಗಲಾರದೆಂದಲ್ಲ. ರೋಗ ಪರಿಹಾರಮಾರ್ಗವೇ ಅವರಿಗೆ ತಿಳಿಯದಾಗಿದೆ. ಆರೋಗ್ಯ ರಕ್ಷಣೆಯಾಗಬೇಕು, ಸೋಂಕು ತಡೆಗಟ್ಟಬೇಕು ಎಂದು ಜನರು ಅಪೇಕ್ಷಿಸಬೇಕು. ಜನರು ತಮ್ಮ ಆರೋಗ್ಯರಕ್ಷಣೆಗೆ ಮನಸ್ಸು ಕೊಟ್ಟಂತಿಲ್ಲ. ಅವರ ಅಲಕ್ಷ್ಯವೇ ಇದಕ್ಕೆ ಕಾರಣವೆನ್ನಬಹುದು. ಬೇರೆ

ಪ್ರಾಂತದ ಜನರು ನನ್ನ ಈ ಹೇಳಿಕೆಯನ್ನು ನಂಬುವುದಿಲ್ಲ. ನಾನು ಕಾನ್ಸಾಸ್ ಪ್ರಾಂತ್ಯವನ್ನು ಕುರಿತು ಹೇಳುತ್ತಿದ್ದೇನೆ. ನನ್ನ ಹೇಳಿಕೆಗೆ ಉದಾಹರಣೆಯಾಗಿ ಸಾವಿರಾರು ಜನರನ್ನು ತೋರಿಸಿಕೊಡಬಲ್ಲೆ. ಕಾನ್ಸಾಸ್ ಪ್ರಾಂತದಲ್ಲಿ ಆರೋಗ್ಯರಕ್ಷಣೆ ಚೆನ್ನಾಗಿ ನಡೆಯುತ್ತಿದೆ. ಇದು ನಿಜವಾದ ಹೇಳಿಕೆ.

ಮಂತ್ರತಂತ್ರಗಳು, ಕೈಮದ್ದು ಇವನ್ನು ನಡೆಸುವ ಠಕ್ಕುವೈದ್ಯರಿಂದ ಚಿಕಿತ್ಸೆ ಪಡೆಯುವವರಿಗೆ ಆಧುನಿಕ ವೈದ್ಯಶಾಲೆಯ ವೈದ್ಯರ ಸಲಹೆ ಸಲ್ಲದು. ಮಂತ್ರಗಾರರ ಮತ್ತು ಠಕ್ಕುವೈದ್ಯರ ಬೆನ್ನಿಗೆ ಬಿದ್ದಿರುವವರಿಗೆ ಆಧುನಿಕ ವೈದ್ಯ ಸಹಾಯ ಬೇಕಾಗುವುದಿಲ್ಲ. ಅವರು ಇದನ್ನು ಇಚ್ಛಿಸುವುದಿಲ್ಲ.

ಸಾಮಾನ್ಯ ಜನ ಆಧುನಿಕ ವೈದ್ಯ ಸಹಾಯವನ್ನು ಅಪೇಕ್ಷಿಸುವುದಿಲ್ಲ. ಮೂರನೇ ಒಂದು ಪಾಲಿನಷ್ಟು ಜನರಿಗೆ ಆಧುನಿಕ ವೈದ್ಯ ಸಹಾಯದಲ್ಲಿ ನಂಬಿಕೆಯೇ ಇರುವುದಿಲ್ಲ. ಆಂದರೆ ಮೂರನೇ ಒಂದು ಭಾಗದಷ್ಟು ಜನ ಅನಾ ರೋಗ್ಯದಿಂದ ನರಳುವರೇ ಎಂದೇನು ? ಚಿಕಿತ್ಸಾ ಬಗೆಯನ್ನು ಹುಡುಕಿಕೊಂಡು ಠಕ್ಕುವೈದ್ಯರ ಬಳಿಗೆ ಹೋಗುವವರು ರೋಗಿಗಳೇ ಅಲ್ಲ. ಈ ಜನರಿಗೆ ಸಮಾಧಾನ ಹೇಳಿ, ಕರುಣೆಯಿಂದ ಯಾರು ನೋಡುತ್ತಾರೆ ? ಕರುಣೆಯಿಂದ ನೋಡಿ ತಿದ್ದಿದರೂ ಈ ಜನಗಳಿಗೆ ತಿಳಿವಳಿಕೆ ಮನಸ್ಸಿಗೆ ಹಿಡಿಸುವುದೆಂತು ? ಸಮಾಜ ಜೀವನದಲ್ಲಿ ವ್ಯತ್ಯಾಸವಿದೆ. ಅನಾನುಕೂಲಕ್ಕೆ ಮತ್ತು ಅನಾ ರೋಗ್ಯಕ್ಕೆ ಚಿಕಿತ್ಸಾರೂಪ ಪರಿಹಾರ ಮಾರ್ಗವಿದೆಯೆಂಬುದು ಈ ಜನರಿಗೆ ಮರೆಯಾಗಿರುವುದು. ಠಕ್ಕುವೈದ್ಯರಿಗೆ ಬೇಕಾದಷ್ಟು ವಿವಾದ ವಿಷಯಗಳಿರು ತ್ತವೆ. ಇಂತಹವರಿಗಾಗಿ ಮರುಕಪಡುವುದೇಕೆ ?

ವೈದ್ಯರೂ ರೋಗಿಗಳೂ ಇನ್ನೂ ಕಠಿಣತರವಾದ ಸಮಸ್ಯೆಯನ್ನು ಎದು ರಿಸಬೇಕಾಗಿದೆ. ವೈದ್ಯವಿಜ್ಞಾನ ಬೆಳವಣಿಗೆ ನಮ್ಮ ಎಲ್ಲ ಕಲ್ಪನೆಗೂ ಮೀರಿ ಮುಂದುವರಿದಿದೆ. ರೋಗ ಚಿಕಿತ್ಸಾ ಕ್ರಮದಲ್ಲಿ ವಿಜ್ಞಾನ ನಿಜವಾಗಿ ಒಂದು ಸಂಜೀವನವಾಗಿದೆ. ವೈದ್ಯವಿಜ್ಞಾನ–ಸಂಜೀವನ ಕಲೆಯೂ ಆಗಿದೆ. ವೈದ್ಯ ಕಲೆಯನ್ನು ಚೆನ್ನಾಗಿ ತಿಳಿದಿರುವವನಿಗೆ ಜನ ಹೆಚ್ಚು ಬೆಲೆ ಕೊಡುತ್ತಾರೆ. ಹೆಚ್ಚು ಗೌರವಾದರಗಳನ್ನು ತೋರುತ್ತಾರೆ. ಖಾಸಗೀ ವೈದ್ಯವೃತ್ತಿಯನ್ನು ಅನುಸರಿಸುವವನ ಹೊಣೆಗಾರಿಕೆ ಹೆಚ್ಚು. ಅವನ ವ್ಯಕ್ತಿತ್ವ ಮಹತ್ವವಾದದ್ದು.

ಕಾರ್ಖಾನೆಯ ಯಜಮಾನನಾಗಲೀ ರಾಜಕೀಯ ಮುಖಂಡನಾಗಲೀ ಆವ ನಿಗೆ ವೈದ್ಯಕೀಯ ಸಹಾಯಬೇಕು. ಕ್ರಿಯಾಸಕ್ತರೂ ಸಮರ್ಥರೂ ಆದ ವೈದ್ಯರನ್ನು ಹುಡುಕಿಕೊಂಡು ಹೋಗುವುದು ರೋಗಿಗಳ ಕೆಲಸ. ವೈದ್ಯ ವಿಜ್ಞಾನ ಗಾಢವಾದುದು. ಹೀಗೆಯೇ ವೈದ್ಯ ಮತ್ತು ರೋಗಿ ಇವರ ಸಂಬಂಧ ಹೆಚ್ಚು ಗಹನವಾದದ್ದು.

ಔಷಧೋಪಚಾರದ ಬೆಲೆ ಮಿತಿಮೀರಿದೆ ಎಂದು ಕೇಳುತ್ತಿರುತ್ತೇವೆ. ಬಡವರು ಉಚಿತ ವೈದ್ಯಾಲಯಕ್ಕೆ ಹೋಗುತ್ತಾರೆ. ಶ್ರೀಮಂತರು ಹೆಚ್ಚು ಖರ್ಚು ತಗಲುವ ಮೇಲ್ತರಗತಿಯ ವೈದ್ಯಾಲಯಕ್ಕೆ ಹೋಗುತ್ತಾರೆ. ನಡು ತರ ಗತಿಯ ಜನರು ಉಚಿತ ವೈದ್ಯಾಲಯಕ್ಕೆ ಹೋಗುವುದಿಲ್ಲ. ಆದರೆ ವಿಶೇಷ ವೈದ್ಯಾ ಲಯದ ಖರ್ಚನ್ನು ನಡುತರಗತಿಯವರು ಹೊರಲಾರರು. ಕಷ್ಟವೆನ್ನುವುದು ಇಲ್ಲಿಯೇ ಕಾಣಬರುವುದು. ಮಳೆಗಾಲದಲ್ಲಿ ಕಾಣಿಸಿಕೊಳ್ಳುವ ಬೇನೆ ರೋಗ ಗಳ ಪರಿಹಾರಕ್ಕೆ ಯಾರೂ ಸಿದ್ಧವಾಗಿರುವುದಿಲ್ಲ. ಕಷ್ಟಕ್ಕೆ ಸಿಕ್ಕಿದಾಗ ವೈದ್ಯಸಹಾಯ ಪಡೆಯಲು ಅವರಿಗಾಗುವುದಿಲ್ಲ. ಇಂತಹ ಜನರ ಸಹಾಯ ಕ್ಕೆಂದು ವಿಮಾಪದ್ಧತಿಯಿದೆ. ಈ ಸೌಲಭ್ಯವನ್ನು ಇವರು ಪಡೆಯಬಹುದಾಗಿದೆ. ಆದರೆ ಈ ಸೌಲಭ್ಯವೂ ಜನರಿಗೆ ಬೇಕಿಲ್ಲ. ಮುಂದಾಲೋಚನೆಯಿಲ್ಲದ ಈ ಜನರು ಉಚಿತ ವೈದ್ಯಾಲಯಕ್ಕೆ ಏಕೆ ಹೋಗಬಾರದು ? ಉಚಿತ ವೈದ್ಯಾಲಯವೆಂದು ಅಸಡ್ಡೆಯಿಂದ ಕಾಣುವುದೇಕೆ ? ಮುಖ್ಯ ನಗರದಲ್ಲಿನ ವೈದ್ಯಾಲಯಗಳಲ್ಲಿ ಚಿಕಿತ್ಸೆ ಪಡೆಯುವುದು ಸುಲಭವಲ್ಲ. ಇಲ್ಲಿ ಚಿಕಿತ್ಸೆಯ ಖರ್ಚು ಅತಿ ಹೆಚ್ಚೆಂದು ಜನರು ಹೇಳುತ್ತಾರೆ. ಅರಮನೆಗಳು ಕೇವಲ ಶ್ರೀಮಂತರಿಗೆ ಮಾತ್ರವೇ ಕಟ್ಟಲ್ಪಟ್ಟವೆ. ಕೂಲಿಗಳು, ಸಾಮಾನ್ಯ ಜನರು, ಶಿಲ್ಪಿಗಳು ಈ ಕನಸಿನ ಮಹಲನ್ನು ಕಟ್ಟಲು ಸಾಹಸಪಡುವರು. ಈ ವೈದ್ಯವೃತ್ತಿಯವರು ಮುಖ್ಯ ಅಪರಾಧಿಗಳೇ ? ಎಂದು ಕೇಳಬಹುದು. ನಿಜವಾಗಿ ವೈದ್ಯಶಾಸ್ತ್ರ ಪರಿ ಣಿತರು ಎಂದು ಹೇಳಿಕೊಳ್ಳುವವರಿಂದ ಜನರಿಗೆ ಅನ್ಯಾಯವಾಗಿದೆ. ಈ ಜನ ರಿಂದ ವೈದ್ಯಾಲಯಕ್ಕೂ ನಷ್ಟವಾಗಿದೆ. ವೈದ್ಯಾಲಯದಲ್ಲಿ ಖರ್ಚು ಹೆಚ್ಚು ಎಂಬ ಭಾವನೆಗೆ ಪರಿಣಿತರೇ ಕಾರಣ. ಈ ಭಾವನೆಯನ್ನು ಹೋಗಲಾಡಿಸುವು ದೆಂತು ? ಈ ಬಗ್ಗೆ ನಾನು ಬಹಳ ಯೋಚಿಸಿದ್ದೇನೆ.

ಪ್ರಮಾಣಬದ್ಧರು ಬೊಬ್ಬೆಯಿಟ್ಟು ತಮ್ಮ ಕಾರ್ಯಕ್ಷೇತ್ರವನ್ನು ಕಾಯ್ದಿಟ್ಟುಕೊಂಡಿರುತ್ತಾರೆ. ಇವರಿಗೆ ಕರುಣೆ, ಮರುಕಯೆಂಬುದಿಲ್ಲ. ಕಾನ್ಸಾಸ್ ನಗರದಲ್ಲಿಯೂ ಈ ಬಗೆಯ ಸಮಸ್ಯೆ ಇದ್ದಿತು.

ಒಟ್ಟಿನಲ್ಲಿ ವೈದ್ಯಾಲಯಗಳಿಂದ, ವೈದ್ಯವೃತ್ತಿನಿಯಮದಿಂದ ಈಗ ಸಾರ್ವಜನಿಕರು ರೋಗಬಾಧೆಗೆ ಹೆಚ್ಚು ಈಡಾಗದೆ ಎಚ್ಚೆತ್ತಿದ್ದಾರೆ. ಸಾಧಾರಣ ಉಪದ್ರವ, ಬೇನೆಯ ಬೇಸರಕ್ಕೆ ಮಂತ್ರವಾದಿಯ ಸಹಾಯ ಬೇಡುತ್ತಾರೆ. "ನಿಮ್ಮನ್ನು ರಕ್ಷಿಸುವೆ, ಉದ್ಧರಿಸುವೆ" ಎಂದು ಹೇಳುವವನ ಬೆನ್ನು ಬೀಳುತ್ತಾರೆ. ಸೋಂಕು ನಮ್ಮನ್ನು ನಗರವನ್ನು, ಮಾನವ ಜನಾಂಗವನ್ನು ಸೂರೆಗೊಳ್ಳದಿರಲಿ. ನಾಗರಿಕತೆ ಮುಂದುವರಿಯುತ್ತಿದ್ದರೂ ಜನರು ಸೋಂಕು ರೋಗ, ಶ್ಲೇಷ್ಮರೋಗ ಕಾಣಿಸಿಕೊಂಡಾಗ ಬೇಗ ಪರಿಹಾರ ಕಂಡುಕೊಳ್ಳದೆ ಪ್ರಾರ್ಥನಾಲಯದಲ್ಲಿ ಮೊರೆಯಿಡುತ್ತಿರುವುದನ್ನು ಕೇಳಿದ್ದೇನೆ. ವಿಷಾಪಹಾರಕ ವಸ್ತುವಿನಿಂದ, ಸಂಸ್ಕರಿಸಿದ ರಕ್ತದ್ರವದಿಂದ, ಒಂದು ನಳಿಗೆಯಿಂದ ಹೆಚ್ಚು ಪ್ರಯೋಜನವಾದೀತು. ವೈದ್ಯ ಎಂದು ಪ್ರಶಸ್ತಿ ಪಡೆದಿರುವವನು, ಸೋಂಕನ್ನು ತಡೆಗಟ್ಟಿ ಪರಿಹಾರಮಾರ್ಗವನ್ನು ತೋರಿಸಬೇಕಾಗಿದೆ.

---

# ಅರ್ಥಕೋಶ

---

ಅಗ್ನಿ ನಿರೋಧಕ : Fireproof

ಅಲ್ಪಕಾಲಿಕ ಕಾಹಿಲೆಗಳು : Ephemeral Diseases

ಅಂಗರಚನಾ ಶಾಸ್ತ್ರ : Anatomy

ಅಂಗಚ್ಛೇದನಾಲಯ : Dissection Room

ಅಂಟುರೋಗ : Contagious Disease

ಅಂಡಾಶಯ ಗಂತಿ : Ovarian Tumour

ಉಗ್ರಬೇನೆ : Malignant Disease

ಉದ್ಭೇದ ಕಾಹಿಲೆಗಳು : Eruptive Diseases

ಏಕಾಣುಜೀವಿ ಶಾಸ್ತ್ರ : Bacteriology

ಕಟಿವಾಯು : Lumbago

ಕರುಳುಬಾಲ ರೋಗ : Appendicitis

ಕೀವುಕಟ್ಟು : Suppurate

ಕೆನ್ನೆಗೂದಲು : Whisker

ಕೆಂಜ್ವರ : Scarlet Fever

ಗಡ್ಡೆಗಂಥಿ : Tumour

ಗಳಗಂಡ : Tonsil

ಗಸೆರೋಗ : Asthma

ಗುಪ್ತ ರೋಗ : Obscure Disease

ಗೂಳಿಕಪ್ಪೆ : Bullfrog

ಚಾರಿತ್ರಿಕ ಶಾರೀರಕ ಲಕ್ಷಣ : Histopathology

ಚಿಕಿತ್ಸಾ ತಂತ್ರ : Therapeutic Way

ಚಿತ್ರ ದಾಖಲೆ : Photo Records

ಚಿತ್ತೋದ್ರೇಕ ರೋಗಿ : Hysteric Patients

ಜಲಜನಕಾಮ್ಲ : Hydrochloric Acid

ಜಾರುಗಾಜು : Slide

ಜೀವಶಾಸ್ತ್ರ : Biology

ಡೋಂಗಿ ವೈದ್ಯ : Pseudo Specialist

ತಾಂತ್ರಿಕ ಚಿಕಿತ್ಸಾರೂಪ : Scientific Treatment

ದಾಕು : Vaccination

ದುಗ್ಧರಸವಾಹಕನಾಳ : Lymph Gland

ನರವ್ಯೂಹದ ಅಸ್ವಸ್ಥತೆ : Neurasthenic

ನಿರ್ವಿಷೀಕೃತ : Aseptic

ಪರಿವೇಷ್ಟನ ಪಟಲ : Peritoneum

ಪ್ರತ್ಯಾಮ್ಲ : Antacid

ಪ್ರಯೋಗಭಾಗ : Practical Branch

ಪ್ರಯೋಗ ಶಸ್ತ್ರವಿದ್ಯೆ : Experimental Surgery

ಭಾರೋತ್ತೋಲನ ಯಂತ್ರ : Weight Lifting Pulley

ಬುಗ್ಗೆಬಾವಿ : Artesian Well

ಬುದ್ಧ್ಯುನ್ಮಾದ : Hysteria

ಮಂತ್ರಗಾರ : Cultist

ಮಾನಸ ಶಾಸ್ತ್ರ : Psychology

ಮಾಂಸಾರ್ಬುದ : Cancer

ಮೂಲಾಂಶಭಾಗ : Fundamental Facts

ರಕ್ತಸ್ರಾವ : Hemorrhage

ರಕ್ತ ಒತ್ತಡ : Blood Pressure

ರೋಗಚಾರಿತ್ರ್ಯ : History of Ailment

ರೋಗನಿದಾನ ತಂತ್ರ : Pathology

ರೋಗನಿದಾನಕುಶಲಿ : Diagnostician

ವ್ಯಾಧಿಕಾರಣ : Aetiology

ವಿಶೇಷತಜ್ಞ : Specialist

ವೇದನ ಪ್ರತಿಬಂಧಿ : Anaesthesia

ವೇದನಾಜಡತೆ : Narcosis

ವೈದ್ಯವಿಜ್ಞಾನ : Medical Science

ವೈದ್ಯಶಾಲೆ : Clinic

ವೈದ್ಯಜ್ಞಾನ : Medical Knowledge

ಶಸ್ತ್ರ ಚಿಕಿತ್ಸಾವರಣ : Operating Room

ಶ್ವಾಸನಾಳದ ಉರಿಯೂತ : Tracheitis

ಶಾಸ್ತ್ರೀಯಭಾಗ : Scientific Branch

ಶೂಲಹರ ಮಾರ್ಗ : Palliative Measure

ಸರ್ವಾಂಶ ವೈದ್ಯ : General Practitioner

ಸವಿಮರ್ಶ ಖಂಡನೆ : Autopsy

ಸಂಧಿವಾತ : Rheumatism

ಸಂಸ್ಕರಿಸಿದ : Sterilized

ಸ್ತ್ರೀರೋಗ ಶಾಸ್ತ್ರವಿಜ್ಞಾನಿ : Gynaecologist

ಸೂಕ್ಷ್ಮಜೀವಿಗಳು : Microbes

ಹೃದ್ರೋಗ : Heart Disease

---

Printed at: Chitra Printery, 26, Sowrastrapet Cross, Bangalore-2